ಪರಮ ದಯಾಮಯನೂ ಕರುಣಾಳುವೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

ಇಸ್ಲಾಮ್ ಒಂದು ಸಾರ್ವಕಾಲಿಕ ಮತ್ತು ಸಾರ್ವಲೌಕಿಕ ಸಂಸ್ಕೃತಿ ಮತ್ತು ನಾಗರಿಕತೆಯನ್ನು ಹೊಂದಿದೆ. ಅನೇಕ ಸಂಸ್ಕೃತಿ ಮತ್ತು ನಾಗರಿಕತೆಗಳು ಈ ಲೋಕದಲ್ಲಿ ಹುಟ್ಟಿ ಅಳಿದು ಹೋಗಿವೆ. ಕೆಲವು ಸಂಸ್ಕೃತಿಗಳ ಪಳೆಯುಳಿಕೆಗಳು ಇದ್ದರೂ ಇನ್ನು ಕೆಲವು ಲೋಕದಿಂದ ನಾಸ್ತಿಯಾಗಿವೆ. ಅನಂತರ ಅವುಗಳಿಗೆ ತಲೆಯೆತ್ತುವ ಸೌಭಾಗ್ಯ ದೊರೆಯಲಿಲ್ಲ. ಆದರೆ ಇಸ್ಲಾಮೀ ಸಂಸ್ಕೃತಿಯು ಇತಿಹಾಸದಲ್ಲಿ ಅನೇಕ ಏಳು-ಬೀಳುಗಳನ್ನು ಕಂಡರೂ ಅನೇಕ ಬಾರಿ ದಮನಿಸಲ್ಪಟ್ಟರೂ ಇಂದಿಗೂ ಅಜೇಯ ಶಕ್ತಿಯಾಗಿ ಮೆರೆದಿದೆ. ಅದನ್ನು ಅಳಿಸಿ ಹಾಕಲು ಮಾಡಲ್ಪಟ್ಟ ಹಾಗೂ ಇಂದಿಗೂ ಮಾಡಲ್ಪಡುವ ಪರಿಶ್ರಮಗಳೆಲ್ಲವೂ ವಿಫಲಗೊಂಡಿವೆಯೆಂಬುದಕ್ಕೆ ಇತಿಹಾಸ ಸಾಕ್ಷಿಯಾಗಿದೆ.

ಒಂದು ಸಂಸ್ಕೃತಿ ಹುಟ್ಟಿಕೊಂಡು ಅದರ ಆಧಾರದಲ್ಲಿ ಒಂದು ನಾಗರಿಕತೆಯು ಅಸ್ತಿತ್ವಕ್ಕೆ ಬಂದರೆ, ಅದು ಇತರ ಸಂಸ್ಕೃತಿಗಳನ್ನು ನುಂಗಿ ಹಾಕುವುದು ರೂಢಿ. ಅವೆಲ್ಲ ಆ ಸಂಸ್ಕೃತಿಯಲ್ಲಿ ಲೀನವಾಗಿ ಬಿಡುತ್ತವೆ ಮತ್ತು ಹೇಳ ಹೆಸರಿಲ್ಲದಂತೆ ಅವು ಅಳಿದು ಹೋಗುತ್ತವೆ. ಆದರೆ ಇಸ್ಲಾಮೀ ಸಂಸ್ಕೃತಿಯ ವಿಶೇಷತೆಯೇನೆಂದರೆ ಯಾವುದಾದರೊಂದು ಜನಾಂಗ ಅದನ್ನು ಸೋಲಿಸಿ ತನ್ನ ಸಂಸ್ಕೃತಿಯನ್ನು ಜಾರಿಗೊಳಿಸಲು ಕ್ರಮ ಕೈಗೊಂಡರೂ ಕೆಲವೇ ಸಮಯದೊಳಗೆ ಅದೇ ಸಂಸ್ಕೃತಿಯ ವಾಹಕರು ತಮ್ಮದೇ ಸಂಸ್ಕೃತಿಯನ್ನು ಕೈಬಿಟ್ಟು ಇಸ್ಲಾಮೀ ಸಂಸ್ಕೃತಿಯನ್ನು ಅಳವಡಿಸಿ ಕೊಂಡಿರುವುದು ಕಂಡುಬರುತ್ತದೆ. ಇಸ್ಲಾಮಿನ ಬದ್ಧ ವೈರಿಗಳಾಗಿದ್ದ ತಾರ್ತಾರಿಗಳು ಇಸ್ಲಾಮಿನ ವಾಹಕರಾಗಿ ಮಾರ್ಪಟ್ಟಿರುವುದು ಒಂದು ಉದಾಹರಣೆ.

ಒಮ್ಮೆ ಅವನತಿ ಹೊಂದಿ ಪುನಃ ಪ್ರಾಬಲ್ಯ ಪಡೆದು ಪ್ರಗತಿಯತ್ತ ಸಾಗುವುದರ ಉದಾಹರಣೆಯು ಪ್ರಸಕ್ತ ಜಾಗತಿಕ ಸನ್ನಿವೇಶದಲ್ಲಿ ಸ್ಪಷ್ಟವಾಗಿ ಗೋಚರಿಸುತ್ತದೆ. ಈಜಿಪ್ಟ್, ತುರ್ಕಿ, ಟುನೀಶ್ಯಾ ಮುಂತಾದ ದೇಶಗಳಲ್ಲಿ ಇಸ್ಲಾಮ್ ಪ್ರಬಲ ಶಕ್ತಿಯಾಗಿ ಮುಂದೆ ಬರುತ್ತಿರುವುದನ್ನು ನಾವು ಕಾಣುತ್ತೇವೆ. ಅಷ್ಟೇ ಅಲ್ಲ, ಇಸ್ಲಾಮೇತರ ಅದರಲ್ಲೂ ಪಾಶ್ಚಾತ್ಯ ಪ್ರೇರಿತ ನಾಸ್ತಿಕ ತತ್ವಸಿದ್ಧಾಂತಗಳ ವಾಹಕರೆಂದು ಗುರುತಿಸಿ ಕೊಂಡಿರುವ ಜಾಗತಿಕ ಮಟ್ಟದ ಅನೇಕ ಗಣ್ಯ ವ್ಯಕ್ತಿಗಳು ಇಸ್ಲಾಮಿನ ತೆಕ್ಕೆಯೊಳಗೆ ಸೇರಿ ಶಾಂತಿ ನೆಮ್ಮದಿಯನ್ನು ಕಾಣುತ್ತಿರುವುದೂ ಒಂದು ಶುಭ ಸೂಚನೆಯಾಗಿದೆ.

ಇಸ್ಲಾಮ್ ಮಾನವ ನಿರ್ಮಿತ ಧರ್ಮವಲ್ಲ, ಅದು ದೇವದತ್ತವಾಗಿದೆ. ಅದು ಹುಟ್ಟು ಹಾಕಿದ ಸಂಸ್ಕೃತಿ ಮತ್ತು ನಾಗರಿಕತೆಯು ಯಾವುದೇ ವರ್ಗ, ವರ್ಣ, ದೇಶ,

ಭಾಷೆಗಳ ಪಕ್ಷಪಾತಿಯಲ್ಲ, ಸರ್ವರಿಗೂ ಹಿತವಾಗಬಲ್ಲ, ಸರ್ವರನ್ನೂ ಒಂದೇ ದೃಷ್ಟಿಯಿಂದ ನೋಡುವ ಇಸ್ಲಾಮೀ ಸಂಸ್ಕೃತಿಯ ಮೂಲಭೂತ ಸ್ವರೂಪ ಹಾಗೂ ಅದರಿಂದ ರೂಪುಗೊಳ್ಳುವ ನಾಗರಿಕತೆಯ ರೂಪುರೇಶೆಗಳ ಹಾಗೂ ಅದು ಮಾನವ ಸಮಾಜದ ಮೇಲೆ ಬೀರುವ ಪ್ರಭಾವ ಮತ್ತು ಪರಿಣಾಮದ ಒಂದು ಸಂಕ್ಷಿಪ್ತ ಚಿತ್ರಣವನ್ನು 'ಇಸ್ಲಾಮೀ ಸಂಸ್ಕೃತಿ ಮತ್ತು ನಾಗರಿಕತೆ' ಎಂಬ ಈ ಕೃತಿಯಲ್ಲಿ ಚರಿತ್ರೆಯ ಕೆಲವು ಘಟನೆಗಳ ಆಧಾರದಲ್ಲಿ ಪ್ರಸ್ತುತ ಪಡಿಸಲಾಗಿದೆ. ಇದರ ಅಧ್ಯಯನವು ಇಸ್ಲಾಮಿನ ಹೆಚ್ಚಿನ ಅಧ್ಯಯನಕ್ಕೆ ಸ್ಫೂರ್ತಿ ನೀಡಲೆಂದು ಹಾರೈಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

ಆರಂಭದಲ್ಲಿ ಮಾನವರೆಲ್ಲರೂ ಒಂದೇ ಸಮುದಾಯವಾಗಿದ್ದರು. ಅನಂತರ ಅವರು ವಿವಿಧ ತತ್ವಾದರ್ಶಗಳನ್ನು ಉಂಟು ಮಾಡಿಕೊಂಡರು. ನಿಮ್ಮ ಪ್ರಭುವಿನ ಕಡೆಯಿಂದ ಒಂದು ವಿಷಯವು ಮೊದಲೇ ತೀರ್ಮಾನವಾಗದಿರುತ್ತಿದ್ದರೆ ಅವರು ಪರಸ್ಪರ ಭಿನ್ನಾಭಿಪ್ರಾಯವಿರಿಸುತ್ತಿರುವುದರ ತೀರ್ಮಾನ ಮಾಡಿ ಬಿಡಲಾಗುತ್ತಿತ್ತು. (ಪವಿತ್ರ ಕುರ್‌ಆನ್, 10:19)

# ಲೌಕಿಕ ಜೀವನ

**ಮಾ**ನವನು ಕೆಲವೊಮ್ಮೆ ತನ್ನನ್ನು ದೊಡ್ಡವನೆಂದು ಭಾವಿಸುತ್ತಾನೆ. ಅಹಂಕಾರ, ಗರ್ವ ಅವನ ಮನಸ್ಸಿನೊಳಗೆ ಹೊಕ್ಕರೆ ತನಗಿಂತ ದೊಡ್ಡ ಅಥವಾ ತನಗೆ ಸಮಾನವಾದ ಯಾವ ಶಕ್ತಿಯೂ ಇಲ್ಲವೆಂದು ಭಾವಿಸಿ ಬಿಡುತ್ತಾನೆ. ಅದರಿಂದಾಗಿ ಅಕ್ರಮ – ಅತ್ಯಾಚಾರ, ಹಿಂಸೆ–ದೌರ್ಜನ್ಯ ಹಾಗೂ ದಂಗೆ – ಕ್ಷೋಭೆಗಳಿಗಿಳಿಯುತ್ತಾನೆ. ತಾನು ಯಾರ ಮುಂದೆಯೂ ವಿಚಾರಣಾರ್ಹನಲ್ಲ, ತಾನು ಸರ್ವತಂತ್ರ ಸ್ವತಂತ್ರನೆಂದು ಭಾವಿಸುತ್ತಾನೆ.

ಮಾನವನು ಇನ್ನೊಂದು ಅತಿರೇಕಕ್ಕಿಳಿದರೆ ತನ್ನನ್ನು ಲೋಕದ ಅತ್ಯಂತ ನಿಕೃಷ್ಟನೆಂದು ಭಾವಿಸಿ ಬಿಡುತ್ತಾನೆ. ಕಲ್ಲು, ಮರ, ನದಿ, ಪರ್ವತ, ಪ್ರಾಣಿ, ಗಾಳಿ, ಬೆಂಕಿ, ಮೋಡ, ಸಿಡಿಲು, ಮಿಂಚು, ಸೂರ್ಯ, ನಕ್ಷತ್ರ ಇತ್ಯಾದಿ ಎಲ್ಲದರ ಮುಂದೆಯೂ ತಲೆ ಬಾಗುತ್ತಾನೆ. ಏಕೆಂದರೆ ಅವುಗಳಲ್ಲಿ ಅವನಿಗೆ ಯಾವುದೇ ಲಾಭ ಅಥವಾ ಹಾನಿ ಕಾಣುತ್ತದೆ. ತನ್ನಂತಹ ಮನುಷ್ಯರಲ್ಲೇ ಕೆಲವೊಮ್ಮೆ ಯಾವುದೇ ಶಕ್ತಿ ಕಂಡರೆ ಅವರನ್ನು ದೇವರು ಮತ್ತು ಆರಾಧ್ಯರೆಂದು ಭಾವಿಸಲೂ ಹೇಸುವುದಿಲ್ಲ.

## ಮಾನವನ ವಾಸ್ತವಿಕತೆ

ಈ ಎರಡೂ ಅತಿರೇಕ ಚಿಂತನೆಗಳನ್ನು ಇಸ್ಲಾಮ್ ಖಡಾಖಂಡಿತವಾಗಿ ತಪ್ಪೆಂದು ಸಾರುತ್ತದೆ. ಮಾನವನ ವಾಸ್ತವಿಕತೆಯನ್ನು ಅದು ಈ ರೀತಿ ಮುಂದಿಡುತ್ತದೆ.

**"ಇನ್ನು ಮನುಷ್ಯನು, ತಾನು ಯಾವ ವಸ್ತುವಿನಿಂದ ಸೃಷ್ಟಿಸಲ್ಪಟ್ಟಿರುವೆನು ಎಂಬುದನ್ನಾದರೂ ಸ್ವಲ್ಪ ನೋಡಿಕೊಳ್ಳಲಿ. ಅವನು ಒಂದು ಚಿಮ್ಮುವ ದ್ರವದಿಂದ ಸೃಷ್ಟಿಸಲ್ಪಟ್ಟಿದ್ದಾನೆ. ಅದು ಬೆನ್ನು ಮತ್ತು ಎದೆಯ ಮೂಳೆಗಳ ನಡುವಿನಿಂದ ಹೊರಡುತ್ತದೆ." (ಪವಿತ್ರ ಕುರ್‌ಆನ್, 86:5–7)** ಈ ರೀತಿ ಮಾನವನ ವಾಸ್ತವಿಕತೆಯನ್ನು ಸಾರುವ ಅನೇಕ ವಚನಗಳು ಕುರ್‌ಆನಿನಲ್ಲಿ ಅಲ್ಲಲ್ಲಿ ಹರಡಿಕೊಂಡಿವೆ. ಉದಾ: 16:78, 17:67–69, 22:5, 32:7–9, 36:77–78, 56:58–74, 82:6–8

ಈ ವಚನಗಳಲ್ಲಿ ಮಾನವನ ಗರ್ವವನ್ನು ಮುರಿದು ಹಾಕಲಾಗಿದೆ. ಒಂದೆಡೆ, ಮಾನವನಿಗೆ ತನ್ನ ವಾಸ್ತವಿಕತೆಯನ್ನು ಅರಿಯಲು ಕರೆ ನೀಡಲಾಗಿದೆ. ಒಂದು ತುಚ್ಛ ಕೊಳಕು

ದ್ರವದ ಒಂದು ಬಿಂದು ತಾಯಿಯ ಗರ್ಭದಲ್ಲಿ ವಿವಿಧ ಕೋಳಕುಗಳಿಂದ ಬೆಳೆದು ಒಂದು ಮಾಂಸ ಮುದ್ದೆಯಾಗುತ್ತದೆ. ದೇವನಿಚ್ಛಿಸಿದರೆ ಅದಕ್ಕೆ ಜೀವವನ್ನೇ ಹಾಕದೇ ಅಪೂರ್ಣ ರೂಪದಲ್ಲಿ ಹೊರ ತೆಗೆಯಬಲ್ಲನು. ಆದರೆ ಅವನು ತನ್ನ ಮಹಿಮೆಯಿಂದ ಅದಕ್ಕೆ ಜೀವ ಹಾಕುತ್ತಾನೆ. ಪಂಚೇಂದ್ರಿಯಗಳನ್ನು ನೀಡಿ ಮಾನವನನ್ನು ಸಿದ್ಧಗೊಳಿಸುತ್ತಾನೆ. ಅವು ಈ ಲೋಕದ ಬದುಕಿಗೆ ಅಗತ್ಯವಾಗಿರುತ್ತವೆ. ಈ ರೀತಿ ನೀನು ಲೋಕಕ್ಕೆ ಕಾಲಿಡುತ್ತಿ. ಆದರೆ ಆರಂಭದಲ್ಲಿ ನೀನು ಒಂದು ಶಿಶುವಾಗಿದ್ದೆ. ನಿನ್ನ ಅಗತ್ಯಗಳನ್ನು ಪೂರೈಸುವ ಯಾವುದೇ ಶಕ್ತಿ ನಿನ್ನಲ್ಲಿರಲಿಲ್ಲ. ನೀನು ಅಲ್ಲಾಹನ ಮಹಿಮೆಯಿಂದಲೇ ಬೆಳೆದು ಯೌವನಕ್ಕೆ ತಲಪುತ್ತಿ. ನೀನು ಶಕ್ತಿ–ಸಾಮರ್ಥ್ಯಗಳನ್ನು ಹೊಂದಿರುತ್ತಿ. ಆದರೆ ಯೌವನದಿಂದ ವೃದ್ಧಾಪ್ಯಕ್ಕೆ ತಲಪಿದಾಗ ನಿನ್ನ ಶಕ್ತಿಗಳೆಲ್ಲ ಕುಂದಿಹೋಗುತ್ತವೆ. ಕೊನೆಗೊಮ್ಮೆ ನಿನ್ನ ಅವಸ್ಥೆಯು ಶಿಶುವಿನಂತಾಗಿ ಬಿಡುತ್ತದೆ. ನೀನು ಯಾರಿಗೂ ಬೇಡದವನಾಗಿ ಬಿಡುತ್ತಿ. ಕೊನೆಗೊಮ್ಮೆ ನಿನ್ನ ಬದುಕೇ ಆರಿ ಹೋಗುತ್ತದೆ. ಸೊತ್ತು, ಸಂತಾನ, ಬಂಧು – ಮಿತ್ರಾದಿಗಳನ್ನೆಲ್ಲ ತೊರೆದು ನೀನು ಗೋರಿಗೆ ತಲಪುತ್ತಿ. ಇಲ್ಲಿನ ಸಂಕ್ಷಿಪ್ತ ಜೀವನದಲ್ಲಿ ಒಂದು ಕ್ಷಣದ ಮಟ್ಟಿಗಾದರೂ ನೀನು ನಿನ್ನಿಷ್ಟದಂತೆ ಬದುಕಿರಲು ಸಾಧ್ಯವಿರಲಿಲ್ಲ. ನಿನ್ನ ಶಕ್ತಿ–ಸಾಮರ್ಥ್ಯಗಳೂ ಸೇರಿದಂತೆ ಬದುಕಿಗೆ ಆಗತ್ಯವಿರುವ ಯಾವ ವಸ್ತುವನ್ನೂ ನೀನಾಗಿ ಸೃಷ್ಟಿಸಿದುದಲ್ಲ. ಈ ಗಾಳಿ, ನೀರು, ಬೆಂಕಿ, ಭೂಮಿಯ ಉತ್ಪನ್ನಗಳೆಲ್ಲವೂ ನಿನ್ನ ಬದುಕಿಗೆ ಅಗತ್ಯವಾಗಿದ್ದರೂ ಅವು ನಿನ್ನ ಆಜ್ಞೆಗಳಿಗೆ ಅಧೀನವಾಗಿಲ್ಲ. ಅವು ತಿರುಗಿ ಬಿದ್ದರೆ ನಿನ್ನ ಯಾವ ಆಟವೂ ನಡೆಯಲಾರದು. ಒಂದು ಬಿರುಗಾಳಿಯ ಹೊಡೆತ ನಿನ್ನ ನಾಡುಗಳೆಲ್ಲವನ್ನೂ ಬುಡಮೇಲು ಮಾಡಬಲ್ಲದು. ಒಂದು ನೆರೆಯುಬ್ಬರ ನಿನ್ನನ್ನು ಮುಳುಗಿಸಿ ಬಿಟ್ಟೀತು. ಒಂದು ಭೂಕಂಪವು ನಿನ್ನದೆಲ್ಲವನ್ನೂ ನೆಲಸಮ ಮಾಡಿ ಬಿಡಬಹುದು. ಆದರೆ ನೀನಾದರೋ ಅದೆಲ್ಲವೂ ನಿನ್ನದೆಂದೇ ಭಾವಿಸಿ ಬೀಗುತ್ತಿರುವೆ. ಯಾವ ಶಕ್ತಿಯನ್ನೂ ಲೆಕ್ಕಿಸುವುದಿಲ್ಲ. ಫಿರ್‌ಔನ್ ಮತ್ತು ನಮ್ರೂದನಂತೆ ದಬ್ಬಾಳಿಕೆ ನಡೆಸುತ್ತಿರುವೆ. ದೇವನೆದುರು ಬಂಡಾಯವೇಳುತ್ತಿರುವೆ. ದೇವನ ದಾಸನಾಗಿ ಆರಾಧ್ಯನೆಂಬಂತೆ ಮೆರೆದು ಭೂಮುಖದ ಮೇಲೆ ಕ್ಷೋಭೆಯುಂಟು ಮಾಡುತ್ತಿರುವೆ.

## ಮಾನವನ ಸ್ಥಾನಮಾನ

ಮಾನವನ ದುರಹಂಕಾರದ ಕತೆ ಇದಾದರೆ, ಇಸ್ಲಾಮ್ ಮಾನವನೊಂದಿಗೆ, ನೀನು ನಿನ್ನನ್ನು ಭಾವಿಸಿರುವಷ್ಟು ನಿಕೃಷ್ಟನೂ ಅಲ್ಲವೆಂದು ತಿಳಿಸುತ್ತದೆ. ಭೂಮಿಯಲ್ಲಿ ಎಷ್ಟೆಲ್ಲ ವಸ್ತುಗಳಿವೆಯೋ ಅವೆಲ್ಲವನ್ನೂ ನಿನ್ನ ಸೇವೆ ಮತ್ತು ಪ್ರಯೋಜನಕ್ಕಾಗಿ ನಿನಗೆ ಅಧೀನಗೊಳಿಸಲಾಗಿದೆ. ನಿನಗೆ ಅವೆಲ್ಲವುಗಳಿಗಿಂತ ಶ್ರೇಷ್ಠತೆ ದಯಪಾಲಿಸಲಾಗಿದೆ. ಹಾಗಿರುವಾಗ ನೀನು ಅವುಗಳ ಯಜಮಾನನಾಗಿರುತ್ತಾ ಅವುಗಳ ಮುಂದೆಯೇ ತಲೆಬಾಗುವೆಯಾ? ನಿನ್ನ ಅನ್ನದಾತರೆಂದು ಕೈಮುಗಿಯುವೆಯಾ? ಅವರಿಂದ ಸಹಾಯ

ಯಾಚಿಸುವೆಯಾ? ಅವರಿಗೆ ಹೆದರುವೆಯಾ? ಅವುಗಳ ಗುಣಗಾನ ಮಾಡುವೆಯಾ? ಈ ರೀತಿ ನಿನ್ನನ್ನು ನೀನೇ ಕೀಳಾಗಿಸುತ್ತಿ, ನಿನ್ನ ಸ್ಥಾನವನ್ನು ಕುಗ್ಗಿಸುತ್ತಿ. ಸ್ವಯಂ ಗುಲಾಮರ ಗುಲಾಮನಾಗಿರುತ್ತಿ. ಪವಿತ್ರ ಕುರ್‌ಆನ್ ಈ ವಾಸ್ತವಿಕತೆಯನ್ನು ಅಲ್ಲಲ್ಲಿ ವಿವರಿಸಿದೆ. ಉದಾ: 17:70, 22:65, 16:5-18

## ಮಾನವನು ದೇವನ ಪ್ರತಿನಿಧಿ

ಮಾನವನು ತಾನೇ ತನ್ನನ್ನು ಭಾವಿಸುವಷ್ಟು ಉನ್ನತನೂ ಅಲ್ಲ, ತನ್ನನ್ನು ತಾನೇ ಮಾಡಿರುವಷ್ಟು ಕೀಳ್ಮಟ್ಟದವನೂ ಅಲ್ಲವೆಂದಿರುವಾಗ ಅವನ ನೈಜ ಸ್ಥಾನವೇನು? ನಿಜವಾಗಿ ದೇವನು ಮಾನವನನ್ನು ಭೂಮಿಯಲ್ಲಿ ತನ್ನ ಪ್ರತಿನಿಧಿಯಾಗಿ ಮಾಡಿದನು. ದೇವಚರರಿಗಿಂತ ಹೆಚ್ಚು ಜ್ಞಾನವನ್ನು ನೀಡಿದನು. ದೇವಚರರ ಜಪ-ತಪಗಳಿಗಿಂತ ಮಾನವನ ವಿದ್ಯೆ-ಜ್ಞಾನವೇ ಶ್ರೇಷ್ಠವೆಂದು ಸಾರಿದನು. ದೇವಚರರಿಂದ ಮಾನವ(ಆದಮ್)ನಿಗೆ ಸಾಷ್ಟಾಂಗವೆರಗಿಸಿದನು. ಈ ರೀತಿ ಮಾನವನ ಶ್ರೇಷ್ಠತೆಯನ್ನು ಸಾಬೀತು ಪಡಿಸಿದನು. ಇಬ್ಲೀಸನು ಸಾಷ್ಟಾಂಗವೆರಗಲು ನಿರಾಕರಿಸಿದನು. ಈ ರೀತಿ ದುಷ್ಟಶಕ್ತಿ ಮಾನವನಿಗೆ ಅಧೀನಗೊಳ್ಳಲಿಲ್ಲ. ಮಾನವ ನಿಜವಾಗಿ ಒಂದು ಮಣ್ಣಿನ ಪ್ರತಿಮೆಯಾಗಿದ್ದನು. ದೇವನು ಅದಕ್ಕೆ ಆತ್ಮವನ್ನೂದಿದನು. ಅವನಿಗೆ ನೀಡಿದ ಜ್ಞಾನದಿಂದ ದೇವನ ಪ್ರತಿನಿಧಿತ್ವವನ್ನು ವಹಿಸಲು ಅವನನ್ನು ಅರ್ಹನನ್ನಾಗಿ ಮಾಡಿದನು. ಮಾನವನ ಈ ಶ್ರೇಷ್ಠತೆಯನ್ನು ದೇವಚರರು ಒಪ್ಪಿಕೊಂಡರು. ಶೈತಾನನು ಒಪ್ಪದ ಕಾರಣ ಶಪಿತನಾದನು. ಆದರೆ ಅಂತ್ಯ ದಿನದ ವರೆಗೆ ಮಾನವರನ್ನು ದಾರಿ ತಪ್ಪಿಸುವುದಾಗಿ ಅವನು ದೇವನಿಂದ ವಾಗ್ದಾನ ಪಡೆದನು. ಈ ರೀತಿ ಅವನು ಮಾನವನನ್ನು ಪುಸಲಾಯಿಸಿ ದಾರಿ ತಪ್ಪಿಸಿ ಸ್ವರ್ಗದಿಂದ ಹೊರಹಾಕಿಸಿದನು. ಅಂದಿನಿಂದ ಮಾನವ ಮತ್ತು ಶೈತಾನನ ಮಧ್ಯೆ ಎಡೆಬಿಡದೆ ಸಂಘರ್ಷ ಜಾರಿಯಲ್ಲಿದೆ. ಅಲ್ಲಾಹನು ಮಾನವನಿಗೆ ''ನನ್ನ ವತಿಯಿಂದ ಬಂದ ಸನ್ಮಾರ್ಗವನ್ನು ನೀನು ಅನುಸರಿಸಿದರೆ ಶಾಶ್ವತ ತಾಣವಾದ ಸ್ವರ್ಗಕ್ಕೆ ಹೋಗುವೆ. ಅನ್ಯಥಾ ನಿನ್ನ ಸನಾತನ ವೈರಿಯಾದ ಶೈತಾನನ ಆಜ್ಞೆಯನ್ನು ಪಾಲಿಸಿದರೆ ನಿನ್ನ ತಾಣ ನರಕವಾಗಿರುವುದು'' ಎಂದು ಹೇಳಿದನು. **(ಪವಿತ್ರ ಕುರ್‌ಆನ್, 2:30-36)**

## ಪ್ರತಿನಿಧಿತ್ವವೆಂದರೇನು?

ಮಾನವನ ನೆಲೆ ಈ ಲೋಕದಲ್ಲಿ ಖಲೀಫ(ಪ್ರತಿನಿಧಿ)ನದ್ದಾಗಿದೆ. ತಾನು ಯಾರ ಪ್ರತಿನಿಧಿಯೋ ಆತನನ್ನು ಮಾತ್ರ ಅನುಸರಿಸುವುದು, ಬೇರೆ ಯಾರನ್ನೂ ಅನುಸರಿಸದಿರುವುದು ಪ್ರತಿನಿಧಿಯ ಪ್ರಥಮ ಕರ್ತವ್ಯವಾಗಿದೆ. ಅವನು ತನ್ನ ಯಜಮಾನನ ಸೊತ್ತನ್ನು ಉಪಯೋಗಿಸಬಹುದು. ಅವನು ಪ್ರಜೆಗಳನ್ನು ಆಳಬಹುದು. ಅವರಿಂದ ಸೇವೆ ಪಡೆಯಬಹುದು. ಅವರ ಮೇಲ್ವಿಚಾರಣೆ ನಡೆಸಬಹುದು. ಆದರೆ ಆತ ಸ್ವಯಂ ಯಜಮಾನನಾಗಿ

ಮರೆಯುವಂತಿಲ್ಲ, ಇತರ ಯಾರನ್ನೂ ಅವನು ಅನುಸರಿಸುವಂತಿಲ್ಲ, ಒಂದು ವೇಳೆ ಹಾಗೆ ಮಾಡಿದರೆ ಅವನು ಬಂಡುಕೋರನೆನಿಸಬಹುದು. ಅವನಿಗೆ ನೀಡಲ್ಪಟ್ಟ ಎಲ್ಲ ವಸ್ತುಗಳಿಗೆ ಅವನು ಮೇಲ್ವಿಚಾರಕನಾಗಿದ್ದಾನೆ. ಅವುಗಳನ್ನು ನೈಜ ಯಜಮಾನನ ಆದೇಶಗಳ ಪ್ರಕಾರವೇ ಬಳಸಬೇಕು. ಇದರಲ್ಲಿ ಯಾವುದೇ ವಂಚನೆ ಮಾಡದಿದ್ದರೆ, ಅವನ ಆದೇಶಗಳ ಪ್ರಕಾರ ನಡೆದರೆ ಅವನು ಪ್ರಾಮಾಣಿಕ ಪ್ರತಿನಿಧಿಯೆಂಬ ನೆಲೆಯಲ್ಲಿ ಯಜಮಾನನಿಂದ ಬಹುಮಾನ ಪಡೆಯಬಲ್ಲನು. ಇದಕ್ಕೆ ವ್ಯತಿರಿಕ್ತವಾಗಿ ನಡೆದರೆ ಅವನ ಕೋಪ - ಶಾಪಗಳಿಗೆ ಪಾತ್ರನಾಗುವನು ಮತ್ತು ಕಠಿಣ ಶಿಕ್ಷೆಗೆ ಅರ್ಹನಾಗುವನು.

ಅಲ್ಲಾಹನ ಪ್ರತಿನಿಧಿಯೆಂಬ ನೆಲೆಯಲ್ಲಿ ಮಾನವನ ಸ್ಥಾನವು ಲೋಕದ ಎಲ್ಲ ವಸ್ತುಗಳಿಗಿಂತ ಅತ್ಯುನ್ನತವಾಗಿದೆ. ಲೋಕದ ಎಲ್ಲ ವಸ್ತುಗಳೂ ಅವನಿಗೆ ಅಧೀನವಾಗಿವೆ. ಅವುಗಳನ್ನು ಬಳಸುವುದು ಮತ್ತು ಯಜಮಾನನು ತೋರಿಸಿದ ರೀತಿಯಲ್ಲಿ ಅವುಗಳ ಸೇವೆ ಪಡೆಯುವುದು ಅವನ ಕೆಲಸವಾಗಿದೆ. ಇದಕ್ಕೆ ವ್ಯತಿರಿಕ್ತವಾಗಿ ಮಾನವನು ತನ್ನ ಅಧೀನದಲ್ಲಿರುವವರಿಗೆ ಬಾಗುವುದು ಅವನಿಗೆ ಅಪಮಾನವಾಗಿದೆ. ಹಾಗೆ ಮಾಡಿದರೆ ಅವನು ತನ್ನ ಮೇಲೆಯೇ ಅನ್ಯಾಯವೆಸಗಿದಂತೆ ಅಥವಾ ಪ್ರತಿನಿಧಿಯೆಂಬ ಸ್ಥಾನವನ್ನು ಸ್ವಯಂ ಕೈ ಬಿಟ್ಟಂತಾಗುವುದು. ಒಬ್ಬ ವ್ಯಕ್ತಿ ಅಥವಾ ಗುಂಪು ಮಾತ್ರ ದೇವನ ಪ್ರತಿನಿಧಿಯಲ್ಲ, ಬದಲಾಗಿ ಇಡೀ ಮಾನವ ಕುಲವೇ ದೇವನ ಪ್ರತಿನಿಧಿಯಾಗಿದೆ. ಆದ್ದರಿಂದ ಎಲ್ಲರೂ ಪರಸ್ಪರ ಸಮಾನರು. ಯಾರೂ ಶ್ರೇಷ್ಠರಲ್ಲ, ಯಾರೂ ನೀಚರಲ್ಲ. ಆದ್ದರಿಂದ ಯಾರೂ ಇನ್ನೊಬ್ಬನನ್ನು ತನ್ನ ಅಧೀನಗೊಳಿಸುವಂತಿಲ್ಲ, ಅವನನ್ನು ತನ್ನ ಮುಂದೆ ತಲೆಬಾಗಿಸುವ ಅಧಿಕಾರ ಅವನಿಗಿಲ್ಲ, ಏನಾದರೂ ಅವನು ಇನ್ನೊಬ್ಬನೊಂದಿಗೆ ಮಾಡಿಸಬಹುದಾದಲ್ಲಿ ಅದು ದೇವನ ಆಜ್ಞೆಗನುಸಾರವಾಗಿರುವುದು. ಅದನ್ನು ಪಾಲಿಸುವವನೂ ದೇವನ ಆಜ್ಞೆಗನುಸಾರವಾಗಿಯೇ ಪಾಲಿಸುವನು.

ಪ್ರತಿನಿಧಿತ್ವವು ಪ್ರತಿಯೊಬ್ಬ ಮಾನವನ ಹೊಣೆಗಾರಿಕೆಯಾಗಿದೆ. ಅದು ಸಾಮೂಹಿಕ ಹೊಣೆಗಾರಿಕೆಯಲ್ಲ, ಆದ್ದರಿಂದ ಪ್ರತಿಯೊಬ್ಬನು ತನ್ನ ಹೊಣೆಗಾರಿಕೆಗೆ ತಾನೇ ಪ್ರಶ್ನಾರ್ಹನಾಗಿರುವನು. ಒಬ್ಬನ ಕರ್ಮದ ಹೊಣೆ ಇನ್ನೊಬ್ಬನ ಮೇಲೆ ಹೇರಲಾಗದು. ಅದೇ ರೀತಿ ಒಬ್ಬನ ಕರ್ಮದ ಫಲವು ಇನ್ನೊಬ್ಬನಿಗೆ ಸಿಗಲಾರದು.

## ಜೀವನದ ಇಸ್ಲಾಮೀ ಕಲ್ಪನೆ

ಮಾನವನನ್ನು ದೇವನ ಪ್ರತಿನಿಧಿಯೆಂದು ಹೇಳಿರುವುದರ ಅರ್ಥವೇನೆಂದರೆ ದೇವನು ತನ್ನ ಸೃಷ್ಟಿಗಳೊಂದಿಗೆ ಯಾವ ರೀತಿ ವರ್ತಿಸುತ್ತಾನೋ ಅದೇ ರೀತಿಯಲ್ಲಿ ಅವನೂ ಸೃಷ್ಟಿಗಳೊಂದಿಗೆ ವರ್ತಿಸಬೇಕೆಂದಾಗಿದೆ. ಅಂದರೆ ಅವನು ದೇವನು ನೀಡಿರುವ ಸಾಮರ್ಥ್ಯಕ್ಕನುಸಾರ ಇತರ ಮನುಷ್ಯರೊಂದಿಗೆ ಪ್ರೀತಿ-ಕರುಣೆಯೊಂದಿಗೆ, ಅಗತ್ಯಬಿದ್ದರೆ

ಕೆಲವೊಮ್ಮೆ ಕಠಿಣವಾಗಿ ವರ್ತಿಸಬೇಕಾಗಿದೆ. ಆದರೆ ಇದು ತಾನು ಈ ಲೋಕದಲ್ಲಿ ನಿರಂಕುಶನಲ್ಲ; ಆ ದೇವನ ಪ್ರತಿನಿಧಿಯಾಗಿದ್ದೇನೆಂದು ತಿಳಿದಾಗ ಮಾತ್ರ ಸಾಧ್ಯ. ಇದೇ ಪ್ರತಿನಿಧಿತ್ವದ ಪದವಿಯು ಲೋಕದ ಎಲ್ಲ ವಸ್ತುಗಳೊಂದಿಗೂ ಅವನ ಸಂಬಂಧದ ಸ್ವರೂಪವನ್ನು ನಿರ್ಧರಿಸುತ್ತದೆ.

ಮನುಷ್ಯ ಸ್ವಯಂ ಅಧಿಕಾರ ಹೊಂದಿದವನಲ್ಲ; ಬದಲಾಗಿ ಅಲ್ಲಾಹನು ನೀಡಿದ ಅಧಿಕಾರವನ್ನು ಮಾತ್ರ ಹೊಂದಿದವನೆಂದು ಸಾರುವಂತಹ ಅನೇಕ ವಚನಗಳು ಕುರ್‌ಆನಿನಲ್ಲಿವೆ. ಉದಾ: 3:26, 6:57, 162, 165, 7:3, 129, 38:26, 95:8

ಪ್ರಸ್ತುತ ವಚನಗಳ ಮೂಲಕ ತಿಳಿಯುವುದೇನೆಂದರೆ ಮಾನವನ ಅಧಿಕಾರಕ್ಕೊಪ್ಪಿಸಲಾದ ಯಾವ ವಸ್ತುವೂ ಅವನದಲ್ಲ, ಅವನ ಜೀವಕ್ಕೂ ಅವನು ಒಡೆಯನಲ್ಲ, ನೈಜ ಒಡೆಯ ಮತ್ತು ಸಾರ್ವಭೌಮ ಅಲ್ಲಾಹನಾಗಿದ್ದಾನೆ. ಮಾನವನಿಗೆ ತನ್ನಿಷ್ಟದಂತೆ ಅವುಗಳನ್ನು ಬಳಸುವ ಅಧಿಕಾರವಿಲ್ಲ, ಅವನು ಕೇವಲ ದೇವನ ಪ್ರತಿನಿಧಿಯಾಗಿದ್ದಾನೆ. ಒಡೆಯನ ಆದೇಶ ಪ್ರಕಾರ ಅವನು ಯಾವುದೇ ವಸ್ತುವನ್ನು ಅವನು ತೋರಿಸಿದ ರೀತಿಯಲ್ಲಿ ಮಾತ್ರ ಬಳಸಲು ಬಾಧ್ಯಸ್ತನು, ತನ್ನ ಮೇರೆಯನ್ನು ಮೀರಿ ವರ್ತಿಸಿದರೆ ಅವನು ಬಂಡುಕೋರನೆನಿಸುವನು.

ಮಾನವನು ದೇವನ ಪ್ರತಿನಿಧಿಯಾಗಿರುವಾಗ ಅವನ ಸಾರ್ವಭೌಮತೆಯನ್ನು ಒಪ್ಪಿಕೊಂಡು ತನ್ನ ನೈಜ ನೆಲೆ(ವಿಶ್ವಸ್ಥ)ಯನ್ನು ಅರಿತುಕೊಂಡು ಬದುಕಿದರೆ ಈ ಲೋಕದಲ್ಲಿ ಅವನು ವಿಜಯಿಯಾಗುವನು. ಈ ಸ್ಥಾನಮಾನವನ್ನು ಒಪ್ಪಿಕೊಳ್ಳದೆ ದೇವನ ಆಡಳಿತದಲ್ಲಿ ತನ್ನ ಮನಬಂದಂತೆ ವರ್ತಿಸಿದರೆ ಅದು ಬಂಡಾಯವೆನಿಸುವುದು. ಓರ್ವ ಬಂಡುಕೋರನು ಒಂದು ರಾಷ್ಟ್ರದಲ್ಲಿ ಎಷ್ಟೇ ಉತ್ತಮ ಕೆಲಸಗಳನ್ನು ಮಾಡಿದರೂ ಅವನ ಮೇಲಿರುವ ಕಳಂಕ ತೊಡೆದು ಹೋಗಲಾರದು. ಅವನ ಚಾರಿತ್ರ್ಯ ಎಷ್ಟೇ ಉತ್ತಮವಾಗಿರಲಿ, ಅವನು ಬಂಡಾಯ ಮಾಡಿ ಉತ್ತಮ ಕಾರ್ಯಗಳನ್ನೇ ಮಾಡಲಿ. ಏಕೆಂದರೆ ಅವನು ಮೂಲದಲ್ಲೇ ತಪ್ಪು ಮಾಡಿದ್ದಾನೆ. ಆದುದರಿಂದ ಅವನ ಸತ್ಕರ್ಮಗಳು ಯಾವುದೂ ಸಾಮ್ರಾಟನ ಬಳಿ ಸ್ವೀಕೃತವಾಗದು. ಅದನ್ನೇ ಕುರ್‌ಆನ್ ಈ ರೀತಿ ಹೇಳಿದೆ. **"ಸತ್ಯವಿಶ್ವಾಸ ನೀತಿಯಲ್ಲಿ ನಡೆಯಲು ನಿರಾಕರಿಸಿದವನ ಜೀವನದ ಸಂಪೂರ್ಣ ಕರ್ಮವು ವ್ಯರ್ಥವಾಗುವುದು ಮತ್ತು ಅವನು ಪರಲೋಕದಲ್ಲಿ ದಿವಾಳಿಕೋರನಾಗುವನು."** **(ಪವಿತ್ರ ಕುರ್‌ಆನ್, 5:5)**

## ಈ ಲೋಕವು ಬಳಸಲಿಕ್ಕಿರುವುದಾಗಿದೆ

ಈ ಲೋಕ ಮತ್ತು ಇದರಲ್ಲಿರುವ ಸಕಲವನ್ನೂ ಮಾನವನಿಗಾಗಿ ಸೃಷ್ಟಿಸಲಾಗಿದೆ. ಅವನು ಅದನ್ನು ಬಳಸಬೇಕು. **"ಭೂಮಿಯಲ್ಲಿರುವುದನ್ನೆಲ್ಲ ನಿಮಗಾಗಿಯೇ ಸೃಷ್ಟಿಸಿದವನು ಆತನೇ" (ಪವಿತ್ರ ಕುರ್‌ಆನ್, 2:29)** ಇದು ತೊರೆಯುವುದಕ್ಕಾಗಿರುವುದಲ್ಲ, ಇದರಿಂದ ದೂರ ಓಡುವುದೂ ಭೂಷಣವಲ್ಲ, ಇಲ್ಲಿನ ಅನುಗ್ರಹ - ಅಲಂಕಾರಗಳು, ವ್ಯಾಪಾರ-

ವ್ಯವಹಾರಗಳು ತನ್ನ ಮೇಲೆ ನಿಷಿದ್ಧಗೊಳಿಸಲಿಕ್ಕಿರುವುದಲ್ಲ, ಇದೆಲ್ಲವನ್ನೂ ಮಾನವನು ಬಳಸಬೇಕು. ಚೆನ್ನಾಗಿ ಬಳಸಬೇಕು. ಆದರೆ ಒಳಿತು – ಕೆಡುಕು, ಶುದ್ಧ-ಅಶುದ್ಧ ಸೂಕ್ತ-ಅಸೂಕ್ತ, ಉಚಿತ-ಅನುಚಿತಗಳ ವ್ಯತ್ಯಾಸವನ್ನು ಚೆನ್ನಾಗಿ ಅರಿತು ಉತ್ತಮವಾದುದನ್ನು ಮಾತ್ರ ಬಳಸಬೇಕು. ಅವನಿಗೆ ಕಣ್ಣು, ಕಿವಿ, ಮೆದುಳನ್ನು ನೀಡಲಾಗಿದೆ. ಅವುಗಳನ್ನು ಸರಿಯಾಗಿ ಉಪಯೋಗಿಸದಿದ್ದರೆ ಅಥವಾ ಉಪಯೋಗಿಸಿದರೂ ತಪ್ಪಾದ ರೀತಿಯಲ್ಲಿ ಉಪಯೋಗಿಸಿದರೆ ಅವನಿಗೂ ಪ್ರಾಣಿಗಳಿಗೂ ವ್ಯತ್ಯಾಸವಿರಲಾರದು. ಪವಿತ್ರ ಕುರ್‌ಆನ್ ಈ ರೀತಿ ಹೇಳುತ್ತದೆ:

**"ಓ ಪೈಗಂಬರರೇ, ಅವರೊಡನೆ ಕೇಳಿರಿ- ಅಲ್ಲಾಹನು ತನ್ನ ದಾಸರಿಗಾಗಿ, ಹೊರ ತೆಗೆದಿರುವ ವಸ್ತ್ರಭೂಷಣಗಳನ್ನೂ ಶುದ್ಧ ಆಹಾರ ಸಾಮಗ್ರಿಗಳನ್ನೂ ನಿಷಿದ್ಧಗೊಳಿಸಿದವನಾರು? ಹೇಳಿರಿ: ಇವೆಲ್ಲ ವಸ್ತುಗಳೂ ಇಹಜೀವನದಲ್ಲೂ ಸತ್ಯವಿಶ್ವಾಸಿಗಳಿಗಾಗಿರುತ್ತವೆ ಮತ್ತು ಪುನರುತ್ಥಾನ ದಿನದಲ್ಲಂತು ಇವು ಕೇವಲ ಅವರಿಗಾಗಿಯೇ ಮೀಸಲಾಗಿರುವುವು."**

**(ಪವಿತ್ರ ಕುರ್‌ಆನ್, 7:32)**

ಆದ್ದರಿಂದಲೇ ಸನ್ಯಾಸ ಹಾಗೂ ವೈರಾಗ್ಯವನ್ನು ನಿಷೇಧಿಸಲಾಗಿದೆ. **"ಸನ್ಯಾಸವನ್ನು ಅವರು ತಾವೇ ಆವಿಷ್ಕರಿಸಿಕೊಂಡರು. ನಾವು ಅದನ್ನು ಅವರ ಮೇಲೆ ಕಡ್ಡಾಯಗೊಳಿಸಿರಲಿಲ್ಲ, ಆದರೆ ಅಲ್ಲಾಹನ ಸಂಪ್ರೀತಿಯ ಅಭಿಲಾಷೆಯಿಂದ ಸ್ವತಃ ಅವರೇ ಈ ನವೀನಾಚಾರವನ್ನು ಆರಂಭಿಸಿಕೊಂಡರು." (ಪವಿತ್ರ ಕುರ್‌ಆನ್, 57:27)**

ಆದರೆ ಇದಕ್ಕೆ ಇನ್ನೊಂದು ಮುಖವಿದೆ. ಅಂದರೆ ನೀವು ಲೋಕಕ್ಕಾಗಿರುವವರಲ್ಲ, ಈ ಲೋಕವೂ ಇರುವುದು ನಿಮ್ಮನ್ನು ಬಳಸುವುದಕ್ಕೋ ನಿಮ್ಮ ಅಸ್ತಿತ್ವವನ್ನು ಅದರಲ್ಲಿ ಲೀನಗೊಳಿಸಲಿಕ್ಕೋ ಅಲ್ಲ, ನೀವು ಈ ಲೋಕದಲ್ಲಿ ಶಾಶ್ವತವಾಗಿರುವಿರೆಂಬ ಮೋಸಕ್ಕೂ ಒಳಗಾಗಬಾರದು ಎಂದು ಹೇಳಲಾಗಿದೆ. ಇಲ್ಲಿನ ಸುಖ – ಸೌಕರ್ಯ, ಸಿರಿ-ಸಂಪತ್ತು ಎಲ್ಲವೂ ನಶ್ವರವಾಗಿವೆ. ಅವೆಲ್ಲವೂ ಸ್ವಲ್ಪ ಹೊತ್ತಿನ ಮನರಂಜನೆಯ ವಸ್ತುಗಳಾಗಿವೆ. ಅವೆಲ್ಲವೂ ನಿಮ್ಮಂತೆಯೇ ಅಳಿದು ಹೋಗಲಿವೆ. ಈ ನಶ್ವರ ಲೋಕದಲ್ಲಿ ಶಾಶ್ವತವಾಗಿ ಉಳಿಯುವ ವಸ್ತುವೆಂದರೆ ಸತ್ಕರ್ಮಗಳಾಗಿವೆ. ಆತ್ಮ ಮತ್ತು ಮನಸ್ಸಿನ ಶುದ್ಧಿಯಾಗಿದೆ. ಪವಿತ್ರ ಕುರ್‌ಆನ್ ಹೇಳುತ್ತದೆ.

**"ಈ ಸೊತ್ತು ಮತ್ತು ಈ ಸಂತತಿಗಳು ಕೇವಲ ಲೌಕಿಕ ಜೀವನದ ಕ್ಷಣಿಕ ಸೊಬಗು ಮಾತ್ರ. ವಾಸ್ತವದಲ್ಲಿ ಉಳಿಯುವ ಪುಣ್ಯ ಕಾರ್ಯಗಳೇ ನಿಮ್ಮ ಪ್ರಭುವಿನ ಬಳಿ ಪರಿಣಾಮದ ದೃಷ್ಟಿಯಿಂದ ಶ್ರೇಷ್ಠವಾಗಿರುತ್ತವೆ." (ಪವಿತ್ರ ಕುರ್‌ಆನ್, 18:46)**

ಲೌಕಿಕ ಜೀವನದ ನಶ್ವರತೆ ಮತ್ತು ವಂಚನೆಯ ಬಗ್ಗೆ ಎಚ್ಚರಿಸುವಂತಹ ಇನ್ನೂ ಅನೇಕ ಸೂಕ್ತಗಳು ಕುರ್‌ಆನಿನಲ್ಲಿವೆ. ಉದಾ: 11:116, 31:33, 57:20

## ಕರ್ಮಗಳ ಜವಾಬ್ದಾರಿಕೆ

ಈ ಲೋಕವು ಕರ್ಮ ಭೂಮಿಯಾಗಿದೆ. ಪ್ರಯತ್ನ, ಪರಿಶ್ರಮದ ಸ್ಥಳವಾಗಿದೆ. ಪರಲೋಕವು ಪ್ರತಿಫಲದ ಸ್ಥಳವಾಗಿದೆ. ಅದು ಒಳಿತು-ಕೆಡುಕುಗಳ ಪರಿಣಾಮ ಮತ್ತು ಕರ್ಮಗಳ ಪ್ರತಿಫಲದ ಸ್ಥಳವಾಗಿದೆ. ಮಾನವನಿಗೆ ಮರಣದ ತನಕದ ಅವಧಿಯು, ಕೆಲಸ ಮಾಡಲು ಸಿಕ್ಕಿರುವ ಅವಕಾಶವಾಗಿದೆ. ಮರಣದ ನಂತರ ಕರ್ಮ ಮಾಡಲು ಅವಕಾಶ ಖಂಡಿತ ಸಿಗಲಾರದು. ಆದ್ದರಿಂದ ಈ ಲೌಕಿಕ ಜೀವನದಲ್ಲಿ ನನ್ನ ಪ್ರತಿಯೊಂದು ಕರ್ಮ, ಪ್ರತಿಯೊಂದು ಚಲನ-ವಲನ, ಪ್ರತಿಯೊಂದು ಪಾಪ- ಪುಣ್ಯವೂ ಒಂದು ಪ್ರಭಾವ ಮತ್ತು ತೂಕ ಹೊಂದಿರುತ್ತದೆ. ಅದರಂತೆ ನನಗೆ ಪರಲೋಕ ಜೀವನದಲ್ಲಿ ಒಳ್ಳೆಯ ಅಥವಾ ಕೆಟ್ಟ ಪ್ರತಿಫಲ ದೊರೆಯಲಿದೆ ಹಾಗೂ ನನ್ನ ಶ್ರಮದ ಪ್ರತಿಫಲ ಉತ್ತಮ ಅಥವಾ ಕೆಟ್ಟ ರೂಪದಲ್ಲಿ ಅಲ್ಲಿ ಖಂಡಿತ ಸಿಗಲಿದೆಯೆಂಬ ಪ್ರಜ್ಞೆಯೊಂದಿಗೆ ಕೆಲಸ ಮಾಡಬೇಕಾಗಿದೆ. ಕುರ್‌ಆನ್ ಈ ರೀತಿ ಹೇಳುತ್ತದೆ.

**"(ಅದೇನೆಂದರೆ) ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆ ಹೊರಲಾರನು. ಮನುಷ್ಯನು ತಾನೇ ಪರಿಶ್ರಮಿಸಿದುದರ ಹೊರತು ಅವನಿಗೆ ಬೇರೇನೂ ಇಲ್ಲ ಮತ್ತು ಅವನ ಪರಿಶ್ರಮವನ್ನು ಸದ್ಯವೇ ನೋಡಲಾಗುವುದು. ಅನಂತರ ಅವನ ಸಂಪೂರ್ಣ ಪ್ರತಿಫಲವನ್ನು ಕೊಡಲಾಗುವುದು- ಅಂತಿಮವಾಗಿ ತಲುಪಲಿಕ್ಕಿರುವುದು ನಿಮ್ಮ ಪ್ರಭುವಿನ ಕಡೆಗೇ ಆಗಿದೆ."**

**(ಪವಿತ್ರ ಕುರ್‌ಆನ್, 53:38-42)**

**"ವಾಸ್ತವದಲ್ಲಿ ಒಬ್ಬನ ಕರ್ಮಾವಧಿಯು ಪೂರ್ಣಗೊಳ್ಳುವ ಸಮಯ ಬಂದು ಬಿಟ್ಟರೆ ಅಲ್ಲಾಹನು ಯಾರಿಗೂ ಇನ್ನಷ್ಟು ಕಾಲಾವಧಿಯನ್ನು ಕೊಡುವುದಿಲ್ಲ, ನೀವು ಮಾಡುತ್ತಿರುವುದೆಲ್ಲವನ್ನು ಅಲ್ಲಾಹನು ತಿಳಿದವನಾಗಿದ್ದಾನೆ." (ಪವಿತ್ರ ಕುರ್‌ಆನ್, 63:11)**

ಈ ಜವಾಬ್ದಾರಿಕೆಯು ಸಾಮೂಹಿಕವಲ್ಲ, ಅದು ವೈಯಕ್ತಿಕವಾಗಿದೆ. ಪ್ರತಿಯೊಬ್ಬನೂ ತನ್ನ ಕರ್ಮಕ್ಕೆ ತಾನೇ ಜವಾಬ್ದಾರನಾಗಿದ್ದಾನೆ. ಇದರಲ್ಲಿ ಬೇರಾರಿಗೂ ಅವನೊಂದಿಗೆ ಪಾಲುದಾರಿಕೆಯಿಲ್ಲ, ಅದೇ ರೀತಿ ತಾನು ಮಾಡಿದ ಕರ್ಮಗಳ ಫಲವನ್ನು ಇನ್ನೊಬ್ಬನ ಮೇಲೂ ಹೇರುವಂತಿಲ್ಲ, ಇನ್ನೊಬ್ಬನು ಮಾಡಿದ ಸತ್ಕರ್ಮಗಳಿಂದಾಗಿ ತಾನು ಪಾರಾಗಬಲ್ಲೆ ಅಥವಾ ಅಲ್ಲಾಹನನ್ನು ಬಿಟ್ಟು ಇತರರನ್ನು ಸಂತೃಪ್ತಗೊಳಿಸಿದರೆ ನಮ್ಮ ಕರ್ಮಗಳಿಗೆ ಅಂಗೀಕಾರ ದೊರೆಯುವುದೆಂಬ ಭ್ರಮೆಯೂ ಇಲ್ಲಿ ಉಳಿಯುವುದಿಲ್ಲ, ಒಬ್ಬನು ಬೆಂಕಿಯನ್ನು ಮುಟ್ಟಿದರೆ ಅವನ ಕೈಸುಡುವುದು, ಜೇನು ಸವಿದರೆ ಅದರ ರುಚಿ ಅನುಭವವಾಗುವುದು. ಇದರ ಕೆಟ್ಟ ಮತ್ತು ಉತ್ತಮ ಪರಿಣಾಮವನ್ನು ಬೇರೊಬ್ಬನು ಅನುಭವಿಸಲು ಸಾಧ್ಯವಿಲ್ಲ, ಅದೇ ರೀತಿ ಕೆಡುಕಿನ ಪ್ರತಿಫಲವನ್ನು ಕೆಟ್ಟದಾಗಿಯೂ ಒಳಿತಿನ ಪ್ರತಿಫಲವನ್ನು ಒಳ್ಳೆಯದಾಗಿಯೂ ಪ್ರತಿಯೊಬ್ಬನೂ ತಾನೇ ಅನುಭವಿಸಬೇಕಾಗಿದೆ. ಆದ್ದರಿಂದ ಈ ಲೋಕವನ್ನು ಬಳಸುವಾಗಲೂ ಪ್ರತಿಯೊಬ್ಬನಿಗೂ ಹೊಣೆಗಾರಿಕೆಯ ಪ್ರಜ್ಞೆ ಇರಬೇಕಾಗಿದೆ.

"ಪ್ರತಿಯೊಬ್ಬನೂ ತಾನು ಸಂಪಾದಿಸುತ್ತಿರುವುದಕ್ಕೆ ಸ್ವತಃ ತಾನೇ ಹೊಣೆಗಾರನಾಗಿರುತ್ತಾನೆ. ಯಾವ ಹೊರೆ ಹೊರುವಾತನೂ ಇನ್ನೊಬ್ಬನ ಹೊರೆಯನ್ನು ಹೊರುವುದಿಲ್ಲ." (ಪವಿತ್ರ ಕುರ್‌ಆನ್, 6:164)

"ನೋಡಿರಿ- ನೀವು ಸತ್ಕರ್ಮ ಮಾಡಿದ್ದರೆ ಅದು ನಿಮ್ಮ ಹಿತಕ್ಕಾಗಿಯೇ ಮಾಡಿದ್ದೀರಿ, ದುಷ್ಕರ್ಮವೆಸಗಿದ್ದರೆ ಅದು ನಿಮಗೇ ಕೇಡಾಗಿ ಪರಿಣಮಿಸಿತು."

(ಪವಿತ್ರ ಕುರ್‌ಆನ್, 17:7)

ಮಾನವನ ಲೌಕಿಕ ಜೀವನದ ಕುರಿತಂತೆ ಈ ವರೆಗೆ ವಿವರಿಸಿದುದರಲ್ಲಿ ಇಸ್ಲಾಮಿನ ಕಲ್ಪನೆಯು ಪ್ರಕೃತಿಗೆ ಎಷ್ಟು ಅನುಗುಣವಾಗಿದೆ. ಲೌಕಿಕ ಜೀವನದ ಕುರಿತು ಇಸ್ಲಾಮಿನ ಕಲ್ಪನೆಯು ಇತರ ಸಂಸ್ಕೃತಿಗಳ ಕಲ್ಪನೆಗಿಂತ ಎಷ್ಟು ಭಿನ್ನವಾಗಿದೆ ಹಾಗೂ ಈ ಕಲ್ಪನೆಗನುಸಾರ ಸ್ಥಾಪಿತವಾಗುವ ಸಂಸ್ಕೃತಿಯು ಮಾನವನ ಆಚಾರ-ವಿಚಾರಗಳಿಗೆ ಹೇಗೆ ಸರಿ ಹೊಂದುತ್ತದೆಂದು ನೋಡೋಣ.

ನಾವು ಪರಿಸರದ ಮೇಲೆ ಕಣ್ಣೋಡಿಸಿದರೆ, ಇಲ್ಲಿ ಒಂದು ಪ್ರಬಲ ಕಾನೂನಿರುವುದು ಮತ್ತು ಅದಕ್ಕೆ ನಿಕೃಷ್ಟ ವಸ್ತುವಿನಿಂದ ಹಿಡಿದು ದೈತ್ಯ ಗಾತ್ರದ ವಸ್ತುಗಳೂ ಬಂಧಿಸಲ್ಪಟ್ಟಿರುವುದು ಕಾಣುತ್ತದೆ. ಅವುಗಳ ಸಂಯೋಜನೆಯಿಂದಲೇ ಈ ಪ್ರಪಂಚ ವ್ಯವಸ್ಥೆ ನೆಲೆನಿಂತಿದೆ. ನಾವೂ ಅದೇ ಕಾನೂನಿಗೆ ಅಧೀನವಾಗಿದ್ದೇವೆ. ಆದರೆ ನಮಗೂ ಇತರ ವಸ್ತುಗಳಿಗೂ ತುಂಬಾ ವ್ಯತ್ಯಾಸವಿದೆ. ಇತರ ವಸ್ತುಗಳಿಗೆ ನಿಸರ್ಗದ ಈ ಕಾನೂನಿಗೆ ವಿರುದ್ಧವಾಗಿ ನಡೆಯುವ ಶಕ್ತಿಯಿಲ್ಲ, ಆದರೆ ನಮಗೆ ಅದು ಸಾಧ್ಯವಿದೆ. ಅಷ್ಟೇ ಅಲ್ಲ, ನಾವು ಈ ಕಾನೂನಿಗೆ ವಿರುದ್ಧವಾಗಿ ನಡೆದರೂ ನಿಸರ್ಗದ ನಿಯಮವು ಅದಕ್ಕೆ ಸಹಕರಿಸುತ್ತದೆ. ಆದರೆ ಅದರಿಂದ ಕೆಲವು ಹಾನಿಯೂ ಇರುತ್ತದೆ. ನಿಸರ್ಗದ ನಿಯಮವನ್ನು ಉಲ್ಲಂಘಿಸಿ ಅದರ ಹಾನಿಯಿಂದ ತಪ್ಪಿಸಿಕೊಳ್ಳುವುದಂತೂ ಸಾಧ್ಯವಿಲ್ಲ.

ಈ ಪ್ರಪಂಚದಲ್ಲಿ ಉಂಟಾಗುವ ಮತ್ತು ಅಳಿಯುವ ನಿರಂತರ ಪ್ರಕ್ರಿಯೆ ನಡೆಯುತ್ತಾ ಇದೆ. ಅದು ಉಂಟಾದಾಗ ಸಂತೋಷಪಡುವುದು, ಅಳಿದಾಗ ದುಃಖಿಸುವುದು ಬೇರಾವ ಜೀವಿಯಲ್ಲೂ ಕಾಣಸಿಗುವುದಿಲ್ಲ, ಆದರೆ ಮಾನವನು ಅದನ್ನು ಕಂಡು ಪ್ರಭಾವಿತನಾಗುತ್ತಾನೆ. ಒಮ್ಮೊಮ್ಮೆ ಸಂತೋಷಗೊಂಡನೆಂದರೆ ಅದಕ್ಕೆ ಅಳಿವೇ ಇಲ್ಲವೋ ಎಂದು ಭಾವಿಸಿ ಬಿಡುತ್ತಾನೆ. ಅದೇ ರೀತಿ ದುಃಖಿತನಾದಾಗ ಅವನಿಗೆ ಲೋಕದಲ್ಲಿಡೀ ಸಂಹಾರವೇ ಕಾಣುತ್ತದೆ. ಆದರೆ ಸಂತೋಷ ಮತ್ತು ದುಃಖದ ಎಷ್ಟೇ ವಿಭಿನ್ನ ಭಾವನೆಗಳಿದ್ದರೂ ಅದರ ಪ್ರಭಾವದಿಂದಾಗಿ ಲೌಕಿಕ ಜೀವನದ ಕುರಿತು ಅವನ ಚಿಂತನೆ ವಿಭಿನ್ನ ಧ್ರುವಗಳಲ್ಲಿದ್ದರೂ ಮಾನವ ಪ್ರಕೃತಿಯು ಈ ಲೋಕವನ್ನು, ಅದು ಇರುವ ಸ್ಥಿತಿಯಲ್ಲಿ ಬಳಸಲು ಮತ್ತು ಅವನೊಳಗಿರುವ ಶಕ್ತಿಗಳನ್ನು ಉಪಯೋಗಿಸಲು ನಿರ್ಬಂಧಿತವಾಗಿದೆ. ಬದುಕಿರಬೇಕೆಂಬುದು ಮಾನವನ ಬಯಕೆಯಾಗಿದೆ. ಅದಕ್ಕಾಗಿ ಅವನಿಗೆ ಹಸಿವೆಂಬ ಶಕ್ತಿಯನ್ನು ನೀಡಲಾಗಿದೆ.

ಅದು ಮಾನವನನ್ನು ದುಡಿಯುವಂತೆ ಪ್ರೇರೇಪಿಸುತ್ತದೆ. ನಿಸರ್ಗ ನಿಯಮವು ಮಾನವ ಸಂತತಿಯನ್ನು ಉಳಿಸಲಿಕ್ಕಾಗಿ ಅವನಿಂದ ಸೇವೆ ಪಡೆಯಬಯಸುತ್ತದೆ. ಅದಕ್ಕಾಗಿ ಅವನಲ್ಲಿ ಕಾಮವಾಂಛೆಯನ್ನಿರಿಸಲಾಗಿದೆ. ಅದು ಅವನಿಂದ ತನ್ನ ಉದ್ದೇಶಪೂರ್ಣಗೊಳಿಸುವಂತೆ ನಿರ್ಬಂಧಿಸುತ್ತದೆ. ಅದೇ ರೀತಿಯಲ್ಲಿ ಅವನ ಪ್ರಕೃತಿಯಲ್ಲಿ ಇನ್ನೂ ಅನೇಕ ಶಕ್ತಿಗಳು ಸುಪ್ತವಾಗಿದ್ದು ಅವುಗಳಿಂದ ಅವನು ಕೆಲಸ ಮಾಡಲೇ ಬೇಕಾಗುತ್ತದೆ. ಆದರೆ ಪ್ರಕೃತಿಯ ಈ ಉದ್ದೇಶ ಸಾಧನೆಯನ್ನು ಉತ್ತಮ ರೀತಿಯಿಂದ ಈಡೇರಿಸಬೇಕೋ ಕೆಟ್ಟದಾಗಿ ಈಡೇರಿಸಬೇಕೋ ಅಥವಾ ಬಲವಂತವಾಗಿಯೋ ಎಂಬುದನ್ನು ಮಾನವನು ತನ್ನ ಬುದ್ಧಿಚಾತುರ್ಯದಿಂದ ನಿರ್ಧರಿಸಬೇಕಾಗಿದೆ. ಏಕೆಂದರೆ ಅವುಗಳನ್ನು ಉತ್ತಮ ರೀತಿಯಲ್ಲಿ ಬಳಸಿದರೆ ಅದರ ಉತ್ತಮ ಪರಿಣಾಮವನ್ನು ಕೆಟ್ಟದಾಗಿ ಬಳಸಿದರೆ ಅದರ ದುಷ್ಪರಿಣಾಮವನ್ನೂ ಮಾನವನು ನೋಡಬೇಕಾದೀತು.

## ವಿವಿಧ ಮತ-ಧರ್ಮಗಳ ಕಲ್ಪನೆಗಳು

ಈ ಲೋಕದಲ್ಲಿ ಅನೇಕ ಗುಂಪುಗಳು (ಧರ್ಮ ಮತ್ತು ಸಿದ್ಧಾಂತಗಳ ವಕ್ತಾರರು) ವಿಭಿನ್ನ ರೀತಿಯಲ್ಲಿ ಜೀವನವನ್ನು ವ್ಯಾಖ್ಯಾನಿಸಿದ್ದಾರೆ. ಹೆಚ್ಚಾಗಿ ಅದು ಒಂದು ಮುಖವನ್ನು ಮಾತ್ರ ನೋಡಿ ಉಳಿದ ಮುಖಗಳನ್ನು ಉಪೇಕ್ಷಿಸಿರುವುದು ಕಂಡು ಬರುತ್ತದೆ. ಯಾವ ಮುಖವನ್ನು ಮಾನವನು ತನ್ನೆದುರಿಗೆ ಕಂಡನೋ ಅದಕ್ಕನುಸಾರವಾಗಿ ಜೀವನದ ಒಂದು ಸಿದ್ಧಾಂತವನ್ನು ಕಂಡುಕೊಂಡನು. ಉದಾ:

ಒಂದು ವರ್ಗವು ಮಾನವನು ತುಂಬಾ ದುರ್ಬಲನು. ಅವನಿಗಿಂತ ದೊಡ್ಡ ದೊಡ್ಡ ಶಕ್ತಿಗಳು ಇಲ್ಲಿ ಮೆರೆಯುತ್ತಿವೆಯೆಂದು ಕಂಡು ತನ್ನನ್ನು ಈ ಲೋಕದಲ್ಲಿ ನಿಕೃಷ್ಟ ಜೀವಿಯೆಂದು ಭಾವಿಸಿತು. ದೊಡ್ಡ ಶಕ್ತಿಗಳ ಪ್ರತಾಪವನ್ನು ನೋಡಿ ಅವುಗಳ ಮುಂದೆ ಮಂಡಿಯೂರಿ ತನ್ನ ನೈಜ ಸ್ಥಾನವನ್ನು ಮರೆತುಬಿಟ್ಟಿತು. ಅದು ಅವನನ್ನು ಕಲ್ಲು, ಮರ, ನಕ್ಷತ್ರಗಳು ಹಾಗೂ ನಿಸರ್ಗದ ಇತರ ಶಕ್ತಿಗಳನ್ನು ಪೂಜಿಸುವಂತೆ ಮಾಡಿತು. ಮಾನವನು ಅತ್ಯಂತ ಶ್ರೇಷ್ಠನೆಂಬ ಕಲ್ಪನೆಯನ್ನು ಮರೆಸಿಬಿಟ್ಟಿತು.

ಇನ್ನೊಂದು ವರ್ಗವು, ಈ ಲೋಕದಲ್ಲಿ ಆಗುವುದೆಲ್ಲವೂ ಅಳಿಯಲಿಕ್ಕಾಗಿಯೇ ಇದೆ. ಮರಣವು ಎಲ್ಲ ಸುಖ ಸಂತೋಷಗಳನ್ನು ಅಳಿಸಿ ಹಾಕುತ್ತದೆ. ಆದ್ದರಿಂದ ಅಂತಹ ನಶ್ವರ ಜೀವನಕ್ಕಾಗಿ ಹಾತೊರೆಯುವುದು ಮೂರ್ಖತನವೆಂದು ಭಾವಿಸಿ ಕಾಡುಮೇಡುಗಳಲ್ಲಿದ್ದು ತಪಸ್ಸು, ದೇಹದಂಡನೆಗಳಿಂದ ಮೋಕ್ಷ ಪಡೆಯುವ ದಾರಿಯನ್ನು ಕಂಡುಕೊಂಡಿತು. ವೈರಾಗ್ಯ, ಸನ್ಯಾಸವೆಲ್ಲ ಅದರ ಕೂಸಾಗಿವೆ.

ಮತ್ತೊಂದು ವರ್ಗವು, ಇಲ್ಲಿರುವ ಸುಖ ಸಂತೋಷಗಳೆಲ್ಲ ಕೆಲವೇ ಸಮಯ ಅನುಭವಿಸಲಿಕ್ಕಿರುವಂತಹದ್ದಾಗಿವೆ. ಸಂಕಷ್ಟಗಳು ಅದನ್ನು ಸಪ್ಪೆಗೊಳಿಸುತ್ತದೆ. ಈ ಭಾವನೆಯು,

ಸಿಕ್ಕಿದ ಅವಕಾಶವನ್ನು ಪೂರ್ಣವಾಗಿ ಬಳಸಿ ಈ ಜೀವನವನ್ನು ಸುಖವಾಗಿ ಕಳೆಯಬೇಕೆಂದು ಅವನನ್ನು ಪ್ರೇರೇಪಿಸಿತು. ಇರುವುದೆಲ್ಲವೂ ಇಲ್ಲೇ. ಮರಣದ ಬಳಿಕ ಲೋಕವೂ ಇರಲಾರದು, ಇಲ್ಲಿನ ಸುಖಸಂತೋಷಗಳೂ ಇರಲಾರವು. ಎಲ್ಲವೂ ಅಳಿದು ಹೋಗುವುದು. ಆದ್ದರಿಂದ ಲೌಕಿಕ ಜೀವನವನ್ನೇ ತನ್ನ ಗುರಿಯಾಗಿ ಮಾಡಿತು.

ಒಂದು ವರ್ಗವು ಇದಕ್ಕೆ ಭಿನ್ನವಾಗಿ ಆಲೋಚಿಸಿತು. ಅದರ ದೃಷ್ಟಿಯಲ್ಲಿ ಲೌಕಿಕ ಸುಖ ಸಂತೋಷಗಳು ಮಾತ್ರವಲ್ಲ ಇಲ್ಲಿನ ಜೀವನವೇ ಪಾಪವಾಗಿದೆ. ಮಾನವನ ಆತ್ಮದ ಮಟ್ಟಿಗೆ ಅದು ಮಾಲಿನ್ಯವಾಗಿದೆ. ಲೋಕವನ್ನು ಉಪಯೋಗಿಸುವುದರಿಂದ ಯಾವುದೇ ಒಳಿತಿಲ್ಲ, ಆದ್ದರಿಂದ ಲೋಕದಿಂದ ದೂರವಿರಬೇಕಾಗಿದೆ. ಲೌಕಿಕ ಜೀವನದಲ್ಲಿ ಮುಳುಗಿದರೆ ದೇವರ ಆಡಳಿತದಲ್ಲಿ ಪಾಲಿರಲಾರದು ಎಂಬುದು ಈ ವರ್ಗದ ವಾದ. ಆದರೆ ಮನುಷ್ಯ ಪ್ರಕೃತಿ ಈ ಲೋಕವನ್ನು ಬಳಸದೆ ಇರಲು ಸಾಧ್ಯವಿಲ್ಲ, ಅದು ಈ ಪಾಪ ಕಾರ್ಯ(?)ದಲ್ಲಿ ಮನುಷ್ಯನನ್ನು ಹಾಕದೆ ಇರುವುದಿಲ್ಲ, ಆದ್ದರಿಂದ ದೇವರ ಸಾಮ್ರಾಜ್ಯದಲ್ಲಿ ಸೇರಲಿಕ್ಕಾಗಿ ಅದೊಂದು ಸುಲಭ ದಾರಿಯನ್ನು ಕಂಡುಕೊಂಡಿತು. ಮನುಷ್ಯರೆಲ್ಲರ ಪಾಪಗಳ ಪರಿಹಾರಕ್ಕಾಗಿ ಒಬ್ಬ ವ್ಯಕ್ತಿಯನ್ನು ಶಿಲುಬೆಗೇರಿಸುವುದು. ಆ ವ್ಯಕ್ತಿಯನ್ನು ಯಾರೆಲ್ಲ ನಂಬಿದರೋ ಆ ಮೂಲಕ ಅವರಿಗೆ ಮುಕ್ತಿ ದೊರೆಯುವುದು ಎಂಬ ಕಲ್ಪನೆಯನ್ನು ಹುಟ್ಟು ಹಾಕಿತು. ಅದರಿಂದಾಗಿ ಯಾವ ಪಾಪವನ್ನು ಮಾಡಲೂ ಅವರಿಗೆ ಅಂಜಿಕೆಯಿಲ್ಲದಾಯಿತು. ಏಕೆಂದರೆ ತಾವು ಮಾಡಿದ ಮತ್ತು ಮಾಡಲಿರುವ ಪಾಪಗಳಿಗಾಗಿ ಒಬ್ಬ ವ್ಯಕ್ತಿ ಶಿಲುಬೆಗೇರಿ ಆಗಿದೆ.

ಇನ್ನೊಂದು ವರ್ಗವು ನಿಸರ್ಗ ನಿಯಮಗಳ ಸಮಗ್ರತೆಯನ್ನು ಕಂಡು ಮಾನವ ಕೇವಲ ವಿವಶನು ಎಂದು ಭಾವಿಸಿತು. ಆತ ಸ್ವತಂತ್ರನಲ್ಲ, ಅದಕ್ಕೆ ಅವನ ಮಾನಸಿಕ, ದೈಹಿಕ, ಜೀವಶಾಸ್ತ್ರ ಹಾಗೂ ಸಂತಾನೋತ್ಪತ್ತಿಯ ಕಾನೂನುಗಳು ಸಾಕ್ಷಿಯಾಗಿವೆ. ಅದರ ವಿರುದ್ಧ ಮಾನವ ಏನೂ ಆಲೋಚಿಸುವಂತಿಲ್ಲ, ಸ್ವಯಂ ನಿರ್ಧರಿಸುವಂತಿಲ್ಲ, ಮತ್ತು ಏನೂ ಮಾಡಲು ಶಕ್ತನಲ್ಲವೆಂದು ಭಾವಿಸಿತು. ಆದ್ದರಿಂದ ಅವನ ಮೇಲೆ ಯಾವುದೇ ಹೊಣೆಗಾರಿಕೆಯಿಲ್ಲ.

ಇದಕ್ಕೆ ವ್ಯತಿರಿಕ್ತವಾಗಿ ಒಂದು ವರ್ಗದ ದೃಷ್ಟಿಯಲ್ಲಿ ಮಾನವನು ಸರ್ವತಂತ್ರ ಸ್ವತಂತ್ರನು. ಆದ್ದರಿಂದ ಅವನಿಗಿಂತ ಮೇಲಿನ ಯಾವುದೇ ಶಕ್ತಿಯ ಅನುಸರಣೆ ಮಾಡುವುದಕ್ಕೆ ಅವನು ಬಾಧ್ಯಸ್ಥನಲ್ಲ, ಅವನು ತನ್ನ ಆಚಾರ ಕರ್ಮಗಳಿಗೆ ತನ್ನದೇ ಚಿತ್ತ ಅಥವಾ ಮಾನವ ಸರಕಾರದ ಕಾನೂನಿನ ಮುಂದೆ ಪ್ರಶ್ನಾರ್ಹನಲ್ಲ, ಈ ಲೋಕದ ಒಡೆಯ ಅವನೇ. ಉಳಿದುದೆಲ್ಲವೂ ಅವನಿಗಾಗಿ ನಿಯಂತ್ರಿಸಲ್ಪಟ್ಟಿವೆ. ಅವನು ಅದನ್ನು ಹೇಗೆ ಬೇಕಾದರೂ ಬಳಸಬಹುದು. ತನ್ನ ಜೀವನವನ್ನು ಉತ್ತಮಪಡಿಸಲು ಮತ್ತು ತನ್ನ ಆಚಾರ, ಕರ್ಮಗಳಲ್ಲಿ ಶಿಸ್ತು ಬದ್ಧತೆಯನ್ನು ಕಾಯ್ದುಕೊಳ್ಳಲು ತನ್ನ ವೈಯಕ್ತಿಕ ಜೀವನಕ್ಕೆ ತಾನೇ ಕಾನೂನುಗಳನ್ನು ರಚಿಸಿದ್ದಾನೆ. ಯಾವುದೇ ದೊಡ್ಡ ಶಕ್ತಿಯ ಮುಂದೆ ವಿಚಾರಣೆಗೊಳ ಪಡುವುದೆಂಬ ಮಾತು ಅಸಂಬದ್ಧ ಎಂದು ಭಾವಿಸಿತು.

ಲೌಕಿಕ ಜೀವನದ ಕುರಿತು ಈ ವಿಭಿನ್ನ ಕಲ್ಪನೆಗಳ ಆಧಾರದಲ್ಲೇ ವಿಭಿನ್ನ ಸಂಸ್ಕೃತಿಗಳು ಅಸ್ತಿತ್ವಕ್ಕೆ ಬಂದಿವೆ. ಲೌಕಿಕ ಜೀವನದ ಕುರಿತಾಗಿರುವ ವಿಭಿನ್ನ ದೃಷ್ಟಿಕೋನಗಳೇ ಈ ರೀತಿ ವಿಚಾರ ಸಿದ್ಧಾಂತಗಳಲ್ಲಿ ವೈವಿಧ್ಯತೆಯುಂಟಾಗಲು ಕಾರಣ. ಆದರೆ ಇಲ್ಲಿ ನಾವು ಇಸ್ಲಾಮೀ ಸಂಸ್ಕೃತಿಯ ವೈಶಿಷ್ಟ್ಯಗಳನ್ನು ಸ್ಪಷ್ಟಪಡಿಸಬಯಸುತ್ತೇವೆ. ಈ ವಿವರಿಸಿರುವ ಜೀವನದ ಕಲ್ಪನೆಗಳ ಪೈಕಿ ಪ್ರತಿಯೊಂದು ಈ ಲೋಕವನ್ನು ವಿಭಿನ್ನ ಹಾಗೂ ವಿಶಿಷ್ಟ ಕೋನಗಳಿಂದ ವೀಕ್ಷಿಸಿರುವುದರ ಫಲವಾಗಿದೆ. ಈ ಪೈಕಿ ಯಾವುದೂ ಒಟ್ಟಾಗಿ ಇಡೀ ಪ್ರಪಂಚದ ಮೇಲೆ ದೃಷ್ಟಿ ಹಾಯಿಸಿ, ಜೀವಿಗಳ ಪೈಕಿ ಮಾನವನ ನೈಜ ನೆಲೆಯನ್ನು ಕಂಡುಕೊಂಡ ಬಳಿಕ ನಿರ್ಧರಿಸಿದ ಕಲ್ಪನೆಗಳಲ್ಲ, ಆದ್ದರಿಂದಲೇ ಈ ಎಲ್ಲ ಕಲ್ಪನೆಗಳೂ ತಪ್ಪಾಗಿವೆ. ನಾವು ಈ ಲೋಕವನ್ನು ಇನ್ನೊಂದು ದೃಷ್ಟಿಯಲ್ಲಿ ಅಳೆದಾಗ ಪ್ರಸ್ತುತ ಸಿದ್ಧಾಂತಗಳ ತಪ್ಪು ಅನಾವರಣಗೊಳ್ಳುವುದು.

## ಇಸ್ಲಾಮೀ ಕಲ್ಪನೆಯ ವೈಶಿಷ್ಟ್ಯ

ಜೀವನದ ಕುರಿತು ಇಸ್ಲಾಮಿನ ಕಲ್ಪನೆಯು ಪ್ರಕೃತಿಗೆ ಅನುಗುಣವಾಗಿದೆ. ಲೋಕ ಮತ್ತು ಮಾನವನ ಸಂಬಂಧವನ್ನು ಅದು ಸರಿಯಾಗಿ ಪರಿಗಣಿಸುತ್ತದೆ. ಈ ಲೋಕ ಸಂಪೂರ್ಣವಾಗಿ ತ್ಯಜಿಸುವಂತಹದ್ದಲ್ಲ, ಅದರ ಸುಖಾಡಂಬರದಲ್ಲೇ ಮುಳುಗುವಂತಹದ್ದೂ ಅಲ್ಲ, ಇಲ್ಲಿ ಅವನು ಸರ್ವತಂತ್ರ ಸ್ವತಂತ್ರನೂ ಅಲ್ಲ, ಸಂಪೂರ್ಣ ಕೈದಿಯೂ ಅಲ್ಲ, ಅವನು ನಿಜವಾಗಿ ದೇವನ ಪ್ರತಿನಿಧಿಯಾಗಿದ್ದಾನೆ. ಲೋಕದ ಎಲ್ಲ ಶಕ್ತಿಗಳನ್ನು ಅವನಿಗಾಗಿ ನಿಯಂತ್ರಿಸಿ ಕೊಡಲಾಗಿದೆ. ಆದ್ದರಿಂದ ಆತ ಎಲ್ಲವುಗಳ ಒಡೆಯನಾಗಿದ್ದರೂ ಒಬ್ಬನ ದಾಸ ಅಥವಾ ಗುಲಾಮನಾಗಿದ್ದಾನೆ. ಅವನಿಗೆ ಎಲ್ಲ ಜೀವಿಗಳಿಗಿಂತಲೂ ಶ್ರೇಷ್ಠವಾದ ಸ್ಥಾನವನ್ನು ನೀಡಲಾಗಿದೆ. ಆದರೆ ಈ ಶ್ರೇಷ್ಠತೆಯು ತನಗೆ ಸಿಕ್ಕಿದ ಅಧಿಕಾರವನ್ನು ಸರಿಯಾದ ರೀತಿಯಲ್ಲಿ ಬಳಸುವುದನ್ನು ಅವಲಂಬಿಸಿದೆ. ಈ ಅಧಿಕಾರಗಳ ಬಗ್ಗೆ ಅವನನ್ನು ಪ್ರಶ್ನಿಸಲಾಗುವುದೆಂಬ ಪ್ರಜ್ಞೆ ಅವನಲ್ಲಿ ಸದಾ ಇರಬೇಕಾಗಿದೆ. ಒಂದು ವೇಳೆ ದೇವನ ಇಂಗಿತಕ್ಕೆ ವಿರುದ್ಧವಾಗಿ ಲೋಕದ ಮೇಲೆ ಹಸ್ತಕ್ಷೇಪ ನಡೆಸಿದರೆ ಅದರ ಕೆಟ್ಟ ಪರಿಣಾಮವನ್ನು ಅವನು ಕಾಣಬೇಕಾಗುವುದು.

ಈ ಕಲ್ಪನೆಯು ಇಸ್ಲಾಮೀ ಸಂಸ್ಕೃತಿಯ ಮೂಲಾಧಾರವಾಗಿದೆ. ಆದರೆ ಇದು ಹೆಚ್ಚಿನವರಿಗೆ ತಿಳಿದಿಲ್ಲ, ಆದ್ದರಿಂದ ಮುಸ್ಲಿಮನ ವ್ಯಕ್ತಿ ಜೀವನದಲ್ಲಿ ಇದು ಹೆಚ್ಚು ವ್ಯಕ್ತವಾಗದಿದ್ದರೂ ಅದರ ಪ್ರಭಾವದಿಂದ ವಿರಹಿತವಾಗಿಲ್ಲ, ಒಬ್ಬ ಮುಸ್ಲಿಮನು ಇಸ್ಲಾಮೀ ಸಂಸ್ಕೃತಿಯ ವಾತಾವರಣದಲ್ಲಿ ಬೆಳೆದಿದ್ದು ಅವನ ಕರ್ಮಗಳಲ್ಲಿ ಬಾಹ್ಯ ಪ್ರಭಾವದಿಂದ ಎಷ್ಟೇ ಲೋಪಗಳಿದ್ದರೂ ಅವನಲ್ಲಿ ಸ್ವಾಭಿಮಾನವಿರುತ್ತದೆ. ದೇವನ ಹೊರತು ಯಾರ ಮುಂದೆಯೂ ಬಾಗಲಾರೆ, ಯಾರನ್ನೂ ಹೆದರಲಾರೆ, ಯಾರನ್ನೂ ದೇವನ ಹೊರತು ಒಡೆಯನೆಂದು ಭಾವಿಲಾರೆ, ಲೋಕದಲ್ಲಿ ತಾನೋರ್ವ ಜವಾಬ್ದಾರಿಯುಳ್ಳ ವ್ಯಕ್ತಿಯಾಗಿದ್ದೇನೆಂಬ

ಹಾಗೂ ಲೋಕವನ್ನು ಕರ್ಮದ ಮತ್ತು ಪರಲೋಕವನ್ನು ಪ್ರತಿಫಲದ ಸ್ಥಳವೆಂದು ಭಾವಿಸುವ ಮತ್ತು ತನ್ನ ಕರ್ಮಗಳ ಒಳಿತು-ಕೆಡುಕುಗಳಿಗನುಸಾರ ಶಾಶ್ವತ ಪುರಸ್ಕಾರ ಅಥವಾ ಶಿಕ್ಷೆಗೆ ಅರ್ಹನಾಗಲಿರುವೆನೆಂಬ ಪ್ರಜ್ಞೆ ಅವನಲ್ಲಿ ರೂಢಿಮೂಲವಾಗಿರುತ್ತದೆ. ಆದ್ದರಿಂದ ಅವನ ನಡೆ-ನುಡಿ, ಚಲನವಲನಗಳನ್ನು ನೋಡುವ ಯಾರಿಗೂ ಈ ವಿಶ್ವಾಸ ಸಿದ್ಧಾಂತವು ಅವನ ಮನಸ್ಸಿನೊಳಗೆ ಆಳವಾಗಿ ಇಳಿದಿರುವುದನ್ನು ಗ್ರಹಿಸಬಹುದು.

ಇನ್ನು ಇಸ್ಲಾಮೀ ಸಂಸ್ಕೃತಿಯ ಚರಿತ್ರೆಯನ್ನು ಅಭ್ಯಸಿಸಿದರೆ, ಅದರಲ್ಲಿ ಅಪ್ಪಟ ಇಸ್ಲಾಮ್ ಇದ್ದಾಗ ಅದೊಂದು ಅಪ್ಪಟ ಪ್ರಾಯೋಗಿಕ ಸಂಸ್ಕೃತಿಯಾಗಿತ್ತೆಂದು ತಿಳಿಯಬಹುದು. ಅದರ ಅನುಯಾಯಿಗಳು ಈ ಲೋಕವನ್ನು ಪರಲೋಕದ ಹೊಲವೆಂದು ಭಾವಿಸಿದ್ದರು. ಪರಲೋಕದಲ್ಲಿ ಉತ್ತಮ ಕೊಯ್ಲನ್ನು ಪಡೆಯಲಿಕ್ಕಾಗಿ ಅವರು ಇಲ್ಲಿ ಪರಿಶ್ರಮಿಸಿದರು. ಅವರು ಸನ್ಯಾಸ ಮತ್ತು ಆಡಂಬರಗಳ ಮಧ್ಯೆ ಒಂದು ಸಂತುಲಿತ ಮಾರ್ಗವನ್ನು ಅವಲಂಬಿಸಿದರು. ಇದು ಇತರ ಯಾವುದೇ ಸಂಸ್ಕೃತಿಯಲ್ಲಿ ಕಾಣಲು ಸಾಧ್ಯವಿಲ್ಲ. ದೇವ ಪ್ರಾತಿನಿಧ್ಯದ ಕಲ್ಪನೆಯು ಅವರನ್ನು ಲೋಕದ ವ್ಯವಹಾರಗಳಲ್ಲಿ ಅತ್ಯಾಸಕ್ತಿಯಿಂದ ತೊಡಗಿಸುವಂತೆ ಮಾಡಿದರೆ, ಪರಲೋಕದ ವಿಚಾರಣೆ ಮತ್ತು ಹೊಣೆಗಾರಿಕೆಯ ಪ್ರಜ್ಞೆಯು ಅವರನ್ನು ಹದಮೀರದಂತೆ ತಡೆಯುತ್ತಿತ್ತು. ಅದರಿಂದಾಗಿ ಅವರಲ್ಲಿ ಅಹಂಕಾರದ ಭಾವನೆಯೂ ನುಸುಳಲಿಲ್ಲ. ಈ ಲೋಕದಲ್ಲಿ ಅವರು ಸದಾ ಇರುವೆವೋ ಎಂಬಂತೆ ಚಟುವಟಿಕೆಯಲ್ಲಿ ನಿರತರಾಗಿದ್ದರು. ಆದರೆ ಇಲ್ಲಿನ ಸುಖಾಡಂಬರಗಳಿಂದ ದೂರವಿದ್ದರು. ಅವರು ಈ ಲೋಕವನ್ನು ಒಂದು ತಂಗುದಾಣವೆಂಬಂತೆ ಬಳಸಿದರು. ಒಂದು ದಿನ ಇಲ್ಲಿಂದ ನಿರ್ಗಮಿಸಲೇಬೇಕಾಗಿದೆಯೆಂಬ ಪ್ರಜ್ಞೆ ಅವರಲ್ಲಿ ಸದಾ ಜಾಗೃತವಾಗಿತ್ತು.

ಆದರೆ ಅನಂತರದ ಕಾಲದಲ್ಲಿ, ಇತರ ಸಂಸ್ಕೃತಿಗಳಿಂದ ಪ್ರಭಾವಿತರಾದ ಕಾರಣ, ಲೌಕಿಕ ಜೀವನದ ಕುರಿತು ಇಸ್ಲಾಮಿನ ಕಲ್ಪನೆಗೆ ವಿರುದ್ಧವಾದ ಜೀವನ ಶೈಲಿ ಮುಸ್ಲಿಮರಲ್ಲಿ ಮನೆ ಮಾಡಿತ್ತು. ಅವರು ಸುಖಾಡಂಬರದಲ್ಲಿ ತಲ್ಲೀನರಾದರು. ದೊಡ್ಡ ದೊಡ್ಡ ಮಹಲುಗಳನ್ನು ನಿರ್ಮಿಸಿದರು. ಸಂಗೀತ, ಚಿತ್ರಕಲೆ, ಕೆತ್ತನೆ ಮತ್ತಿತರ ಲಲಿತ ಕಲೆಗಳಲ್ಲಿ ಆಸಕ್ತಿ ತೋರಿದರು. ದುಂದು ವೆಚ್ಚ ಮತ್ತು ಅನಾವ್ಯಯವು ಅವರ ಜೀವನ ಶೈಲಿಯಾಯಿತು. ಆಡಳಿತ ಮತ್ತಿತರ ವಿಷಯಗಳಲ್ಲಿ ಇಸ್ಲಾಮಿಗೆ ವಿರುದ್ಧವಾದಂತಹ ವಿಧಾನಗಳನ್ನು ಅನುಸರಿಸಿದರು. ಆದರೂ ಲೌಕಿಕ ಜೀವನದ ಇಸ್ಲಾಮೀ ಕಲ್ಪನೆ ಅವರ ಹೃದಯಾಂತರಾಳದಲ್ಲಿ ಹುದುಗಿದ್ದು ಆಗೊಮ್ಮೆ ಈಗೊಮ್ಮೆ ಅದರ ಪ್ರಭಾವವನ್ನು ವ್ಯಕ್ತಪಡಿಸುತ್ತಿತ್ತು. ಈ ಪ್ರಭಾವದಿಂದಾಗಿಯೇ ಅವರು ಇತರರಿಗೆ ಭಿನ್ನವಾಗಿ ಗೋಚರಿಸುತ್ತಿದ್ದರು. ಶಾಜಹಾನನು ಆಗ್ರಾದಲ್ಲಿ ಭವ್ಯ ಕಟ್ಟಡ ನಿರ್ಮಿಸಿದನು. ಸುಂದರ ಕಲಾಕೃತಿಯ ಮೂಲಕ ಅದನ್ನು ಜನಾಕರ್ಷಣೆಯ ಕೇಂದ್ರವಾಗಿ ಮಾಡಿದನು. ಜೊತೆಗೆ ಅದರ ಸುತ್ತ ಹರಡಿಕೊಂಡಿರುವ

ಸುಂದರ ಉದ್ಯಾನದ ಎಡಭಾಗದಲ್ಲಿ ಒಂದು ಮಸೀದಿಯನ್ನೂ ನಿರ್ಮಿಸಿದನು. ಈ ಕಟ್ಟಡವೇನೂ ಅಪೂರ್ವವಾದುದಲ್ಲ, ಅದಕ್ಕಿಂತ ಉತ್ತಮ ಭವನಗಳು ಇತರ ಜನಾಂಗಗಳಲ್ಲೂ ಕಾಣಬಹುದು. ಆದರೆ ಅಂತರಾಳದಲ್ಲಿರುವ ದೇವಭಯದ ಈ ಕಲ್ಪನೆಯು ಲೋಕದ ಬೇರಾವ ಜನತೆಯಲ್ಲೂ ಕಾಣಸಿಗದು.

ಇಸ್ಲಾಮಿನ ಇತಿಹಾಸದಲ್ಲಿ ಇಂತಹ ಅನೇಕಾರು ಉದಾಹರಣೆಗಳಿವೆ. ಕೈಸರ್-ಕಿಸ್ರಾರ ಮಾದರಿಯಲ್ಲಿ ಆಳುತ್ತಿರುವವರು ಒಂದು ವೈರಿ ಜನಾಂಗದ ಮೇಲೆ ವಿಜಯ ಸಾಧಿಸಿದರೆ, ಹೆಮ್ಮೆಯಿಂದ ಬೀಗುವ ಬದಲು ದೇವನ ಮುಂದೆ ಬಾಗಿದರು. ದಬ್ಬಾಳಿಕೆ ನಡೆಸುತ್ತಿದ್ದಂತಹ ಚಕ್ರವರ್ತಿಗಳು ಇಸ್ಲಾಮೀ ಶರೀಅತ್‌ಗೆ ವಿರುದ್ಧವಾಗಿ ವರ್ತಿಸಿದಾಗ ಯಾರೋ ಒಬ್ಬ ವಿದ್ವಾಂಸರು ಅವರನ್ನು ಟೀಕಿಸಿದಾಗ, ಅವರು ದೇವಭಯದಿಂದ ತತ್ತರಿಸಿ ಹೋದರು. ಅತ್ಯಂತ ದುಷ್ಟ ಹಾಗೂ ಪಾಪಿಗಳಿಗೆ, ಯಾವುದೋ ಒಂದು ಮಾತಿನಿಂದ ಎಚ್ಚರಗೊಂಡಾಗ ಅವರ ಜೀವನದ ಗತಿಯೇ ಬದಲಾಯಿತು. ಸಂಪತ್ತಿನ ಮೋಹದಲ್ಲಿ ಮುಳುಗಿದ್ದವರ ಹೃದಯದಲ್ಲಿ ಈ ಲೋಕದ ನಶ್ವರತೆ ಮತ್ತು ಪರಲೋಕದ ವಿಚಾರಣೆಯ ಭಾವನೆ ಮೂಡಿದಾಗ ಅವರು ತಮ್ಮ ಸಿರಿ ಸಂಪತ್ತನ್ನೆಲ್ಲ ಜನಸಾಮಾನ್ಯರಿಗೆ ಧಾರೆಯೆರೆದು ವೈರಾಗ್ಯದ ಜೀವನ ನಡೆಸಿದರು. ಒಟ್ಟಿನಲ್ಲಿ ಮುಸ್ಲಿಮರ ಬದುಕಿನಲ್ಲಿ ಹರಡಿಕೊಂಡಿರುವ ಎಲ್ಲ ಇಸ್ಲಾಮೇತರ ಪ್ರಭಾವಗಳ ಮಧ್ಯೆಯೂ ಒಟ್ಟು ಸಮುದಾಯದ ರೀತಿ-ನೀತಿಗಳಲ್ಲಿ ಒಂದಲ್ಲ ಒಂದು ರೀತಿಯಲ್ಲಿ ಇಸ್ಲಾಮಿನ ಕಲ್ಪನೆಯು ಪ್ರಕಟವಾಗಿರುವುದನ್ನು ಕಾಣಬಹುದು.

# ಜೀವನದ ಉದ್ದೇಶ

ಜೀವನದ ಕುರಿತು ನಾವು ಯಾವ ಕಲ್ಪನೆಯನ್ನಿರಿಸುತ್ತೇವೋ ಅದಕ್ಕನುಸಾರವಾದ ಜೀವಿತೋದ್ದೇಶವು ನಮ್ಮದಾಗಿರುವುದು. ನಾವು ಈ ಲೋಕವನ್ನು ತಿನ್ನಲು, ಕುಡಿಯಲು ಮತ್ತು ಭೋಗಿಸಲು ಲಭಿಸಿರುವ ಒಂದು ಅವಕಾಶವೆಂದು ಭಾವಿಸಿದರೆ, ಅದು ಪೈಶಾಚಿಕ ಕಲ್ಪನೆಯಾಗಿದ್ದು ಅದರಂತೆ ಒಂದು ಪೈಶಾಚಿಕ ಉದ್ದೇಶವನ್ನು ನಾವು ಹೊಂದುವೆವು. ಇನ್ನು, ನಾವು ಈ ಲೋಕವನ್ನು ನಮ್ಮ ಜನ್ಮ ಪಾಪದ ಶಿಕ್ಷೆ ಅನುಭವಿಸಲಿಕ್ಕಾಗಿರುವ ಒಂದು ಯಾತನಾಗೃಹವೆಂದು ಭಾವಿಸಿದರೆ, ಆ ಶಿಕ್ಷೆಯಿಂದ ಪಾರುಗೊಳ್ಳುವ ಆಗ್ರಹ ನಮ್ಮಲ್ಲುಂಟಾಗುವುದು. ಅದರಂತೆ ನಮ್ಮ ಜೀವನದ ಉದ್ದೇಶವು ಮುಕ್ತಿ ಪಡೆಯುವುದಾಗಿರುವುದು. ಆದರೆ ಮಾನವರೆಂಬ ನೆಲೆಯಲ್ಲಿ ನಾವು ಪ್ರಾಣಿಗಳೋ ಅಪರಾಧಿಗಳೋ ಆಗಿರುವುದಕ್ಕಿಂತ ಉನ್ನತವಾದ ಸ್ಥಾನ ಹೊಂದಿದವರೆಂದು ಭಾವಿಸಿದರೆ ನಮ್ಮ ಜೀವನೋದ್ದೇಶವು ಭೋಗ ಮತ್ತು ಮುಕ್ತಿ ಎರಡಕ್ಕಿಂತಲೂ ಉನ್ನತವಾಗಿರುವುದು.

ಇಸ್ಲಾಮ್ ಮಾನವನನ್ನು ದೇವನ ಪ್ರತಿನಿಧಿಯೆಂದು ಸಾರಿದೆ. ಪ್ರತಿನಿಧಿಯಾಗಿರುವಾಗ ಒಡೆಯನ ಆಜ್ಞಾಪಾಲಕನಾಗಿ ಅವನ ಸಂಪ್ರೀತಿ ಗಳಿಸುವುದೇ ಮಾನವನ ಉದ್ದೇಶವಾಗಿದೆ. ಈ ಉದ್ದೇಶವನ್ನು ಮಾನವನಿಗೆ ಮನದಟ್ಟು ಮಾಡಲು ಮತ್ತು ಅವನ ಮನಮಸ್ತಿಷ್ಕದಲ್ಲಿ ಇರಿಸಲು ಪವಿತ್ರ ಕುರ್‌ಆನ್ ಪ್ರಯತ್ನಿಸಿದೆ. ಇದರ ಹೊರತಾದ ಗುರಿ ಸಾಧಿಸುವ ಎಲ್ಲ ಉದ್ದೇಶಗಳನ್ನೂ ಇಸ್ಲಾಮ್ ಸಾರಾಸಗಟಾಗಿ ತಿರಸ್ಕರಿಸಿದೆ. ಅದು ಹೀಗೆ ಹೇಳುತ್ತದೆ.

"ಹೇಳಿರಿ- ನನ್ನ ನಮಾಝ್, ನನ್ನ ಸರ್ವ ಉಪಾಸನಾವಿಧಿಗಳು, ನನ್ನ ಜೀವನ ಮತ್ತು ನನ್ನ ಮರಣ ಎಲ್ಲವೂ ಯಾವ ಸಹಭಾಗಿಯೂ ಇಲ್ಲದ ಸರ್ವಲೋಕಪಾಲಕನಿಗಾಗಿದೆ- ಇದನ್ನೇ ನನಗೆ ಆದೇಶಿಸಲಾಗಿದೆ. ನಾನು ಆಜ್ಞಾನುಸರಣೆಯೊಂದಿಗೆ ಶಿರಬಾಗುವವರಲ್ಲಿ ಸರ್ವಪ್ರಥಮನಾಗಿರುತ್ತೇನೆ." (ಪವಿತ್ರ ಕುರ್‌ಆನ್, 6:162-163)

ಮುಸ್ಲಿಮರನ್ನು ಪ್ರಶಂಸಿಸುತ್ತಾ, ಅವರ ಸ್ನೇಹ-ವೈರ ಮತ್ತವರ ಆರಾಧನಾ ಕರ್ಮಗಳೆಲ್ಲ ಅಲ್ಲಾಹನಿಗಾಗಿಯೇ ಇದೆಯೆಂದು ಹೇಳಲಾಗಿದೆ.

**"ಮುಹಮ್ಮದ್ ಅಲ್ಲಾಹನ ಸಂದೇಶವಾಹಕರಾಗಿರುತ್ತಾರೆ. ಅವರ ಜೊತೆಗಿರುವವರು ಸತ್ಯನಿಷೇಧಿಗಳ ಪಾಲಿಗೆ ಕಠಿಣರೂ ಪರಸ್ಪರ ಕರುಣಾಳುಗಳೂ ಆಗಿರುತ್ತಾರೆ. ಅವರು ಬಾಗಿರುವ ಮತ್ತು ಸಾಷ್ಟಾಂಗವೆರಗಿರುವ ಸ್ಥಿತಿಯಲ್ಲಿ ಇರುವುದನ್ನು ಹಾಗೂ ಅಲ್ಲಾಹನ ಅನುಗ್ರಹ ಮತ್ತು ಅವನ ಸಂಪ್ರೀತಿಯನ್ನು ಅರಸುವುದರಲ್ಲಿ ತಲ್ಲೀನರಾಗಿರುವುದನ್ನು ನೀವು ಕಾಣುವಿರಿ." (ಪವಿತ್ರ ಕುರ್‌ಆನ್, 48:29)**

ಸತ್ಯನಿಷೇಧಿಗಳು ದೇವನಿಗಾಗಿ ಏನೂ ಮಾಡದೆ ಇತರ ಉದ್ದೇಶಗಳಿಗಾಗಿ ಕರ್ಮವೆಸಗುತ್ತಾರೆ. ತನ್ಮೂಲಕ ಅಲ್ಲಾಹನ ಕೋಪಕ್ಕೆ ಪಾತ್ರರಾಗುತ್ತಾರೆ. ಅಂತಹವರ ಕರ್ಮಗಳು ವ್ಯರ್ಥವಾಗುತ್ತದೆಯೆಂದು ಹೇಳಲಾಗಿದೆ.

**"ಇವರು ಅಲ್ಲಾಹನನ್ನು ಕೋಪಗೊಳಿಸುವಂತಹ ಮಾರ್ಗವನ್ನು ಅನುಸರಿಸಿದರು ಮತ್ತು ಅವನ ಮೆಚ್ಚುಗೆಯ ಮಾರ್ಗವನ್ನು ಅನುಸರಿಸಲು ಇಷ್ಟಪಡಲಿಲ್ಲವೆಂಬ ಕಾರಣದಿಂದಲೇ ಹೀಗಾಗುವುದು. ಆದುದರಿಂದಲೇ ಅವನು ಇವರ ಸಕಲ ಕರ್ಮಗಳನ್ನು ನಿರರ್ಥಕಗೊಳಿಸಿ ಬಿಟ್ಟನು." (ಪವಿತ್ರಕುರ್‌ಆನ್, 47:28)**

ಯಾವುದೇ ಸತ್ಕರ್ಮವು- ಅದು ಆರಾಧನೆಯಾಗಿರಲಿ, ಹಣ ಖರ್ಚು ಮಾಡುವ ವಿಷಯವಾಗಿರಲಿ, ಬಡವರಿಗೆ ಉಣಿಸುವ ವಿಷಯವಾಗಿರಲಿ, ವ್ಯಾಪಾರ ವಹಿವಾಟು, ಯುದ್ಧದಂತಹ ಅಪ್ಪಟ ಲೌಕಿಕ ಕಾರ್ಯಗಳೇ ಆಗಿರಲಿ ಎಲ್ಲವೂ ಅಲ್ಲಾಹನ ಸಂಪ್ರೀತಿಯನ್ನು ಉದ್ದೇಶವಾಗಿಟ್ಟುಕೊಂಡು ಮಾಡಿದರೆ ಮಾತ್ರ ಅವು ದೇವನ ಬಳಿ ಸ್ವೀಕೃತವಾಗುವುದು, ಅನ್ಯಥಾ ಅವೆಲ್ಲವೂ ವ್ಯರ್ಥಶ್ರಮಗಳಾಗಿ ಬಿಡುವುದು. ಪ್ರವಾದಿ ಮುಹಮ್ಮದ್(ಸ) ಈ ಎಲ್ಲಾ ಶಿಕ್ಷಣಗಳನ್ನು ಕೇವಲ ಒಂದು ಸಣ್ಣ ವಾಕ್ಯದಲ್ಲಿ ಈ ರೀತಿ ವಿವರಿಸಿದ್ದಾರೆ. "ಅಲ್ಲಾಹನಿಗಾಗಿ ಮಾತ್ರ ಮಾಡುವ ಹಾಗೂ ಅವನ ಸಂಪ್ರೀತಿಯ ಗುರಿ ಹೊಂದಿರುವ ಕರ್ಮಗಳನ್ನು ಮಾತ್ರ ಅವನು ಸ್ವೀಕರಿಸುತ್ತಾನೆ." ಇದು ಎಲ್ಲ ಆರಾಧನೆಗಳಿಗೂ ಎಲ್ಲ ವ್ಯವಹಾರಗಳಿಗೂ ಅನ್ವಯವಾಗುತ್ತದೆ. ಒಟ್ಟಿನಲ್ಲಿ ಇಸ್ಲಾಮ್ ಎಲ್ಲ ರೀತಿಯ ಲೌಕಿಕ ಮತ್ತು ಪಾರಲೌಕಿಕ ಉದ್ದೇಶಗಳನ್ನು ಬದಿಗಿಟ್ಟು, ಅಲ್ಲಾಹನ ಸಂಪ್ರೀತಿಯ ಗಳಿಕೆಯನ್ನು ಮಾತ್ರ ಜೀವನದ ಪರಮೋನ್ನತ ಗುರಿಯಾಗಿ ನಿಶ್ಚಯಿಸಿದೆ. ಇದರ ವೈಶಿಷ್ಟ್ಯಗಳೇನೆಂಬುದನ್ನು ಅರಿಯೋಣ.

## 1. ಭೌತಿಕ ಮತ್ತು ಬೌದ್ಧಿಕ ಉದ್ದೇಶದ ಸಮನ್ವಯ

ಪ್ರಪಂಚದ ಕುರಿತು ಇಸ್ಲಾಮಿನ ಸಿದ್ಧಾಂತವು ದೃಢವಾದ ನಂಬಿಕೆಯೆಡೆಗೊಯ್ಯುತ್ತದೆ. ಈ ಅಗಾಧ ಪ್ರಪಂಚದ ಸಾಮ್ರಾಟ ಒಬ್ಬನೇ ಅಲ್ಲಾಹ್. ಉಳಿದೆಲ್ಲವೂ ಅವನಿಗೆ ಅಧೀನವಾಗಿವೆ. ಅವನ ಮುಂದೆಯೇ ಬಾಗಿವೆ. ಇದರಲ್ಲಿ ಮಾನವನೂ ಸೇರಿದ್ದಾನೆ. ಇದನ್ನೇ ಇಸ್ಲಾಮ್ ಎನ್ನಲಾಗುತ್ತದೆ. ಅಂದರೆ ಎಲ್ಲವೂ ಅಲ್ಲಾಹನಿಗೆ ಅರಿತೋ ಅರಿಯದೆಯೋ ತಲೆಬಾಗುತ್ತಿವೆ. ಪ್ರಕೃತಿಗನುಸಾರವಾಗಿ ಅವೆಲ್ಲವೂ ಈ ಧರ್ಮವನ್ನೇ ಪಾಲಿಸುತ್ತಿವೆ.

"ಆಕಾಶಗಳ ಮತ್ತು ಭೂಮಿಯ ಸಕಲ ವಸ್ತುಗಳೂ ಬಯಸಿಯೋ ಬಯಸದೆಯೋ ಅಲ್ಲಾಹನ ಆಜ್ಞಾಪಾಲಕಗಳಾಗಿ(ಮುಸ್ಲಿಮ್‌ಗಳಾಗಿ)ಯೇ ಇವೆ ಮತ್ತು ಸರ್ವರಿಗೂ ಅವನ ಕಡೆಗೇ ಮರಳಲಿಕ್ಕಿದೆ." (ಪವಿತ್ರ ಕುರ್‌ಆನ್, 3:83) ಈ ಕಾನೂನಿನ ಪ್ರಕಾರ, ಮಾನವನೂ ಸೇರಿದಂತೆ ಎಲ್ಲವೂ ನಿಸರ್ಗ ನಿಯಮಕ್ಕೆ ಬದ್ಧವಾಗಿವೆ. ಅಂದರೆ ಮಾನವನ ನೈಸರ್ಗಿಕ ಉದ್ದೇಶ ಹಾಗೂ ಗುರಿ ದೇವನಾಗಿದ್ದಾನೆ. ಮಾನವನು ಇದನ್ನು ಬುದ್ಧಿಪೂರ್ವಕವಾಗಿ ಅರಿತು ತನ್ನ ಆಚಾರ-ವಿಚಾರಗಳನ್ನು ಅದರೊಂದಿಗೆ ಸಮನ್ವಯಗೊಳಿಸಿದರೆ ಅವನು ಈ ಪ್ರಪಂಚದ ಸಕಲ ವಸ್ತುಗಳ ನೇತಾರ ಮತ್ತು ಮಾರ್ಗದರ್ಶಕನಾಗಬಲ್ಲನು. ಇದರ ಹೊರತು ಬೇರಾವುದಾದರೂ ಉದ್ದೇಶವನ್ನಿಟ್ಟುಕೊಂಡರೆ ಅವನು ಪಶ್ಚಿಮಕ್ಕೆ ಸಾಗುತ್ತಿರುವ ಕಾರವಾನದಲ್ಲಿ ಪೂರ್ವಕ್ಕೆ ಚಲಿಸಿದವನಂತಾಗುವನು. ಇದರಿಂದ ಅವನು ನೈಜ ಗುರಿಯೆಡೆಗೆ ತಲಪಲಾರನು. ಅವನ ಈ ಪ್ರಕೃತಿ ವಿರುದ್ಧ ಚಲನೆಯು ಅವನನ್ನು ವಿನಾಶದ ಪಾತಾಳಕ್ಕೊಯ್ಯುವುದು.

## 2. ಇಸ್ಲಾಮೀ ವ್ಯವಸ್ಥೆಯ ಆಕರ್ಷಕ ಶಕ್ತಿ

ಇಸ್ಲಾಮ್ ಧರ್ಮದ ಪೂರ್ಣ ವ್ಯವಸ್ಥೆಯ ಕೇಂದ್ರ ಬಿಂದು ಅಲ್ಲಾಹನಾಗಿದ್ದು ಅದೇ ಕೇಂದ್ರದ ಸುತ್ತ ಈ ಇಡೀ ವ್ಯವಸ್ಥೆ ತಿರುಗುತ್ತದೆ. ಇದರಲ್ಲಿರುವ ಎಲ್ಲವೂ ಅವನತ್ತಲೇ ಮುಖ ಮಾಡಿವೆ. ಅದು ವಿಶ್ವಾಸ ಸಂಬಂಧಿಯಾಗಿರಲಿ, ಆರಾಧನೆ ಮತ್ತು ಜೀವನ ಇತರ ವ್ಯವಹಾರಗಳಿಗೆ ಸಂಬಂಧಿಸಿದ್ದಾಗಿರಲಿ, ಅವೆಲ್ಲವೂ ಆ ಕೇಂದ್ರದೊಂದಿಗೆ ಆಕರ್ಷಕ ಸಂಬಂಧವನ್ನು ಹೊಂದಿವೆ. ಇದನ್ನು ಧರ್ಮ ಮತ್ತು ಇಸ್ಲಾಮ್ ಎಂದು ಕರೆಯಲಾಗುತ್ತದೆ. ಇದರ ಅರ್ಥವೇ ದಾಸನು ದೇವ ಸಂಪ್ರೀತಿಯ ಮುಂದೆ ತಲೆಬಾಗುವುದು ಮತ್ತು ಅವನ ಇಚ್ಛೆಗೆ ಅಧೀನವಾಗುವುದಾಗಿದೆ.

"ತನ್ನನ್ನು ಅಲ್ಲಾಹನಿಗೆ ಅರ್ಪಿಸಿಕೊಂಡು ಕಾರ್ಯತಃ ಸತ್ಕರ್ಮಿಯೂ ಆದವನು ವಾಸ್ತವದಲ್ಲಿ ಭರವಸೆಗೆ ಯೋಗ್ಯವಾದ ಒಂದು ಆಧಾರವನ್ನು ಬಿಗಿ ಹಿಡಿದುಕೊಂಡನು."

(ಪವಿತ್ರ ಕುರ್‌ಆನ್, 31:22)

ಇಸ್ಲಾಮಿನಲ್ಲಿ ಏನೆಲ್ಲ ಇವೆಯೋ ಅವು ಅಲ್ಲಾಹನಿಗಾಗಿರಬೇಕು. ನಮಾಝ್ ಅಲ್ಲಾಹನಿಗಾಗದಿದ್ದರೆ ಅದು ಕೇವಲ ದೈಹಿಕ ಅಭ್ಯಾಸವಾಗಿದೆ. ಉಪವಾಸ ಆತನಿಗಾಗದಿದ್ದರೆ ಅದು ಕೇವಲ ಹಸಿವು-ಬಾಯಾರಿಕೆಯಾಗಿದೆ. ಝಕಾತ್ ಮತ್ತಿತರ ದಾನಧರ್ಮಗಳು ಅಲ್ಲಾಹನಿಗಾಗಿರದಿದ್ದರೆ ಅದು ಕೇವಲ ಹಣ ಪೋಲಾಗಿದೆ. ಹಜ್ಜ್ ಕೂಡಾ ಅಲ್ಲಾಹನಿಗಾಗದಿದ್ದರೆ ಅದರಿಂದ ಸಮಯ, ಹಣ ಮತ್ತು ಪರಿಶ್ರಮಗಳು ವ್ಯರ್ಥವಾಗುತ್ತದೆ. ಅದೇ ರೀತಿ ಯುದ್ಧ ಮತ್ತು ಜಿಹಾದ್ ಅಲ್ಲಾಹನಿಗಾಗಿದ್ದರೆ ಅದು ಅತ್ಯುತ್ತಮ ಆರಾಧನಾ ಕರ್ಮವಾಗಿದೆ. ಅನ್ಯಥಾ ಕೇವಲ ಕ್ಷೋಭೆ ಮತ್ತು ರಕ್ತಪಾತವಾಗಿದೆ. ಇಸ್ಲಾಮಿನ ಇತರ

ಎಲ್ಲ ವಿಧಿಗಳಿಗೂ ಇದು ಅನ್ವಯಿಸುತ್ತದೆ. ಅವು ಅಲ್ಲಾಹನಿಗಾಗಿದ್ದರೆ ಪುಣ್ಯಫಲಾರ್ಹವಾಗಿದೆ. ಅನ್ಯಥಾ ವ್ಯರ್ಥ. ಇಸ್ಲಾಮ್ ಯಾವುದರಿಂದೆಲ್ಲ ತಡೆದಿದೆಯೋ ಅವುಗಳನ್ನು ಅಲ್ಲಾಹನ ಸಂಪ್ರೀತಿಗಾಗಿ ತೊರೆದಿದ್ದರೆ ಅದು ಫಲಕಾರಿ, ಅನ್ಯಥಾ ವ್ಯರ್ಥ.

ಇಸ್ಲಾಮೀ ವ್ಯವಸ್ಥೆಯಲ್ಲಿ ಕಂಡು ಬರುವ ಈ ಕೇಂದ್ರೀಕರಣವು ಎಲ್ಲವೂ ಅಲ್ಲಾಹನಿಗಾಗಿದೆ ಎಂಬ ಮೂಲ ಧ್ಯೇಯದಿಂದ ಹುಟ್ಟಿಕೊಂಡದ್ದಾಗಿದೆ. ಇದೇ ಆಕರ್ಷಕ ಶಕ್ತಿ ಇಸ್ಲಾಮೀ ವ್ಯವಸ್ಥೆಯ ಎಲ್ಲ ಘಟಕಗಳಲ್ಲೂ ಕೇಂದ್ರದೊಡನೆ ಸಂಬಂಧ ಹೊಂದಿರುವ ಒಂದು ಪ್ರಬಲ ಶಕ್ತಿಯನ್ನುಂಟು ಮಾಡಿದೆ. ಅದು ಸೌರವ್ಯೂಹವನ್ನು ನಾವು ಹೇಗೆ ಸಂಪೂರ್ಣ ಹಾಗೂ ಪ್ರಬಲ ವ್ಯವಸ್ಥೆ ಯೆನ್ನುತ್ತೇವೊ ಅದೇ ರೀತಿಯಲ್ಲಿ ಈ ಮೂಲಧ್ಯೇಯವನ್ನು ಪರಿಪೂರ್ಣ ಮತ್ತು ಪ್ರಬಲ ವ್ಯವಸ್ಥೆಯಾಗಿ ಮಾಡಿದೆ. ಈ ಧ್ಯೇಯವಿಲ್ಲದಿರುತ್ತಿದ್ದರೆ ಇಸ್ಲಾಮ್ ಧರ್ಮದಲ್ಲಿ ಈ ವ್ಯವಸ್ಥೆಯೂ ಇರುತ್ತಿರಲಿಲ್ಲ.

## 3. ವಿಚಾರ-ಕರ್ಮಗಳ ಏಕತಾನತೆ

ಇಸ್ಲಾಮಿನ ಧಾರ್ಮಿಕ ವ್ಯವಸ್ಥೆಯಲ್ಲಿ ಈ ಧ್ಯೇಯವು ಯಾವ ರೀತಿ ಕೇಂದ್ರೀಯತೆ ಮತ್ತು ಶಿಸ್ತುಬದ್ಧತೆಯ ಶಕ್ತಿಯನ್ನುಂಟು ಮಾಡುತ್ತದೋ ಅದೇ ರೀತಿ ಮಾನವನ ವಿಚಾರ, ಉದ್ದೇಶ, ಮೂಲಭೂತ ವಿಶ್ವಾಸ ಮತ್ತು ಕರ್ಮಗಳಲ್ಲೂ ಪೂರ್ಣ ಏಕತೆಯನ್ನುಂಟು ಮಾಡುತ್ತದೆ ಮತ್ತು ಒಂದು ಅತ್ಯುನ್ನತ ಉದ್ದೇಶದೆಡೆಗೆ ಗಮನ ಸೆಳೆಯುತ್ತದೆ. ಯಾರ ಮುಂದೆ ಭೌತಿಕ ಆಗ್ರಹಗಳ ಶಮನ ಅಥವಾ ಆಧ್ಯಾತ್ಮಿಕ ಉನ್ನತಿಯ ಗಳಿಕೆಯಿರುವುದೋ ಅವನಲ್ಲಿ ವಿಚಾರ-ಕರ್ಮಗಳ ಏಕತೆ ಸಾಧ್ಯವಿಲ್ಲ, ಏಕೆಂದರೆ ಅವನ ಜೀವನವು ಒಂದು ಉದ್ದೇಶದಿಂದ ಇನ್ನೊಂದು ಉದ್ದೇಶದ ಕಡೆಗೆ ಹಾರುತ್ತಲಿರುತ್ತದೆ. ಆದರೆ ಇಸ್ಲಾಮಿನ ಧ್ಯೇಯವು ಮಾನವನ ವೈಚಾರಿಕ ಮತ್ತು ಬೌದ್ಧಿಕ ರಂಗದಲ್ಲಿ ಮಾನವನ ಏಕೈಕ ಧ್ಯೇಯವಾಗಬಲ್ಲುದು. ಆತ ಎಷ್ಟೇ ಉನ್ನತ ಪದವಿ ಪಡೆದರೂ ಅವನಿಗೆ ಈ ಉದ್ದೇಶವನ್ನು ಬದಲಿಸುವ ಅಗತ್ಯವಿರುವುದಿಲ್ಲ.

## 4. ಸಾಮೂಹಿಕತೆಯಲ್ಲಿ ನಿಸ್ವಾರ್ಥತೆ

ಈ ಧ್ಯೇಯೋದ್ದೇಶವು ವ್ಯಕ್ತಿಯದ್ದಾಗಿರುವಂತೆಯೇ ಒಂದು ಸಂಘಟನೆ, ಒಂದು ಜನತೆ ಮತ್ತು ಸಂಪೂರ್ಣ ಮಾನವ ಕೋಟಿಯ ಉದ್ದೇಶವೂ ಆಗಿರಬಲ್ಲುದು. ಇದರಲ್ಲಿ ವೈಯಕ್ತಿಕ ಹಿತಾಸಕ್ತಿಯಾಗಲಿ, ಸಾಮೂಹಿಕ ಸ್ವಾರ್ಥವಾಗಲಿ ಇಲ್ಲ. ಇದು ಮಾನವರನ್ನು ಒಡೆಯುವುದಿಲ್ಲ. ಜನಾಂಗ, ಗೋತ್ರಗಳಾಗಿ ವಿಂಗಡಿಸುವುದಿಲ್ಲ. ಮಾನವ-ಮಾನವರೊಳಗೆ ಪೈಪೋಟಿ ಹಾಗೂ ವೈರ-ವಿದ್ವೇಷಗಳ ಭಾವನೆಯನ್ನು ಬೆಳೆಸುವುದಿಲ್ಲ. ಇದಕ್ಕೆ ವ್ಯತಿರಿಕ್ತವಾಗಿ ಈ ಉದ್ದೇಶವು ಮಾನವನನ್ನು ಸಕಲ ಮಾನವರೊಂದಿಗೂ ಸಮಾನ ಸಂಬಂಧವಿರುವವನತ್ತ

ಗಮನ ಸೆಳೆಯುತ್ತದೆ. ಆಗ ಅವರಲ್ಲಿ ಸ್ಪರ್ಧೆಯ ಬದಲು ಪರಸ್ಪರ ಸಹಕಾರ ಮತ್ತು ಸಹೋದರತೆಯ ಭಾವನೆಯನ್ನು ಬೆಳೆಸಿ ಅವರನ್ನು ಒಂದುಗೂಡಿಸುತ್ತದೆ.

ಲೋಕದಲ್ಲಿ ಕಾಣುವ ಭೌತಿಕ ಉದ್ದೇಶಗಳ ಮಾರ್ಗದಲ್ಲಿ ಇಬ್ಬರು ವ್ಯಕ್ತಿಗಳಿಗೆ ನಿಸ್ಪೃಹತೆಯಿಂದ ಪರಸ್ಪರ ಸಹಕಾರದೊಂದಿಗೆ ಬಾಳಲು ಸಾಧ್ಯವಿಲ್ಲ. ಸಹೋದರ-ಸಹೋದರರು, ತಂದೆ-ಮಕ್ಕಳು, ತಾಯಿ-ಪುತ್ರಿಯರು ಕೂಡ ಪರಸ್ಪರ ಸಂಘರ್ಷ, ವೈರ-ವಿದ್ವೇಷಗಳೊಂದಿಗೆ ಬಾಳುವುದನ್ನು ಕಾಣಬಹುದು. ಆದರೆ ಅಲ್ಲಾಹನ ಧರ್ಮದ ಈ ಉದ್ದೇಶದ ಕಡೆಗೆ ಕೋಟ್ಯಾನುಗಟ್ಟಲೆ ಜನರು ಯಾವುದೇ ಪೈಪೋಟಿ, ಸಂಘರ್ಷ, ಪ್ರತಿರೋಧಗಳಿಲ್ಲದೆ ಸಾಗಬಲ್ಲರು. ಅವರು ಪರಸ್ಪರ ಡಿಕ್ಕಿ ಹೊಡೆಯುವುದೂ ಇಲ್ಲ, ಅಷ್ಟೇ ಅಲ್ಲ, ಈ ಪ್ರಯಾಣದಲ್ಲಿ ಜನರು ಪರಸ್ಪರ ಸಹಾಯ ಮಾಡುವವರು, ಸಹಕಾರ ನೀಡುವವರು, ತಮ್ಮ ಸುಖ-ಸಂತೋಷಕ್ಕಿಂತ ಇತರರ ಸುಖ-ಸಂತೋಷವನ್ನು ನೋಡುವವರು, ಇತರರ ಕಷ್ಟಗಳ ವೇಳೆ ತನ್ನ ಕಷ್ಟವನ್ನು ಮರೆಯುವವರಾಗಿರುವರು. ಅವರ ಅಂತಿಮ ಗುರಿಯು ಅಲ್ಲಾಹನ ಸಂಪ್ರೀತಿಯಾಗಿರುವುದು.

ವಾಸ್ತವದಲ್ಲಿ ಕುಲ, ಗೋತ್ರ, ವರ್ಗ, ವರ್ಣ, ಭಾಷೆ ಮತ್ತು ಭೌಗೋಳಿಕ ಮೇರೆಗಳ ತಾರತಮ್ಯವನ್ನು ಅಳಿಸಿ ಒಂದು ಸಾರ್ವಲೌಕಿಕ ಜನಾಂಗ ಮತ್ತು ಅಂತಾರಾಷ್ಟ್ರೀಯ ಮಾನವ ಕೂಟದ ರಚನೆಗೆ ಯಾವ ಕೇಂದ್ರೀಯ ವಿಚಾರದ ಅಗತ್ಯವಿದೆಯೋ ಅದು ಪರಿಪೂರ್ಣವಾಗಿ ಈ ಧ್ಯೇಯದಲ್ಲಿ ಅಡಕವಾಗಿದೆ. ಸಾರ್ವಲೌಕಿಕ ನಾಗರಿಕತೆಗೆ ಇದಕ್ಕಿಂತ ಉತ್ತಮ ಧ್ಯೇಯ ಬೇರೊಂದಿಲ್ಲ. ಇದು ಒಬ್ಬನ ವ್ಯಕ್ತಿತ್ವವನ್ನು ರಕ್ಷಿಸುವ ಜೊತೆಗೆ ವೈಯಕ್ತಿಕವಾದ ಎಲ್ಲ ಒಲವುಗಳನ್ನು ಅಳಿಸಿ ಹಾಕಿ ಅಪ್ಪಟ ಮಾನವೀಯ ಸಂಘಟನೆಯನ್ನು ರೂಪಿಸುತ್ತದೆ.

## 5. ಎಲ್ಲ ಮಾನವೀಯ ಬಯಕೆಗಳ ಈಡೇರಿಕೆ

ಮಾನವನು ಈ ಲೋಕದಲ್ಲಿ ವೈಯಕ್ತಿಕವಾಗಿಯೂ ಸಾಮೂಹಿಕವಾಗಿಯೂ ಬಯಸುವ ಎಲ್ಲವೂ (ಅವುಗಳನ್ನೇ ಗುರಿಯಾಗಿರಿಸದಿದ್ದರೆ) ಲಭಿಸುವುದು. ಕುರ್‌ಆನ್ ಅವೆಲ್ಲವನ್ನೂ ಒಂದೊಂದಾಗಿ ಎತ್ತಿ ತೋರಿಸಿದೆ. ಅಲ್ಲಾಹನ ಸಂಪ್ರೀತಿಯಿದ್ದರೆ ಅವೆಲ್ಲವೂ ಖಂಡಿತ ಸಿಗುತ್ತದೆ.

ಪ್ರಪ್ರಥಮವಾಗಿ ಮಾನವನು ಬಯಸುವುದು ಶಾಂತಿ, ಸಮಾಧಾನ ಮತ್ತು ಮನಶ್ಶಾಂತಿ. ಅಲ್ಲಾಹನತ್ತ ಮರಳಿದರೆ ಮತ್ತು ಅವನ ಸಂಪ್ರೀತಿಯನ್ನು ಬಯಸಿದರೆ ಅದು ನಿಮಗೆ ಲಭಿಸುವುದೆಂದು ಕುರ್‌ಆನ್ ಹೇಳುತ್ತದೆ.

**"ಹಾಗೇನೂ ಇಲ್ಲ, (ಅಂತಹ ವೈಶಿಷ್ಟ್ಯವೇನೂ ಯಾರಿಗೂ ಇಲ್ಲ) ಅಲ್ಲಾಹನಿಗೆ ಆತ್ಮಾರ್ಪಣೆಗೈಯುವ ಮತ್ತು ಸತ್ಸಂಪ್ರದಾಯದಲ್ಲಿ ನಡೆಯುವಾತನು ಯಾರೇ ಇರಲಿ, ಅವನಿಗೆ ಅವನ ಪ್ರಭುವಿನ ಬಳಿ ಅವನ ಪ್ರತಿಫಲವಿದೆ. ಅಂತಹವರಿಗೆ ಯಾವುದೇ ಭಯ ಮತ್ತು ವ್ಯಥೆಯ ಸಂಭವವೇ ಇರಲಾರದು." (ಪವಿತ್ರ ಕುರ್‌ಆನ್, 2:112)**

"ಇಂತಹವರೇ (ಈ ಪ್ರವಾದಿಯ ಆಹ್ವಾನವನ್ನು) ಸ್ವೀಕರಿಸಿದ್ದಾರೆ ಮತ್ತು ಅವರ ಹೃದಯಗಳಿಗೆ ಅಲ್ಲಾಹನ ಸ್ಮರಣೆಯಿಂದ ಶಾಂತಿಯೊದಗುತ್ತದೆ. ಕೇಳಿರಿ, ಮನಶ್ಶಾಂತಿ ಯೊದಗುವುದು ಅಲ್ಲಾಹನ ಸ್ಮರಣೆಯಿಂದಲೇ ಎಂಬುದು ಖಚಿತ."

(ಪವಿತ್ರ ಕುರ್‌ಆನ್, 13:28)

ಮಾನವನು ಬಯಸುವ ಎರಡನೆಯ ವಿಷಯ ಸಂಪನ್ನತೆಯಾಗಿದೆ. ಅಂದರೆ ಯಾವುದೇ ಸಂಕಷ್ಟಗಳಿಲ್ಲದ ಬದುಕು. ಅಲ್ಲಾಹನ ಮೇಲೆ ವಿಶ್ವಾಸವಿಟ್ಟು, ಆತನ ಕೋಪದಿಂದ ದೂರವಿರುವುದರಿಂದ ಮತ್ತು ಅವನಿಗಾಗಿ ಸಾತ್ವಿಕ ಬದುಕು ನಡೆಸುವುದರಿಂದ ಇದು ಚೆನ್ನಾಗಿ ಲಭಿಸುವುದೆಂದು ಕುರ್‌ಆನ್ ಹೇಳುತ್ತದೆ.

"ನಾಡಿನವರು ವಿಶ್ವಾಸವಿರಿಸುತ್ತಿದ್ದರೆ ಮತ್ತು ದೇವಭಯವಿರಿಸುತ್ತಿದ್ದರೆ, ನಾವು ಅವರಿಗೆ ಆಕಾಶ ಮತ್ತು ಭೂಮಿಯಿಂದ ಸಮೃದ್ಧಿಯ ದ್ವಾರಗಳನ್ನು ತೆರೆದು ಕೊಡುತ್ತಿದ್ದೆವು. ಆದರೆ ಅವರು ಸುಳ್ಳಾಗಿಸಿದರು. ಆದುದರಿಂದ ಅವರು ಶೇಖರಿಸುತ್ತಿದ್ದ ಕೆಟ್ಟ ಗಳಿಕೆಗಾಗಿ ಅವರನ್ನು ನಾವು ಹಿಡಿದುಬಿಟ್ಟೆವು." (ಪವಿತ್ರ ಕುರ್‌ಆನ್, 7:96)

"ಪುರುಷನಾಗಿರಲಿ, ಸ್ತ್ರೀ ಆಗಿರಲಿ ಯಾರು ಸತ್ಕರ್ಮವೆಸಗುವನೋ ಅವನು ಸತ್ಯವಿಶ್ವಾಸಿ ಯಾಗಿದ್ದರೆ ಅವನಿಗೆ ನಾವು ಇಹಲೋಕದಲ್ಲಿ ಪರಿಶುದ್ಧ ಜೀವನವನ್ನು ದಯಪಾಲಿಸುವೆವು ಮತ್ತು ಇಂತಹವರಿಗೆ (ಪರಲೋಕದಲ್ಲಿ) ಅವರ ಅತ್ಯುತ್ತಮ ಕರ್ಮಗಳಿಗನುಸಾರ ಪ್ರತಿಫಲ ನೀಡುವೆವು." (ಪವಿತ್ರ ಕುರ್‌ಆನ್, 16:97)

ಮೂರನೆಯ ವಿಷಯ ಮಾನವನು ಬಯಸುವುದು ಪ್ರಾಬಲ್ಯ ಮತ್ತು ಅಧಿಕಾರವಾಗಿದೆ. ಇದು ಮಾನವನ ದೊಡ್ಡ ಬಯಕೆಯಾಗಿದೆ. ಕುರ್‌ಆನ್ ಹೇಳುತ್ತದೆ- ನೀವು ಅಲ್ಲಾಹನಿಗೆ ಶರಣಾಗಿ ಬದುಕಿದರೆ ಇದೂ ನಿಮಗೆ ಲಭಿಸುವುದು.

"ನಿಮ್ಮ ಪೈಕಿ ಸತ್ಯವಿಶ್ವಾಸವಿರಿಸಿ ಸತ್ಕರ್ಮವೆಸಗಿದವರೊಡನೆ, ಅಲ್ಲಾಹನು ಅವರಿಗಿಂತ ಮುಂಚಿನವರನ್ನು ಭೂಮಿಯಲ್ಲಿ ಪ್ರತಿನಿಧಿಗಳಾಗಿ ಮಾಡಿದಂತೆಯೇ ಅವರನ್ನೂ ಮಾಡುವನೆಂದು ವಾಗ್ದಾನ ಮಾಡಿರುವನು. ತಾನು ಅವರಿಗಾಗಿ ಮೆಚ್ಚಿರುವ ಅವರ ಧರ್ಮವನ್ನು ಸುಭದ್ರ ಬುನಾದಿಗಳಲ್ಲಿ ಸ್ಥಾಪಿಸುವನು ಮತ್ತು ಅವರ (ಪ್ರಚಲಿತ) ಭಯಾವಸ್ಥೆಯನ್ನು ಶಾಂತಿ ಯಾಗಿ ಮಾರ್ಪಡಿಸಿ ಬಿಡುವನು. ಅವರು ನನ್ನ ದಾಸ್ಯ-ಆರಾಧನೆ ಮಾತ್ರ ಮಾಡಲಿ ಮತ್ತು ನನ್ನೊಂದಿಗೆ ಯಾರನ್ನೂ ಸಹಭಾಗಿಗಳಾಗಿ ಮಾಡದಿರಲಿ, ಇದಾದ ಬಳಿಕ ಯಾರು 'ದೇವ ಸಹಭಾಗಿತ್ವ' ಮಾಡುವರೋ ಅವರೇ ಕರ್ಮಭ್ರಷ್ಟರು."

(ಪವಿತ್ರ ಕುರ್‌ಆನ್, 24:55)

ಈ ಸೂಕ್ತಗಳಿಂದ ತಿಳಿದು ಬರುವ ವಿಚಾರವೇನೆಂಧರೆ ಇತರ ತತ್ವ ಸಿದ್ಧಾಂತಗಳು ತಮ್ಮ ಗುರಿಯನ್ನಾಗಿ ಮಾಡಿರುವಂತಹ ಇಂತಹ ವಿಷಯಗಳ ಕಡೆಗೆ ಇಸ್ಲಾಮ್ ಗಮನವನ್ನೇ ಕೊಡಲಿಲ್ಲ, ಬದಲಾಗಿ ಅವೆಲ್ಲ ಸ್ವಯಂ ಕೈ ಸೇರುವಂತಹ ಒಂದು ಮಹಾನ್ ಧ್ಯೇಯದ

ಕಡೆಗೆ ಗಮನ ಹರಿಸಿದೆ. ಇತರರು ಯಾವ ಉದ್ದೇಶಗಳಿಗಾಗಿ ತಮ್ಮ ತನು-ಮನ-ಧನವನ್ನು ಅರ್ಪಿಸುತ್ತಾರೋ ಮುಸ್ಲಿಮನ ದೃಷ್ಟಿಯಲ್ಲಿ ಅದು ಒಂದು ಕ್ಷಣದ ಮಟ್ಟಿಗಾದರೂ ತಮ್ಮ ಮನಸ್ಸನ್ನು ಸಿಲುಕಿಸುವಷ್ಟು ಮಹತ್ವಪೂರ್ಣವಾಗಿಲ್ಲ. ಅವನ ದೃಷ್ಟಿಯಲ್ಲಿ ಅತ್ಯುನ್ನತವಾದ ಆ ಮಹಾನ್ ಉದ್ದೇಶಕ್ಕೆ ತಲುಪಿದರೆ ಅದೆಲ್ಲವೂ ಅವನಿಗೆ ತನ್ನಿಂತಾನೇ ಲಭಿಸುವುದೆಂದು ಅವನು ಚೆನ್ನಾಗಿ ಬಲ್ಲನು.

## 6. ದೇವಭಯ ಮತ್ತು ಸತ್ಕರ್ಮಕ್ಕೆ ಪ್ರೇರಣೆ

ಈ ಧ್ಯೇಯದ ಇನ್ನೊಂದು ವಿಶೇಷವೇನೆಂದರೆ ಇಸ್ಲಾಮ್ ದೇವಭಯ ಮತ್ತು ಸತ್ಕರ್ಮಕ್ಕೆ ನಿಶ್ಚಯಿಸಿದ ಉನ್ನತ ಆದರ್ಶ ಹಾಗೂ ವಿಧಿ ನಿಷೇಧಗಳ ಕಟ್ಟು ಕಟ್ಟಳೆಗಳಿಗೆ ಇದುವೇ ಪ್ರೇರಕವಾಗಿದೆ. ಒಳಿತು ಮತ್ತು ಕೆಡುಕುಗಳು ಲಾಭ-ನಷ್ಟಗಳನ್ನು ಅವಲಂಬಿಸಿದೆ. ಯಾವುದೇ ಒಳಿತಿನ ಹಿಂದೆ ಲಾಭ ಮತ್ತು ಕೆಡುಕಿನ ಹಿಂದೆ ನಷ್ಟದ ಕಲ್ಪನೆಯಿಲ್ಲದಿದ್ದರೆ ಅವು ಕೇವಲ ಒಳಿತು ಅಥವಾ ಕೆಡುಕಾಗಿರಲು ಸಾಧ್ಯವಿಲ್ಲ. ಇಸ್ಲಾಮ್ ದೇವ ಸಂಪ್ರೀತಿಯ ಗಳಿಕೆ ಮತ್ತು ಅದಕ್ಕೆ ವಿರುದ್ಧವಾಗಿರುವುದನ್ನು ಲಾಭ ಮತ್ತು ನಷ್ಟದ ಮಾನದಂಡವಾಗಿ ನಿಶ್ಚಯಿಸಿದೆ. ಇದು ಭೌತಿಕ ಮತ್ತು ಮಾನಸಿಕ ಮಾಲಿನ್ಯಗಳಿಂದ ಪೂರ್ಣ ಮುಕ್ತವಾಗಿದೆ. ಈ ಮಾನದಂಡದ ಪ್ರಕಾರ, ಒಬ್ಬ ಸಜ್ಜನ ವ್ಯಕ್ತಿ ಅಲ್ಲಾಹನ ಸಂಪ್ರೀತಿ ಗಳಿಸಲಿಕ್ಕಾಗಿ ತನ್ನ ಜೀವ, ಸೊತ್ತು, ಸಂತಾನ, ಕೀರ್ತಿ ಎಲ್ಲವನ್ನೂ ಬಲಿಕೊಟ್ಟ ಬಳಿಕವೂ ತಾನು ಲಾಭದಲ್ಲೇ ಇದ್ದೇನೆ ಎಂದು ಭಾವಿಸುತ್ತಾನೆ. ಇದಕ್ಕೆ ವ್ಯತಿರಿಕ್ತವಾಗಿ ಒಬ್ಬ ಕೆಟ್ಟ ವ್ಯಕ್ತಿ ಭೌತಿಕವಾಗಿಯೂ ಮಾನಸಿಕವಾಗಿಯೂ ಲೋಕದ ಎಲ್ಲ ಪ್ರಯೋಜನಗಳನ್ನು ಪಡೆದ ಬಳಿಕ ತಾನು ದಿವಾಳಿಯಾದೆನೆಂದು ಭಾವಿಸುತ್ತಾನೆ. ಇದೇ ಮಾನದಂಡವು ಮಾನವನನ್ನು ಲೌಕಿಕ ಲಾಭ-ನಷ್ಟಗಳನ್ನು ಕಡೆಗಣಿಸಿ ನಿಸ್ಪೃಹತೆಯೊಂದಿಗೆ ಸತ್ಕರ್ಮಗಳನ್ನೆಸಗಲು ಪ್ರೇರೇಪಿಸುತ್ತದೆ.

ಇನ್ನು ಇಸ್ಲಾಮ್ ಯಾವುದನ್ನು ಜೀವನದ ಉದ್ದೇಶವೆಂದು ಸಾರಿದೆ ಹಾಗೂ ಯಾವ ಕಾರಣದಿಂದಾಗಿ ಅದು ಅತ್ಯುತ್ತಮ ಜೀವನೋದ್ದೇಶವೆಂಬುದನ್ನು ನೋಡೋಣ. ಇನ್ನೊಂದು ದೃಷ್ಟಿಯಲ್ಲಿ ನೋಡುವುದಾದರೆ, ಅದು ಇಸ್ಲಾಮೀ ಸಂಸ್ಕೃತಿಯನ್ನು ಒಂದು ವಿಶಿಷ್ಟ ಸಂಸ್ಕೃತಿಯಾಗಿ ಮಾರ್ಪಡಿಸಲು ವಹಿಸಿದ ಪಾತ್ರವೇನೆಂಬುದಾಗಿದೆ.

## ವಿವಿಧ ಮಾರ್ಗಗಳ ಮಧ್ಯೆ ನಿರ್ದಿಷ್ಟ ಧ್ಯೇಯದ ನಿರ್ಣಯ

ಜೀವನದ ಸಕಲ ವಿಷಯಗಳಲ್ಲಿ ಧ್ಯೇಯ ನಿರ್ಣಯವು ಹೇಗೆ ಅಗತ್ಯವಿದೆಯೋ ಅದನ್ನು ಸಾಧಿಸಲು ಉದ್ದೇಶ ಸಾಧನೆಯ ಮಾರ್ಗ ನಿರ್ಣಯವೂ ಅಗತ್ಯವಾಗಿದೆ. ಅದು ಉದ್ದೇಶಕ್ಕೆ ಪೂರಕವಾಗಿರಬೇಕೇ ಹೊರತು ಅದರಿಂದ ಭಿನ್ನವಾಗಿರಬಾರದು. ಒಬ್ಬನಿಗೆ ಕೇವಲ ಸುತ್ತಾಡುವುದರ ಹೊರತು ಬೇರೆ ಯಾವುದೇ ಉದ್ದೇಶವಿಲ್ಲದಿದ್ದರೆ, ಅತ್ತಿಂದಿತ್ತ

ನಡೆಯುವುದೇ ಅವನ ಕಾಯಕವಾಗಿದ್ದರೆ ನಾವು ಅವನನ್ನು ಮತಿಭ್ರಾಂತನೆನ್ನುತ್ತೇವೆ. ಒಬ್ಬನ ಮುಂದೆ ಉದ್ದೇಶವಿದ್ದರೂ ಅದನ್ನು ಸಾಧಿಸಲು ಅವನು ವಿವಿಧ ಮಾರ್ಗಗಳನ್ನು ಅವಲಂಬಿಸಿದರೆ ಮತ್ತು ತಾನು ಗುರಿ ಮುಟ್ಟಬಲ್ಲೆನೆಂದು ಅವನು ಭ್ರಮಿಸುವುದಾದರೆ ಅವನನ್ನು ಮೂರ್ಖನೆನ್ನಬಹುದು. ಏಕೆಂದರೆ ಒಂದು ಗುರಿ ಮುಟ್ಟಲು ಬೇರೆ ಬೇರೆ ಮಾರ್ಗದಲ್ಲಿ ನಡೆದರೆ ಅವನೆಂದೂ ಗುರಿ ಮುಟ್ಟಲಾರ. ಅದೇ ರೀತಿ ಇನ್ನೊಬ್ಬನು ಒಂದು ಗುರಿಯನ್ನು ನಿಶ್ಚಯಿಸಿ ಅದರತ್ತ ನಡೆಯುವ ಬದಲು ಅವರ ವಿರುದ್ಧ ದಿಕ್ಕಿಗೆ ನಡೆಯ ತೊಡಗಿದರೆ ಅವನನ್ನು ಮೂರ್ಖನೆನ್ನಬೇಕು. ನಿಜವಾಗಿ ಮಾನವನು ಒಂದು ಗುರಿ ನಿಶ್ಚಯಿಸಿ ಅದನ್ನೇ ಉದ್ದೇಶ ವಾಗಿಟ್ಟುಕೊಂಡು ಅವಕ್ಕಾಗಿ ಪ್ರಯತ್ನಿಸಿದರೆ ಮತ್ತು ಅದರತ್ತ ಹೋಗಲು ಅನೇಕ ದಾರಿಗಳಿದ್ದರೂ ಅತ್ಯುತ್ತಮವಾದ ದಾರಿಯನ್ನು ಅವಲಂಬಿಸಿ ಉಳಿದೆಲ್ಲ ದಾರಿಗಳನ್ನು ತೊರೆದರೆ ಅವನು ನಿಜವಾಗಿಯೂ ತನ್ನ ಉದ್ದೇಶದಲ್ಲಿ ಯಶಸ್ವಿಯಾಗುವನು.

ಇದು ವ್ಯಕ್ತಿಗಳಿಗೆ ಅನ್ವಯವಾಗುವಂತೆ ಸಮಾಜಕ್ಕೂ ಅನ್ವಯವಾಗುತ್ತದೆ. ವ್ಯಕ್ತಿಗಳು ಸೇರಿ ಒಂದು ನಾಗರಿಕತೆಯುಂಟಾಗುತ್ತದೆ. ಅದರ ಉದ್ದೇಶಕ್ಕನುಸಾರವಾಗಿ ನಾಗರಿಕತೆಯುಂಟಾದಾಗ ಅದರ ವಿಶ್ವಾಸ, ಆಚಾರ, ನೈತಿಕ, ಸಾಮಾಜಿಕ, ಆರ್ಥಿಕವೇ ಮೊದಲಾದ ಎಲ್ಲ ರಂಗಗಳಲ್ಲೂ ಒಂದು ವಿಶಿಷ್ಟ ಸಂಸ್ಕೃತಿ ರೂಪು ತಾಳುತ್ತದೆ. ಅದನ್ನು ಅದರ ಅನುಯಾಯಿಗಳು ಪಾಲಿಸಲೇಬೇಕಾಗುತ್ತದೆ. ಅದರೊಳಗಿದ್ದುಕೊಂಡು ಅದರ ಹೊರಗಿನ ಯಾವುದೇ ವಿಶ್ವಾಸ ಅಥವಾ ಕರ್ಮವನ್ನು ಅಳವಡಿಸುವಂತಹ ಸ್ವಾತಂತ್ರ್ಯ ಅವರಿಗಿರುವುದಿಲ್ಲ. ಈ ವ್ಯವಸ್ಥೆಯನ್ನು ಕಟ್ಟುನಿಟ್ಟಾಗಿ ರಕ್ಷಿಸಬೇಕಾದುದು ಪ್ರಕೃತಿಗೆ ಪೂರಕವಾಗಿದೆ. ಒಂದು ವೇಳೆ ಅದು ಸಡಿಲಗೊಂಡರೆ ಉಳಿಯಲಾರದು.

## ಇಸ್ಲಾಮೀ ಸಂಸ್ಕೃತಿಯ ರಚನೆಯಲ್ಲಿ ಅದರ ಧ್ಯೇಯದ ಪಾತ್ರ

ಇಸ್ಲಾಮೀ ಸಂಸ್ಕೃತಿಯನ್ನು ಒಂದು ಪ್ರತ್ಯೇಕ ಹಾಗೂ ವಿಶಿಷ್ಟ ಸಂಸ್ಕೃತಿಯಾಗಿಸುವಲ್ಲಿ ಅದರ ಉದ್ದೇಶಕ್ಕೆ ಮಹತ್ವದ ಪಾತ್ರವಿದೆ. ಇಸ್ಲಾಮ್ ನಿಶ್ಚಯಿಸಿದ ಜೀವನೋದ್ದೇಶವು ಇತರ ಧರ್ಮಗಳ ಹಾಗೂ ತತ್ವ ಸಿದ್ಧಾಂತಗಳ ಉದ್ದೇಶಗಳಿಗಿಂತ ತೀರಾ ಭಿನ್ನವಾಗಿದೆ. ಉದ್ದೇಶದಲ್ಲಿ ಭಿನ್ನತೆಯುಂಟಾದರೆ ವಿಚಾರ-ಕರ್ಮಗಳಲ್ಲೂ ಭಿನ್ನತೆಯುಂಟಾಗುವುದು ಸಹಜ.

ಇಸ್ಲಾಮ್ ಮಾನವನನ್ನು ದೇವನ ಪ್ರತಿನಿಧಿಯೆಂದು ಸಾರುತ್ತದೆ. ದೇವನ ಸಂಪ್ರೀತಿಯ ಗಳಿಕೆಯು ಅವನ ಜೀವನೋದ್ದೇಶವನ್ನಾಗಿ ಮಾಡಿದೆ. ಹಾಗಿರುವಾಗ ಅವನ ಕರ್ಮಗಳೆಲ್ಲ ಅದೇ ಉದ್ದೇಶದ ಕಡೆಗೆ ತಿರುಗಬೇಕಾಗಿದೆ. ಅವನ ದೈಹಿಕ ಮತ್ತು ಮಾನಸಿಕ ಶಕ್ತಿಗಳೆಲ್ಲವೂ ಅದೇ ಉದ್ದೇಶದ ಹಾದಿಯಲ್ಲಿ ವಿನಿಯೋಗ ಮಾಡಬೇಕಾಗಿದೆ. ಅವನ ಆಚಾರ-ವಿಚಾರಗಳು, ಚಲನ-ವಲನಗಳೆಲ್ಲದರ ಮೇಲೆ ಇದೇ ಉದ್ದೇಶ ಪ್ರಾಬಲ್ಯ ಪಡೆದಿರಬೇಕು. ಅವನ ಜೀವನ-ಮರಣ, ಅವನ ಅನ್ನ-ಪಾನೀಯ, ಅವನ

ವ್ಯವಹಾರ-ಸಂಬಂಧಗಳು, ಅವನ ಪ್ರೀತಿ-ದ್ವೇಷ, ಅವನ ಸಾಮಾಜಿಕ ಮತ್ತು ಆರ್ಥಿಕತೆಗಳೆಲ್ಲವೂ ಇದೇ ಒಂದು ಉದ್ದೇಶ ಕ್ಕಾಗಿರಬೇಕು. ಈ ಉದ್ದೇಶವೇ ಅವನ ಜೀವನಾಡಿಯಾಗಿದ್ದು, ಆದರಿಂದಾಗಿಯೇ ಅವನು ಜಾಗೃತ ಮತ್ತು ಸಕ್ರಿಯವಾಗಿರುತ್ತಾನೆ. ಅಂತಹವನು ಇದಕ್ಕಿಂತ ಭಿನ್ನವಾದ ಉದ್ದೇಶಕ್ಕಾಗಿ ಜೀವಿಸಲಾರ. ಈ ಉದ್ದೇಶವು ಮಾನವನನ್ನು ಸದಾ ಕ್ರಿಯಾಶೀಲನನ್ನಾಗಿ ಮಾಡುತ್ತದೆ.

ಈ ಉದ್ದೇಶವನ್ನು ನಿರ್ಣಯಿಸಿದ ನಂತರ ಇಸ್ಲಾಮ್ ಬದುಕಿನ ವಿವಿಧ ಮಾರ್ಗಗಳ ಮಧ್ಯೆ ಒಂದು ವಿಶಿಷ್ಟ ದಾರಿಯನ್ನು ಆರಿಸುತ್ತದೆ. ಅದರ ಹೊರತಾದ ಮಾರ್ಗಗಳಲ್ಲಿ ನಡೆದು ನಿಮ್ಮ ಶಕ್ತಿ ಸಾಮರ್ಥ್ಯಗಳು ಮತ್ತು ಸಮಯವನ್ನು ವ್ಯರ್ಥಗೊಳಿಸಬಾರದೆಂದು ಅವರ ಅನುಯಾಯಿಗಳಿಗೆ ತಾಕೀತು ಮಾಡುತ್ತದೆ. ಈ ಉದ್ದೇಶವು ತನ್ನ ಸ್ವಭಾವಕ್ಕನುಸಾರವಾಗಿ ವಿಶ್ವಾಸ-ಕರ್ಮಗಳ ಒಂದು ಪ್ರತ್ಯೇಕ ಜೀವನ ಶೈಲಿಯನ್ನು ಸೃಷ್ಟಿಸುತ್ತದೆ. ಅದರಿಂದ ಯಾವ ಸ್ಥಿತಿಯಲ್ಲೂ ಸರಿಯಬಾರದೆಂದು ತಾಕೀತು ಮಾಡುತ್ತದೆ. ಈ ವ್ಯವಸ್ಥೆಯ ಪಾಲನೆಯನ್ನು ಅದು ಧರ್ಮವೆಂದು ಸಾರುತ್ತದೆ.

**"ಅಲ್ಲಾಹನ ಬಳಿ ಧರ್ಮವು ಇಸ್ಲಾಮ್ ಮಾತ್ರ." (ಪವಿತ್ರ ಕುರ್‌ಆನ್, 3:19)**

ಇದರ ಆಧಾರದಲ್ಲೇ ಅದು ಅದರ ಅನುಯಾಯಿಗಳು ಮತ್ತು ಅನುಯಾಯಿಗಳಲ್ಲದವರ ಮಧ್ಯೆ ವ್ಯತ್ಯಾಸ ಕಲ್ಪಿಸುತ್ತದೆ. ಈ ಉದ್ದೇಶದ ಪ್ರಕಾರ, ವ್ಯವಸ್ಥೆಯನ್ನು ಅನುಸರಿಸುವವರನ್ನು 'ಮುಸ್ಲಿಮ್'(ಅನುಸರಣಶೀಲರು) ಎಂದೂ ಅದನ್ನು ನಿರಾರಿಸುವವರನ್ನು 'ಕಾಫಿರ್‌ರು'(ನಿರಾಕರಿಸುವವನು) ಎಂದೂ ಕರೆಯುತ್ತದೆ. ಅದು ವರ್ಗ, ವರ್ಣ, ದೇಶ, ಭಾಷೆಗಳ ಎಲ್ಲ ಅಂತರಗಳನ್ನು ಹೋಗಲಾಡಿಸಿ ಮಾನವರಲ್ಲಿ ಈ ಒಂದು ವ್ಯತ್ಯಾಸವನ್ನು ಮಾತ್ರ ಉಳಿಸುತ್ತದೆ. ಅಂದರೆ ಕುಫ್ರ್ ಅಥವಾ ಇಸ್ಲಾಮ್. ಈ ವ್ಯವಸ್ಥೆಯನ್ನನುಸರಿಸುವವರೆಲ್ಲರೂ ಪರಸ್ಪರ ಸಹೋದರರಾಗುತ್ತಾರೆ. ಅವರು ಪೂರ್ವ ಮತ್ತು ಪಶ್ಚಿಮದಲ್ಲಿ ವಾಸಿಸಲಿ. ಅದರ ದೇಶ, ಭಾಷೆ, ವರ್ಣ, ವರ್ಗ ಯಾವುದೇ ಆಗಿರಲಿ. ಅದಕ್ಕೆ ವ್ಯತಿರಿಕ್ತ ವಾಗಿ ಈ ವ್ಯವಸ್ಥೆಯನ್ನು ಅನುಸರಿಸದವರು ಅನ್ಯರಾಗುತ್ತಾರೆ. ಅವರು ಸ್ವಂತ ತಂದೆ ತಾಯಿಗಳೇ ಆಗಿರಲಿ, ಆಪ್ತ ಬಂಧುಗಳೇ ಆಗಿರಲಿ.

ವಿಶ್ವಾಸ ಮತ್ತು ಆಚಾರ ಕರ್ಮಗಳ ಆಧಾರದಲ್ಲಿ ಮಾನವರನ್ನು ಮುಸ್ಲಿಮ್ ಮತ್ತು ಕಾಫಿರ್ ಎಂದಂತೆಯೇ ಜೀವನ ನಡೆಸುವ ರೀತಿ ಹಾಗೂ ಲೋಕದ ಇನ್ನಿತರ ವಸ್ತುಗಳ ಬಗೆಗೂ ಇಸ್ಲಾಮ್ ವಿಧಿ-ನಿಷೇಧ, ಉಚಿತ-ಅನುಚಿತ, ರೋಚಕ-ಅರೋಚಕ ಎಂಬಂತಹ ವ್ಯತ್ಯಾಸಗಳನ್ನು ಮಾಡಿದೆ. ಪ್ರಸ್ತುತ ಉದ್ದೇಶ ಸಾಧನೆಗೆ ಹಾಗೂ ಖಿಲಾಫತ್‌ನ ಕರ್ತವ್ಯಗಳನ್ನು ಈಡೇರಿಸಲು ಸಹಾಯಕವಾಗುವ ರೀತಿ-ನೀತಿಗಳು ತನ್ನ ಮಟ್ಟಕ್ಕನುಸಾರ ರೋಚಕ, ಧರ್ಮಬದ್ಧ ಅಥವಾ ಅನುವದನೀಯವಾಗಿದೆ. ಅದಕ್ಕೆ ವಿರುದ್ಧವಾಗಿರುವುದೆಲ್ಲವೂ ಅದರ ಮಟ್ಟಕ್ಕನುಸಾರ ಅರೋಚಕ ಅಥವಾ ನಿಷಿದ್ಧವಾಗಿದೆ. ಈ ಮೇರೆಯನ್ನು ಪಾಲಿಸುವವನು

'ಮುತ್ತಕೀ' (ಕೆಡುಕಿನಿಂದ ದೂರವಿರುವವನು) ಹಾಗೂ ಅದನ್ನು ಪಾಲಿಸದವನು ಫಾಸಿಕ್ (ಮೇರೆ ಮೀರುವವನು) ಆಗಿದ್ದಾನೆ. ಅಲ್ಲಾಹನ ಪಕ್ಷದ ಜನರಲ್ಲಿ ಉಚ್ಚ ನೀಚತೆಯ ಮಾನ ದಂಡವು ಸಿರಿ-ಸಂಪತ್ತು, ಕುಲ-ಗೋತ್ರ, ಸಾಮಾಜಿಕ ಸ್ಥಾನಮಾನ ಅಥವಾ ಬಿಳಿಯ-ಕರಿಯನೆಂಬ ವ್ಯತ್ಯಾಸಕ್ಕನುಸಾರವಾಗಿಯಲ್ಲ, ಬದಲಾಗಿ ಕೇವಲ 'ತಕ್ವಾ' (ಧರ್ಮನಿಷ್ಠೆ)ವನ್ನಾಧರಿಸಿ ಆಗಿದೆ.

**"ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು." (ಪವಿತ್ರ ಕುರ್‌ಆನ್, 49:13)**

ಈ ರೀತಿ ಜೀವನದ ಸಕಲ ರಂಗಗಳಲ್ಲೂ ಇಸ್ಲಾಮೀ ಸಂಸ್ಕೃತಿಯ ಮಾರ್ಗವು ಇತರ ಸಂಸ್ಕೃತಿಗಳಿಗಿಂತ ಭಿನ್ನವಾಗಿದೆ. ಇಸ್ಲಾಮಿನ ಸಿದ್ಧಾಂತ ಮತ್ತು ಜೀವನೋದ್ದೇಶವು ಇತರ ಸಂಸ್ಕೃತಿಗಳಿಗಿಂತ ಭಿನ್ನವಾಗಿದೆ. ಇಸ್ಲಾಮ್ ತನ್ನ ತತ್ವ ಸಿದ್ಧಾಂತಕ್ಕನುಸಾರವಾಗಿ ಈ ಲೋಕವನ್ನು ಬಳಸುತ್ತದೆ. ಅದರ ಯೋಚನೆಗಳು, ಒಲವುಗಳು ಎಲ್ಲವೂ ಹಾಗೆಯೇ. ಅನೇಕ ವಿಷಯಗಳು ಇತರ ಸಂಸ್ಕೃತಿಗಳಲ್ಲಿ ಧರ್ಮಸಮ್ಮತವಾಗಿದ್ದರೆ ಇಸ್ಲಾಮಿನಲ್ಲಿ ನಿಷಿದ್ಧವಾಗಿದೆ. ಅನೇಕ ವಿಷಯಗಳು ಇತರ ಸಂಸ್ಕೃತಿಗಳ ಅವಿಭಾಜ್ಯ ಅಂಗವಾಗಿದ್ದರೆ ಇಸ್ಲಾಮೀ ಜೀವನದ ಮಟ್ಟಿಗೆ ಅವುಗಳೊಂದಿಗೆ ಯಾವ ಸಂಬಂಧವೂ ಇಲ್ಲ, ಉದಾ: ಲಲಿತ ಕಲೆ, ಇತರ ಸಂಸ್ಕೃತಿಗಳಿಗೆ ಇದು ಜೀವ. ಈ ಕಲೆಯಲ್ಲಿ ಪಳಗಿದವರನ್ನು ಹೀರೋಗಳೆನ್ನುತ್ತಾರೆ. ಆದರೆ ಇಸ್ಲಾಮ್‌ನಲ್ಲಿ ಈ ಪೈಕಿ ಕೆಲವೊಂದು ಹರಾಮ್. ಇನ್ನು ಕೆಲವು ಅರೋಚಕವಾಗಿವೆ. ಕೆಲವು ಒಂದು ಹಂತದ ವರೆಗೆ ಅನುಮತಿಸಲ್ಪಟ್ಟಿದೆ. ಆದರೆ ಅದು ಕೂಡಾ ಅಲ್ಲಾಹನನ್ನು ಮರೆಸುವಂತಹದ್ದಾಗಿದ್ದರೆ, ಕರ್ತವ್ಯ ವಿಮುಖತೆಗೆ ಕಾರಣವಾದರೆ, ದೇವಾರಾಧನೆಯ ಬದಲು ಸೌಂದರ್ಯಾರಾಧನೆಗೆ ಕಾರಣವಾದರೆ ಅದು ಸ್ವೀಕಾರಾರ್ಹವೇ ಅಲ್ಲ. ಇಸ್ಲಾಮಿನ ಉದ್ದೇಶವು ಚಿತ್ರ ನಟ-ನಟಿಯರನ್ನೋ ವಿದೂಷಕರನ್ನೋ ಕ್ರೀಡಾಪಟುಗಳನ್ನೋ ತಯಾರಿಸುವುದಲ್ಲ, ಬದಲಾಗಿ ಸಹಾಬಿಗಳ ಮಾದರಿಯ ಜನರನ್ನು ತಯಾರಿಸುವುದಾಗಿದೆ.

ಇದರಂತೆಯೇ ಸಾಮಾಜಿಕ, ನಾಗರಿಕ ಹಾಗೂ ಇನ್ನಿತರ ವಿಷಯಗಳನ್ನು ಊಹಿಸಬಹುದು. ವಿಶೇಷವಾಗಿ ಸ್ತ್ರೀ-ಪುರುಷ ಸಂಬಂಧ, ಬಡವ-ಬಲ್ಲಿದ, ಆಡಳಿತಗಾರ-ಪ್ರಜೆಗಳ ಸಂಬಂಧ ಹಾಗೂ ಮೂಲಭೂತವಾಗಿ ಮಾನವ ವರ್ಗಗಳ ಪರಸ್ಪರ ಸಂಬಂಧಗಳು ಎಲ್ಲವೂ ಪ್ರಾಚೀನ ಮತ್ತು ಆಧುನಿಕ ಸಂಸ್ಕೃತಿಗಳಿಂದ ಇಸ್ಲಾಮೀ ಸಂಸ್ಕೃತಿಯು ಭಿನ್ನವಾಗಿದೆ. ಈ ವ್ಯತ್ಯಾಸವನ್ನು ಅರಿಯದವರು ಇಸ್ಲಾಮ್ ಮತ್ತಿತರ ಸಂಸ್ಕೃತಿಗಳನ್ನು ಕಲಬೆರಕೆ ಮಾಡಿ ಘೋರ ತಪ್ಪೆಸಗುತ್ತಾರೆ.

# ಈಮಾನ್-ವಾಸ್ತವಿಕತೆ ಮತ್ತು ಮಹತ್ವ

ಜೀವನ ಸಿದ್ಧಾಂತ ಮತ್ತು ಜೀವನದ ಉದ್ದೇಶದ ಬಳಿಕ, ಇಸ್ಲಾಮ್ ಮಾನವ ಚಾರಿತ್ರ್ಯವನ್ನು ಯಾವ ಆಧಾರದ ಮೇಲೆ ಕಟ್ಟಿ ಬೆಳೆಸುತ್ತದೆ ಎಂಬುದನ್ನು ನೋಡಬೇಕಾಗಿದೆ. ಮಾನವನ ಎಲ್ಲ ಕ್ರಿಯೆಗಳ ಮೂಲ ಅವನ ಮಸ್ತಿಷ್ಕವಾಗಿದೆ. ಮನಸ್ಸಿನಲ್ಲಿ ಯಾವ ಭಾವನೆಗಳು ಮೂಡುತ್ತದೋ ಅದರಂತೆ ಕ್ರಿಯೆಗಳು ಪ್ರಕಟವಾಗುತ್ತವೆ. ಮನಸ್ಸಿನ ಎರಡು ಸ್ಥಿತಿಗಳಿವೆ. ಒಂದು, ಅದರಲ್ಲಿ ಅನೇಕ ರೀತಿಯ ವಿಚಾರಗಳು ತುಂಬಿಕೊಂಡಿರುತ್ತವೆ. ಇನ್ನೊಂದು, ವಿಶಿಷ್ಟ ರೀತಿಯ ವಿಚಾರಗಳು. ಇನ್ನು ವಿವಿಧ ವಿಚಾರಗಳ ಭಂಡಾರದಲ್ಲಿ ಯಾವುದು ಹೆಚ್ಚು ಪ್ರಾಬಲ್ಯ ಪಡೆದಿರುತ್ತದೋ ಅದರಂತೆ ಕ್ರಿಯೆಗಳುಂಟಾಗುತ್ತವೆ. ವಿಶಿಷ್ಟ ವಿಚಾರಗಳನ್ನು ಮನಸ್ಸಿನಲ್ಲಿ ಇರಿಸಿಕೊಂಡಿರುವ ವ್ಯಕ್ತಿಯ ಕ್ರಿಯೆಗಳೂ ವಿಶಿಷ್ಟವಾಗಿರುತ್ತವೆ. ಅದರಲ್ಲಿ ಶಿಸ್ತು ಮತ್ತು ಸುವ್ಯವಸ್ಥೆಯಿರುತ್ತದೆ.

ಒಂದನೆಯ ವರ್ಗದವನ ಬಗ್ಗೆ, ಅವನಿಗೆ ಯಾವುದೇ ಗುಣ ಸ್ವಭಾವ ಅಥವಾ ಚಾರಿತ್ರ್ಯವಿಲ್ಲವೆಂದು ನಾವು ಹೇಳಬಹುದು. ಅವನು ಪಿಶಾಚಿಯೂ ಆಗಬಲ್ಲನು, ದೇವಚರನೂ ಆಗಬಲ್ಲನು. ಅವನಿಂದ ಯಾವಾಗ ಎಂತಹ ಕ್ರಿಯೆ ಪ್ರಕಟವಾಗಬಹುದೆಂದು ಹೇಳಲಾಗದು. ಅದಕ್ಕೆ ತದ್ವಿರುದ್ಧವಾಗಿ ಎರಡನೆಯ ವರ್ಗದ ವ್ಯಕ್ತಿಯ ಬಗ್ಗೆ ಅವನಿಗೆ ಒಂದು ಗುಣ ಸ್ವಭಾವವಿದೆ. ಅವನ ಕರ್ಮ ಜೀವನದಲ್ಲಿ ಒಂದು ಶಿಸ್ತು ಇದೆ. ಒಂದು ಕ್ರಮವಿದೆಯೆಂದು ಹೇಳಬಲ್ಲೆವು. ಅವನು ಎಂತಹ ಪರಿಸ್ಥಿತಿಯಲ್ಲಿ ಎಂತಹ ಕೆಲಸ ಮಾಡಬಲ್ಲನೆಂಬುದನ್ನು ನಾವು ಆತ್ಮವಿಶ್ವಾಸದೊಂದಿಗೆ ಹೇಳಬಲ್ಲೆವು.

ಮಾನವ ಜೀವನದಲ್ಲಿ ಶಿಸ್ತು-ಸುವ್ಯವಸ್ಥೆಯಿರಬೇಕಾದರೆ, ಅವನ ಮನಸ್ಸು ವಿವಿಧ ವಿಚಾರಗಳಿಂದ ಮುಕ್ತವಾಗಿದ್ದು ಒಂದೇ ರೀತಿಯ ವಿಚಾರಗಳಿಂದ ತುಂಬಿರಬೇಕು. ಅದು ಯಾವ ರೀತಿಯಿಂದಲೂ ಅಲುಗಾಡಿಸಲಾಗದಷ್ಟು ಪ್ರಬಲವಾಗಿರಬೇಕು. ಆ ವಿಚಾರಗಳು ಎಷ್ಟು ಆಳಕ್ಕಿರುತ್ತದೋ ಅವನ ಚಾರಿತ್ರ್ಯವೂ ಅಷ್ಟೇ ಶಕ್ತಿಯುತ ಮತ್ತು ವಿಶ್ವಾಸಾರ್ಹವಾಗಿರುವುದು. ಅದಕ್ಕೆ ವಿರುದ್ಧವಾದ ವಿಚಾರಗಳು ಎಷ್ಟು ದುರ್ಬಲವಾಗಿರುವುದೋ ಮಾನವನ ಗುಣ ಸ್ವಭಾವವೂ ಅಷ್ಟೇ ದುರ್ಬಲವಾಗಿರುವುದು. ಅವನ ಪ್ರಾಯೋಗಿಕ

ಜೀವನವು ಅಷ್ಟೇ ಅಶಿಸ್ತು ಮತ್ತು ಶಿಥಿಲತೆಯಿಂದ ಕೂಡಿರುವುದು. ಈ ಸ್ಥಿತಿಯನ್ನೇ ಇಸ್ಲಾಮಿನ ಪಾರಿಭಾಷಿಕದಲ್ಲಿ 'ಈಮಾನ್' ಎನ್ನಲಾಗುತ್ತದೆ. ಇದು 'ಅಮ್‌ನ್' ಎಂಬ ಪದದಿಂದ ಹೊರಟಿದೆ. ಮನಸ್ಸು ಸಂಪೂರ್ಣ ಸಂತೃಪ್ತವಾಗಿರುವುದು ಮತ್ತು ನಿರ್ಭಯವಾಗಿರುವುದು ಎಂಬುದು ಇದರ ಅರ್ಥವಾಗಿದೆ.

'ಈಮಾನ್' (ವಿಶ್ವಾಸ) ತಾಳುವುದೆಂದರೆ ಒಂದು ವಿಷಯವನ್ನು ದೃಢವಾಗಿ ನಂಬುವುದೆಂದಾಗಿದೆ. ಅದರ ವಿರುದ್ಧವಾದ ಯಾವುದಾದರೂ ವಿಷಯ ಮನಸ್ಸಿನೊಳಗೆ ಹೊಕ್ಕೀತು ಎಂಬ ಭಯವೇ ಇಲ್ಲದಿರುವುದಾಗಿದೆ. ಈಮಾನ್ ದುರ್ಬಲಗೊಳ್ಳುವುದೆಂದರೆ ಮನಸ್ಸು ಪೂರ್ಣವಾಗಿ ಸಂತೃಪ್ತವಾಗಿಲ್ಲವೆಂಬುದೇ ಆಗಿದೆ. ಇದರಿಂದ ಗುಣ ಸ್ವಭಾವದಲ್ಲಿ ದುರ್ಬಲತೆ ಯುಂಟಾಗುತ್ತದೆ. ಪ್ರಾಯೋಗಿಕ ಜೀವನದಲ್ಲಿ ಅಶಿಸ್ತು ತಲೆದೋರುತ್ತದೆ. ಪ್ರಬಲವಾದ ಈಮಾನ್‌ನಿಂದಾಗಿ ಚಾರಿತ್ರ್ಯವು ಸ್ಪಷ್ಟ ಹಾಗೂ ಬಲವಾದ ಆಧಾರದ ಮೇಲೆ ನೆಲೆ ನಿಲ್ಲುತ್ತದೆ. ಅದೇ ವಿಚಾರ ಮತ್ತು ಸಿದ್ಧಾಂತಕ್ಕನುಸಾರವಾಗಿ ಚಾರಿತ್ರ್ಯದ ಚೌಕಟ್ಟು ಸಿದ್ಧಗೊಳ್ಳುತ್ತದೆ.

ವಿವಿಧ ಜನರು ಬೇರೆ ಬೇರೆ ವಿಚಾರ-ಸಿದ್ಧಾಂತಗಳನ್ನು ನಂಬುವವರಾಗಿದ್ದು ಅವರ ಗುಣ ಸ್ವಭಾವಗಳೂ ವಿಭಿನ್ನವಾಗಿದ್ದರೆ ಒಂದು ಸಾಮೂಹಿಕ ಸ್ವರೂಪ ಅಸ್ತಿತ್ವಕ್ಕೆ ಬರುವುದಿಲ್ಲ. ಅದಕ್ಕೆ ತದ್ವಿರುದ್ಧವಾಗಿ ಒಂದು ವಿಚಾರ-ಸಿದ್ಧಾಂತದ ಜನರ ಮನಸ್ಸಿನಲ್ಲಿ ಅದು ಬೇರೂರಿದರೆ ಅವರ ಈ ಸೇರುವಿಕೆಯಿಂದ ಒಂದು ಪ್ರಬಲ ಕೂಟವಾಗುವುದು. ಅವರ ಮಧ್ಯೆ ಪರಸ್ಪರ ಸಹಾಯ, ಸಹಕಾರದ ಪ್ರಕ್ರಿಯೆ ಆರಂಭಗೊಂಡು ಅದರಿಂದ ಅಭಿವೃದ್ಧಿಯ ಗತಿ ತೀವ್ರವಾಗುವುದು. ಒಂದೇ ರೀತಿಯ ಈಮಾನ್‌ನಿಂದ ಅವರ ಗುಣಸ್ವಭಾವದಲ್ಲಿ ಮತ್ತು ಅವರ ಕರ್ಮದಲ್ಲಿ ಏಕರೂಪತೆಯುಂಟಾಗುವುದು. ಅದರಿಂದ ಒಂದು ವಿಶಿಷ್ಟ ನಾಗರಿಕತೆ ಒಂದು ವಿಶಿಷ್ಟ ಸಂಸ್ಕೃತಿ ಪ್ರಕಟವಾಗುವುದು. ಒಂದು ಹೊಸ ಸಮುದಾಯ, ಹೊಸ ಚಾರಿತ್ರ್ಯ, ಹೊಸ ಮನೋಭಾವ, ಹೊಸ ವಿಚಾರಗಳು ಕರ್ಮ ರೀತಿಯೊಂದಿಗೆ ಬೆಳೆಯುವುದು ಮತ್ತು ತನ್ನ ಸಂಸ್ಕೃತಿಯ ಸೌಧವನ್ನು ಒಂದು ಹೊಸ ಶೈಲಿಯಲ್ಲಿ ನಿರ್ಮಿಸುವುದು.

## ಈಮಾನಿನ ಎರಡು ವಿಧಗಳು

ಈಮಾನ್ ಎಂಬುದು ಒಂದು ಧಾರ್ಮಿಕ ಪಾರಿಭಾಷಿಕವಾಗಿದೆ. ಆದರೆ ಇಲ್ಲಿ ಮೂಲ ಕಲ್ಪನೆಯ ದೃಷ್ಟಿಯಲ್ಲಿ ಅದರ ಎರಡು ವಿಧಗಳಿವೆ. ಒಂದು ಧಾರ್ಮಿಕ ಈಮಾನ್. ಇದು ಮಾನವನ ಚಾರಿತ್ರ್ಯವನ್ನು ಆಧ್ಯಾತ್ಮಿಕ ಮತ್ತು ನೈತಿಕ ನೆಲೆಗಟ್ಟಿನ ಮೇಲೆ ನಿರ್ಮಿಸುತ್ತದೆ. ಅಂದರೆ ಅದು ಮಾನವನ ಗುಣ ಸ್ವಭಾವವನ್ನು ಅವನ ಆಧ್ಯಾತ್ಮಿಕತೆಯು ಒಂದು ಉನ್ನತ ಮಟ್ಟದ ನೈತಿಕ ವ್ಯವಸ್ಥೆಯನ್ನು ಮೂಲಾಧಾರವಾಗಿರಿಸುವ ಹಾಗೂ ಅವನ

ಚಾರಿತ್ರ್ಯವು ಪರಿಶುದ್ಧತೆಯೊಂದಿಗೆ ಲೌಕಿಕ ಜೀವನದಲ್ಲೂ ಮಾನವನನ್ನು ಯಶಸ್ಸಿನೆಡೆಗೆ ಸಾಗಿಸುವ ರೀತಿಯಲ್ಲಿರುತ್ತಾರೆ.

ಧಾರ್ಮಿಕ ಈಮಾನಿನಲ್ಲಿ ಕೆಲವು ಮೂಲಭೂತ ವಿಷಯಗಳಿರುತ್ತದೆ. ಉದಾ: ಒಂದು ಅಥವಾ ಹೆಚ್ಚು ದೇವರ ಕಲ್ಪನೆ. ದೈವಿಕ ಗ್ರಂಥಗಳು, ಧರ್ಮಗುರುಗಳು ಅವರ ಶಿಕ್ಷಣ ಮತ್ತು ಜೀವನ ರೀತಿಯನ್ನು ಪಾಲಿಸುವುದು. ಧಾರ್ಮಿಕ ಈಮಾನ್ ಕೇವಲ ಮೂಢನಂಬಿಕೆ ಯಾಗಿದ್ದರೆ ಅಥವಾ ಅದರ ಮೂಢನಂಬಿಕೆ ಹೆಚ್ಚು ಮತ್ತು ಬುದ್ಧಿಪರ ವಿಷಯ ಕಡಿಮೆಯಿದ್ದರೆ ಲೌಕಿಕವಾಗಿ ಅದು ಪ್ರಗತಿ ಹೊಂದುವುದು ಸಾಧ್ಯವಿಲ್ಲ. ಒಂದು ಜನಾಂಗವು ಲೌಕಿಕವಾಗಿ ಸಂಪನ್ಮೂಲಗಳಲ್ಲಿ ಪ್ರಗತಿ ಸಾಧಿಸುವುದರ ಜೊತೆಗೆ ಅದರ ಬುದ್ಧಿಯೂ ಬಲಿಯತೊಡಗಿದಾಗ ತನ್ನ ಧಾರ್ಮಿಕ ಗುರುಗಳ ಮತ್ತು ದೇವರುಗಳ ಮೇಲಿನ ಅದರ ನಂಬಿಕೆಯೂ ಹೊರಟು ಹೋಗುತ್ತದೆ. ಮೊದಮೊದಲು ಸಾಮೂಹಿಕ ವ್ಯವಸ್ಥೆಯನ್ನು ಕಾಯ್ದುಕೊಳ್ಳಲು ಮಿಥ್ಯ ನಂಬಿಕೆಗಳನ್ನು ಔಚಿತ್ಯಕ್ಕಾಗಿ ಉಳಿಸಿಕೊಂಡರೂ ಕ್ರಮೇಣ ಅವರ ಮನ-ಮಸ್ತಿಷ್ಕಗಳಲ್ಲಿ ಬಂಡಾಯದ ಬಿರುಗಾಳಿ ಏಳುತ್ತದೆ. ತರುವಾಯ ಆ ಎಲ್ಲ ನಂಬಿಕೆಗಳಿಂದಲೂ ಅದು ಕೈ ತೊಳೆದುಕೊಳ್ಳುತ್ತದೆ. ಕೊನೆಗೆ, ಕೆಲವು ಆಧ್ಯಾತ್ಮಿಕ ಗುಂಪುಗಳ ಬಳಿ ಅದು ಸೀಮಿತವಾಗಿ ಬಿಡುತ್ತದೆ. ಉಳಿದಂತೆ ಇಡೀ ಜನಾಂಗವು ಇನ್ನೊಂದು ನಂಬಿಕೆಯನ್ನು ಅಳವಡಿಸಿಕೊಳ್ಳುತ್ತದೆ. ಇದನ್ನು ನಾವು ಲೌಕಿಕ ಈಮಾನ್ ಎನ್ನಬಹುದು. ಯಾವ ನಂಬಿಕೆಗಳನ್ನು ಮಾನವನು ಲೌಕಿಕ ಜೀವನದಲ್ಲಿ ಯಶಸ್ಸು ಗಳಿಸಲು ಸಿದ್ಧಗೊಳಿಸುವುದಿಲ್ಲವೋ ಅವುಗಳ ಪ್ರಭಾವವು ಕೇವಲ ಆಧ್ಯಾತ್ಮಿಕ ಮತ್ತು ನೈತಿಕ ಜೀವನಕ್ಕೆ ಸೀಮಿತವಾಗಿರುತ್ತದೆ. ಭೌತಿಕ ಜೀವನಕ್ಕೆ ತಲುಪುವುದಿಲ್ಲ. ಇದರ ಪರಿಣಾಮವಾಗಿ ಅದನ್ನು ನಂಬಿದ ಜನಾಂಗ ಪ್ರಗತಿ ಹೊಂದುವುದಿಲ್ಲ ಅಥವಾ ಪ್ರಗತಿ ಸಾಧಿಸಿದರೂ ಬಹಳ ಬೇಗ ಅದರ ಹಿಡಿತದಿಂದ ಪಾರಾಗುವುದು. ಧಾರ್ಮಿಕ ನಂಬಿಕೆಗಳು ಸಂಸ್ಕೃತಿಯ ನಂಬಿಕೆಗಳಿಗಾಗಿ ರಂಗ ಬಿಟ್ಟು ಹೋಗುವುದು. ಭೌತಿಕ ಜೀವನದ ಚಟುವಟಿಕೆಗಳು ಹೆಚ್ಚಾದಂತೆ ನೈತಿಕತೆ ಮತ್ತು ಆಧ್ಯಾತ್ಮಿಕತೆಯು ಧಾರ್ಮಿಕ ನಂಬಿಕೆಯ ಪ್ರಭಾವದಿಂದ ಮುಕ್ತವಾಗಿರುವುದು.

ಧರ್ಮಗಳ ಅಧ್ಯಯನ ನಡೆಸಿದರೆ ಕೆಲವು ಧರ್ಮಗಳು ಅದರ ಅನುಯಾಯಿಗಳನ್ನು ಲೌಕಿಕ ಪ್ರಗತಿಯಿಂದ ತಡೆದುವು ಮತ್ತು ಜ್ಞಾನ ವಿವೇಕಗಳ ಅಭಿವೃದ್ಧಿಗೆ ಅವು ಸಹಕರಿಸಲಿಲ್ಲವೆಂದು ಕಂಡುಕೊಳ್ಳಬಹುದು. ಇನ್ನು, ಇತರ ಧರ್ಮಗಳ ಅವನತಿಯ ಕಾಲದಲ್ಲಿ ಧಾರ್ಮಿಕ ನಂಬಿಕೆಗಳಲ್ಲಿ ವಿಶ್ವಾಸವಿಟ್ಟಿತು ಮತ್ತು ಪ್ರಗತಿಯ ಕಾಲದಲ್ಲಿ ಕೈಬಿಟ್ಟಿತೆಂಬುದನ್ನೂ ನೋಡಬಹುದು. ತದ್ವಿರುದ್ಧವಾಗಿ ಮುಸ್ಲಿಮರು ಲೋಕದಲ್ಲಿ ಬಹಳ ಅಭಿವೃದ್ಧಿ ಹೊಂದಿದ ಕಾಲದಲ್ಲಿ ತಮ್ಮ ವಿಶ್ವಾಸದಲ್ಲಿ ದೃಢವಾದರು. ಅವರ ನಂಬಿಕೆಗಳಲ್ಲಿ ಕೊರತೆಯುಂಟಾದಾಗ ಅವರು ಬುದ್ಧಿ, ಜ್ಞಾನ ಮತ್ತು ಭೌತಿಕ ಪ್ರಗತಿಯ ಪೈಪೋಟಿಯಲ್ಲಿ ಹಿಂದೆ ಬಿದ್ದರು. ಇತರ ಜನಾಂಗಗಳು ಅವರಿಗಿಂತ ಮುಂದೆ ಸಾಗಿದುವು. ಇಂದು

ಮುಸ್ಲಿಮರು ಅವನತಿಯಲ್ಲಿದ್ದಾರೆ. ನಂಬಿಕೆಯ ಕೊರತೆಗೂ ಬಲಿಯಾಗಿದ್ದಾರೆ. 13 ಶತಮಾನಗಳ ಹಿಂದೆ ಅವರು ಬಹಳ ಪ್ರಗತಿಯಲ್ಲಿದ್ದರು. ಆಗ ಅವರ ಧಾರ್ಮಿಕ ನಂಬಿಕೆಯೂ ಪ್ರಬಲವಾಗಿತ್ತು. ತದ್ವಿರುದ್ಧವಾಗಿ ಯುರೋಪಿಯನ್ ಕ್ರೈಸ್ತರು ಮತ್ತು ಜಪಾನಿನ ಬೌದ್ಧರು ಅವನತಿಯ ಪಾತಾಳದಲ್ಲಿದ್ದರು. ಅವರು ಅಭಿವೃದ್ಧಿ ಹೊಂದಿದಾಗ ಅವರ ಧರ್ಮಗಳಲ್ಲಿ ಅವರಿಗೇ ನಂಬಿಕೆ ಇಲ್ಲವಾಯಿತು. ಇಸ್ಲಾಮ್ ಮತ್ತು ಇತರ ಧರ್ಮಗಳ ನಂಬಿಕೆಗಳ ಈ ಸ್ಪಷ್ಟ ವ್ಯತ್ಯಾಸವನ್ನು ವಿವೇಕಮತಿಗಳು ಚೆನ್ನಾಗಿ ಗ್ರಹಿಸಬಹುದು.

## ಲೌಕಿಕ ಈಮಾನ್

ಈ ಎರಡನೆಯ ಬಗೆಯ ಈಮಾನ್‌ನಲ್ಲಿ ಧಾರ್ಮಿಕ ಸಂಗತಿಗಳಿಲ್ಲ, ಇಲ್ಲಿ ದೇವರಿಲ್ಲ, ಗುರುಗಳಿಲ್ಲ, ದಿವ್ಯ ಗ್ರಂಥಗಳಿಲ್ಲ, ಮಾನವ ಜೀವನವನ್ನು ಆಧ್ಯಾತ್ಮಿಕ ಮತ್ತು ನೈತಿಕ ಬುನಾದಿಯಲ್ಲಿ ಕಟ್ಟಬಲ್ಲಂತಹ ಯಾವ ಶಿಕ್ಷಣವೂ ಇಲ್ಲಿಲ್ಲ. ಇವೆಲ್ಲ ಅಪ್ಪಟ ಲೌಕಿಕ ವಿಷಯಗಳಾಗಿವೆ.

ಈ ಪೈಕಿ ಅತಿ ದೊಡ್ಡದು ದೇಶವಾಗಿದೆ. ಒಂದು ನಿರ್ದಿಷ್ಟ ಪ್ರದೇಶದ ಜನರು ಅದನ್ನು ದೇವರಾಗಿ ಪೂಜಿಸುತ್ತಾರೆ. ದೇಶವು ತಮ್ಮ ಜೀವ-ಸೊತ್ತುಗಳ ಒಡೆಯನಾಗಿದ್ದು ಅದರ ಸೇವೆ ಮತ್ತು ರಕ್ಷಣೆ ನಮ್ಮ ಕರ್ತವ್ಯವೆಂದು ದೇಶಭಕ್ತರು ನಂಬುತ್ತಾರೆ. ದೇಶಕ್ಕಾಗಿ ತನು-ಮನ-ಧನ ಮಾತ್ರವಲ್ಲ ಜೀವವನ್ನೂ ಅರ್ಪಿಸುವುದು ತಮ್ಮ ಸೌಭಾಗ್ಯವೆಂದು ಅವರು ಭಾವಿಸುತ್ತಾರೆ. ಅಷ್ಟೇ ಅಲ್ಲ, ತಮ್ಮ ದೇಶವೇ ಪರಮ ಸತ್ಯ. ತಾವೇ ಅದರ ಹಕ್ಕುದಾರರು. ಉಳಿದಂತೆ ಲೋಕದ ಎಲ್ಲ ದೇಶಗಳೂ ತಮ್ಮ ಹಸ್ತಕ್ಷೇಪಕ್ಕೆ, ಪ್ರಾಬಲ್ಯಕ್ಕೆ ಅರ್ಹವಾಗಿವೆ. ಆದ್ದರಿಂದ ತಮ್ಮ ದೇಶದ ಧ್ವಜವನ್ನು ಎತ್ತಿ ಹಿಡಿಯುವುದು ತಮ್ಮ ಕರ್ತವ್ಯವೆಂದು ಅವರು ಬಗೆಯುತ್ತಾರೆ.

ಎರಡನೆಯದು ಕಾನೂನಾಗಿದೆ. ಅದನ್ನು ಅವರೇ ನಿರ್ಮಿಸುತ್ತಾರೆ. ತಮ್ಮ ಸಾಮೂಹಿಕ ವ್ಯವಸ್ಥೆಗೆ ಅದುವೇ ಆಧಾರವೆಂದು ಬಗೆಯುತ್ತಾರೆ. ಅದುವೇ ಅವರ ದೇವರು.

ಮೂರನೆಯದು ಅವರ ಸ್ವಚಿತ್ತ. ಅದನ್ನು ಸಾಕುವುದು, ಅದರ ಅಗತ್ಯಗಳನ್ನು ಈಡೇರಿಸುವುದು, ಅದರ ಬೇಡಿಕೆ ಆಗ್ರಹಗಳನ್ನು ಪೂರೈಸುವುದೇ ಅವರ ಉದ್ದೇಶವಾಗಿರುತ್ತದೆ. ಅದುವೇ ಅವರ ದೇವರು.

ನಾಲ್ಕನೆಯ ದೇವರು ಅವರು ನಂಬಿರುವ 'ವಿಚಾರ'ವಾಗಿದೆ. ಅದರಂತೆ ಅವರು ನಡೆಯುತ್ತಾರೆ. ಅದರ ಮಾರ್ಗದರ್ಶನದಂತೆ ಅವರು ಪ್ರಗತಿಯ ಹಾದಿಯಲ್ಲಿ ಸಾಗುತ್ತಾರೆ.

ಈ ಎಲ್ಲ ನಂಬಿಕೆಗಳು ಲೌಕಿಕ ಜೀವನಕ್ಕೆ ಸ್ವಲ್ಪ ಮಟ್ಟಿಗೆ ಪ್ರಯೋಜನಕಾರಿಯಾಗಿರಬಹುದು. ಆದರೆ ಅದು ಶಾಶ್ವತವಲ್ಲ, ನೈಜವೂ ಅಲ್ಲ, ಅವುಗಳಲ್ಲಿ ಆಧ್ಯಾತ್ಮಿಕತೆ ಮತ್ತು ನೈತಿಕತೆ ಇಲ್ಲದ ಕಾರಣ ಕೆಡುಕುಗಳು ನುಸುಳಿಕೊಳ್ಳುತ್ತವೆ. ನೈತಿಕ ಪ್ರಜ್ಞೆಯನ್ನು

ಕಾನೂನು ಮೂಡಿಸುವುದಿಲ್ಲ, ನಿಜವಾದ ನೈತಿಕ ಮಟ್ಟವನ್ನೂ ಅದು ಕಾಯ್ದುಕೊಳ್ಳುವುದಿಲ್ಲ, ವೈಯಕ್ತಿಕ ಮತ್ತು ಸಾಮೂಹಿಕ ಜೀವನದಲ್ಲಿ ನೈತಿಕತೆಯನ್ನು ರಕ್ಷಿಸುವ ಶಕ್ತಿಯೂ ಅದಕ್ಕಿಲ್ಲ, ಅದರ ಪ್ರಭಾವ ವಲಯ ಬಹಳ ಸೀಮಿತವಾಗಿರುತ್ತದೆ. ವಿಶೇಷವಾಗಿ ಮನುಷ್ಯ ನಿರ್ಮಿತ ಕಾನೂನುಗಳಲ್ಲಿ ಅವು ಇನ್ನೂ ವಿವಶವಾಗಿ ಬಿಡುತ್ತವೆ. ಏಕೆಂದರೆ ಇಂತಹ ಕಾನೂನುಗಳನ್ನು ಬಿಗಿ ಅಥವಾ ಸಡಿಲಗೊಳಿಸುವ ಅಧಿಕಾರ ಜನರ ಕೈಯಲ್ಲಿರುತ್ತದೆ. ಮನುಷ್ಯರಲ್ಲಿ ಕ್ರಿಯಾ ಸ್ವಾತಂತ್ರ್ಯದ ಆಗ್ರಹ ಎಷ್ಟು ಹೆಚ್ಚುವುದೋ ಅಷ್ಟೇ ಪ್ರಮಾಣದಲ್ಲಿ ನೈತಿಕ ಬಂಧನಗಳು ಬಿಗಿಯೂ ಅಸಹನೀಯವೂ ಆಗುತ್ತದೆ. ಆಗ ಜನಾಭಿಪ್ರಾಯವು ಅದನ್ನು ಸಡಿಲಗೊಳಿಸಲು ನಿರ್ಬಂಧಿಸುತ್ತದೆ. ಈ ರೀತಿ ನೈತಿಕತೆಯ ಎಲ್ಲ ಬಂಧನಗಳೂ ಬಿಡಿಸಲ್ಪಡುತ್ತದೆ. ಒಂದು ಸಾರ್ವತ್ರಿಕ ನೈತಿಕ ಅವನತಿಯುಂಟಾಗುತ್ತದೆ. ಇದರ ಮಾರಕ ಪ್ರಭಾವವನ್ನು ಐಶ್ವರ್ಯದ ಹೆಚ್ಚಳವಾಗಲಿ, ಸರಕಾರದ ಬಲವಾಗಲಿ, ಭೌತಿಕ ಸಂಪನ್ಮೂಲಗಳ ಶಕ್ತಿಯಾಗಲಿ, ಇನ್ನಿತರ ಜಾಣ್ಮೆಗಳಾಗಲಿ ತಡೆಯಲಾರದು. ಇದು ಒಳಗಿಂದೊಳಗೆ ಕೊರೆದು ತಿನ್ನುವ ಮತ್ತು ಅತ್ಯಂತ ಶಕ್ತಿಶಾಲಿ ಕಟ್ಟಡವನ್ನೂ ಅದರ ಎಲ್ಲ ಸಾಮಾನು ಸರಂಜಾಮುಗಳೊಂದಿಗೆ ಕೆಡವಿ ಹಾಕುವ ಗೆದ್ದಲಾಗಿದೆ.

## ಕೆಲವು ಮೂಲಭೂತ ತತ್ವಗಳು

ಪ್ರಸ್ತುತ ಚರ್ಚೆಯಿಂದ ಕೆಲವು ವಿಷಯಗಳು ಹೊರಡುತ್ತವೆ.

1) ಮಾನವನಲ್ಲಿ ಒಂದು ಶಾಶ್ವತ ಮತ್ತು ನಿರ್ದಿಷ್ಟ ಸ್ವಭಾವ ಗುಣವುಂಟಾದರೆ ಅದರಿಂದ ಅವನ ಕರ್ಮಗಳು ಶಿಸ್ತುಬದ್ಧವಾಗುತ್ತದೆ. ಅಂತಹ ಸ್ವಭಾವ ಗುಣವಿಲ್ಲದಿದ್ದರೆ ಅವನ ಕರ್ಮ ಜೀವನವು ಅವ್ಯವಸ್ಥಿತ, ಅಭದ್ರ ಮತ್ತು ಅಪಕ್ವವಾಗಿರುವುದು.

2) ಮನಸ್ಸಿನಲ್ಲಿ ಭದ್ರವಾಗಿ ರೂಢಮೂಲವಾಗಿರುವ ಕಲ್ಪನೆಗಳ ಮೇಲೆ ಗುಣ ಸ್ವಭಾವವು ನಿಂತಿರುತ್ತದೆ. ಮಾನವನ ಶಕ್ತಿ-ಸಾಮರ್ಥ್ಯಗಳೂ ಅವುಗಳ ಅಧೀನದಲ್ಲಿ ಕೆಲಸ ಮಾಡುವಷ್ಟು ಪ್ರಬಲವಾಗಿರುತ್ತದೆ. ಇದನ್ನೇ ಪಾರಿಭಾಷಿಕವಾಗಿ 'ಈಮಾನ್'(ಮೂಲಭೂತ ವಿಶ್ವಾಸ) ಎನ್ನಲಾಗುತ್ತದೆ.

3) ಈ 'ಈಮಾನಿನ' ಆರೋಗ್ಯವನ್ನು ಅವಲಂಬಿಸಿಯೇ ಒಳಿತು-ಕೆಡುಕು, ಸರಿ-ತಪ್ಪು ಹಾಗೂ ಪ್ರಬಲ-ದುರ್ಬಲ ಗುಣ ಸ್ವಭಾವಗಳು ನಿರ್ಮಾಣಗೊಳ್ಳುತ್ತವೆ.

4) ಒಬ್ಬ ವ್ಯಕ್ತಿಯ ಕರ್ಮಗಳನ್ನು ವಿಚ್ಛಿದ್ರತೆಯಿಂದ ಹೊರತೆಗೆದು ಶಿಸ್ತುಬದ್ಧಗೊಳಿಸಲು ಯಾವ ರೀತಿ ಈಮಾನಿನ ಅಗತ್ಯವಿದೆಯೋ ಅದೇ ರೀತಿ ಅನೇಕ ವ್ಯಕ್ತಿಗಳನ್ನು ಒಡಕು ಮತ್ತು ವಿಚ್ಛಿದ್ರತೆಯಿಂದ ತೆಗೆದು ಒಂದು ಶಿಸ್ತುಬದ್ಧ ಮತ್ತು ಪ್ರಬಲ ಸಂಘಟನೆಯಾಗಿ ಮಾಡಬೇಕಾದರೆ ಅವರೆಲ್ಲರ ಮನದಲ್ಲೂ ಒಂದೇ ಈಮಾನನ್ನು ನಾಟುವುದು ಅಗತ್ಯವಾಗಿದೆ. ಆದುದರಿಂದ ಈಮಾನ್ ಕೇವಲ ವ್ಯಕ್ತಿಗತವಾಗಿರದೆ ಅದು ಸಂಘಟನೆಯ ಐಕ್ಯದ ಬೆಸುಗೆಯಾದರೆ ಮಾತ್ರ ನಾಗರಿಕತೆಯ ಹಿತವಿರುವುದು.

5) ಒಂದೇ ರೀತಿಯ ಈಮಾನಿನ ಪ್ರಭಾವದಿಂದ ಅನೇಕ ಮಂದಿಯಲ್ಲಿ ಒಂದು ಸಮಾನ ಸಂಘಟನಾ ಸ್ವಭಾವವುಂಟಾದರೆ ಮತ್ತು ಆ ಸ್ವಭಾವಗುಣಗಳ ಪ್ರಭಾವದಿಂದ ಅವರ ಜೀವನ ಒಂದೇ ರೀತಿಯಲ್ಲಾದರೆ ಅದರಿಂದ ಒಂದು ವಿಶಿಷ್ಟ ರೀತಿಯ ನಾಗರಿಕತೆ ಹುಟ್ಟುತ್ತದೆ. ಈ ನಿಟ್ಟಿನಲ್ಲಿ ಸ್ವಭಾವ ಗುಣವನ್ನು ರೂಪಿಸಿ ಅದನ್ನು ಪಕ್ವಗೊಳಿಸುವಂತಹ ಈಮಾನಿಗೆ ನಾಗರಿಕತೆಯ ಹುಟ್ಟು ಮತ್ತು ಬೆಳವಣಿಗೆಯಲ್ಲಿ ದೊಡ್ಡ ಪಾತ್ರವಿರುತ್ತದೆ.

6) ಯಾವ ಜನಾಂಗದ ಮೂಲಭೂತ ನಂಬಿಕೆಗಳು ಆಧ್ಯಾತ್ಮಿಕತೆಯಲ್ಲಿ ಅಧಿಷ್ಠಿತವಾಗಿರುತ್ತದೋ ಅದರ ಧರ್ಮ ಮತ್ತು ಸಂಸ್ಕೃತಿಯು ಒಂದೇ ಆಗಿರುತ್ತದೆ. ಯಾವ ನಂಬಿಕೆಗಳು ಲೌಕಿಕ ವಿಷಯಗಳಲ್ಲಿ ಅಧಿಷ್ಠಿತವಾಗಿರುತ್ತದೋ ಅದರ ಸಂಸ್ಕೃತಿಯು ಅದರ ಧರ್ಮದಿಂದ ಪ್ರತ್ಯೇಕವಾಗಿರುತ್ತದೆ. ಈ ಎರಡನೇ ಸ್ಥಿತಿಯಲ್ಲಿ ವೈಯಕ್ತಿಕ ಮತ್ತು ಸಾಮೂಹಿಕ ಜೀವನದ ಮೇಲೆ ಧರ್ಮದ ಯಾವುದೇ ಪ್ರಭಾವ ಉಳಿದಿರುವುದಿಲ್ಲ.

7) ಸಂಸ್ಕೃತಿಯು ಧರ್ಮ ಮುಕ್ತವಾಗುವುದರಿಂದ ನೈತಿಕ ಪತನ ಮತ್ತು ವಿನಾಶವುಂಟಾಗುತ್ತದೆ.

8) ಧರ್ಮದ ನಂಬಿಕೆಗಳು ಕೆಳ ಮಟ್ಟದಿಂದ ಅತ್ಯುನ್ನತ ಮಟ್ಟದ ವರೆಗೂ ಮಾನವ ಬುದ್ಧಿಯ ವಿಕಾಸದ ಜತೆಗಿರುವಂತಹ ಆಧ್ಯಾತ್ಮಿಕ ವಿಷಯಗಳನ್ನೊಳಗೊಂಡಾಗ ಸಂಸ್ಕೃತಿಯು ನಾಗರಿಕತೆಯ ಅಧೀನದಲ್ಲಿರುತ್ತದೆ. ಅದರಿಂದ ಮನುಷ್ಯ ಅತ್ಯುನ್ನತ ಮಟ್ಟದ ಧಾರ್ಮಿಕ ವ್ಯಕ್ತಿಯಾಗುತ್ತಾನೆ. ಲೌಕಿಕ ವ್ಯಕ್ತಿಯೂ ಆಗುತ್ತಾನೆ. ಅಷ್ಟೇ ಅಲ್ಲ, ಅವನ ಲೌಕಿಕತೆಯು ಪೂರ್ಣ ಧಾರ್ಮಿಕತೆಯೂ ಅವನ ಧಾರ್ಮಿಕತೆಯು ಪೂರ್ಣ ಲೌಕಿಕತೆಯೂ ಆಗುತ್ತದೆ.

9) ಒಂದು ಜನಾಂಗದ ಧರ್ಮ ಮತ್ತು ಸಂಸ್ಕೃತಿಯು ಒಂದೇ ಆದರೆ ಅದರ ವಿಶ್ವಾಸವು ಕೇವಲ ಧಾರ್ಮಿಕ ನಂಬಿಕೆಯಾಗಿರುವುದಿಲ್ಲ, ಅದು ಲೌಕಿಕ ನಂಬಿಕೆಯೂ ಆಗುತ್ತದೆ. ಅವನ ನಂಬಿಕೆಯು ಚಂಚಲವಾಗಿರುವುದು ಅವನ ಧರ್ಮ ಮತ್ತು ಸಂಸ್ಕೃತಿ ಎರಡಕ್ಕೂ ಅಪಾಯಕಾರಿಯಾಗಿದೆ. ಅವನ ಧರ್ಮ ಮತ್ತು ಲೋಕ ಎರಡಕ್ಕೂ ಹಾನಿಕರವಾಗಿದೆ.

ಈಮಾನಿನ ವಾಸ್ತವಿಕತೆ, ವೈಯಕ್ತಿಕ ಚಾರಿತ್ರ್ಯದಲ್ಲಿ ಅದರ ಮೂಲಭೂತ ಮಹತ್ವ ಮತ್ತು ಸಾಮೂಹಿಕ ಸಂಸ್ಕೃತಿಯಲ್ಲಿ ಅದರ ಮೂಲಸ್ಥಾನ-ಇವುಗಳನ್ನು ಗ್ರಹಿಸಿದ ಬಳಿಕ, ಇನ್ನು ಇಸ್ಲಾಮ್ ಯಾವ ವಿಷಯಗಳನ್ನು ನಂಬಲು ಕರೆ ಕೊಡುತ್ತದೆ. ಅದರ ನಂಬಿಕೆಗಳನ್ನು ಬೌದ್ಧಿಕ ವಿಮರ್ಶೆಗೆ ಗುರಿಪಡಿಸಿದಾಗ ಯಾವ ಪರಿಣಾಮ ನೀಡುತ್ತವೆ. ಆ ವ್ಯವಸ್ಥೆಯಲ್ಲಿ ಈಮಾನಿನ ಸ್ಥಾನವೇನು ಮತ್ತು ಮಾನವನ ವೈಯಕ್ತಿಕ ಮತ್ತು ಸಾಮೂಹಿಕ ನಡವಳಿಕೆಯಲ್ಲಿ ಅದರ ಪಾತ್ರವೇನೆಂಬುದನ್ನು ಅರಿಯೋಣ.

## ಇಸ್ಲಾಮಿನ ಮೂಲಭೂತ ವಿಶ್ವಾಸಗಳು

ಪವಿತ್ರ ಕುರ್‌ಆನಿನಲ್ಲಿ ಇದರ ಕುರಿತು ವಿವರವಾಗಿ ಬಂದಿದೆ. ಕುರ್‌ಆನಿನ ಶೈಲಿಯೇನೆಂದರೆ ಅದು ಒಂದೆಡೆ ಈಮಾನಿನ ಎಲ್ಲ ಅಂಶಗಳನ್ನು ವಿವರಿಸಿದರೆ, ಇನ್ನು ಕೆಲವೆಡೆ ಅದರ ಕೆಲವು ಅಂಶಗಳನ್ನು ಸಂದರ್ಭಾನುಸಾರ ಪ್ರಸ್ತುತಪಡಿಸಿ ಅದಕ್ಕೇ ಒತ್ತುಕೊಡುತ್ತದೆ. ಇದರಿಂದಾಗಿ ಕೆಲವರಿಗೆ ತಪ್ಪು ಕಲ್ಪನೆಯುಂಟಾಗಿದೆ. ಈಮಾನಿನ ಎಲ್ಲ ಅಂಶಗಳನ್ನು ಸ್ವೀಕರಿಸಬೇಕೆಂದಿಲ್ಲ, ಅವುಗಳ ಪೈಕಿ ಒಂದು ಅಥವಾ ಕೆಲವು ಅಂಶಗಳನ್ನು ನಂಬಿದರೆ ಸಾಕೆಂದು ಅವರು ಭಾವಿಸುತ್ತಾರೆ. ಕೆಲವೊಂದನ್ನು ನಿರಾಕರಿಸಿದರೆ ಅದರಿಂದ ಮಾನವನ ಮೋಕ್ಷಕ್ಕೇನೂ ಅಡ್ಡಿಯಾಗುವುದಿಲ್ಲವೆಂದು ಅವರ ಭಾವನೆ. ಆದರೆ ಕುರ್‌ಆನ್ ಈಮಾನಿನ ಎಲ್ಲ ಅಂಶಗಳ ವಿಶ್ವಾಸವಿರಿಸಬೇಕಾದುದು ಅಗತ್ಯವೆಂದು ಸಾರಿ ಹೇಳುತ್ತದೆ. ಅದರ ಅಂಶಗಳನ್ನು ಬೇರ್ಪಡಿಸುವಂತಿಲ್ಲ, ಅವುಗಳ ಪೈಕಿ ಒಂದನ್ನಾದರೂ ನಿರಾಕರಿಸಿ ಉಳಿದೆಲ್ಲವನ್ನು ನಂಬಿದರೂ ಅದು ವ್ಯರ್ಥ.

ಕುರ್‌ಆನ್ ಒಂದೆಡೆ ಅಲ್ಲಾಹನ ಮೇಲೆ ವಿಶ್ವಾಸವಿಡಲು ಕರೆ ನೀಡಿದರೆ (41:30) ಇನ್ನೊಂದೆಡೆ ಅಲ್ಲಾಹನೊಂದಿಗೆ ಪರಲೋಕವನ್ನು ನಂಬುವಂತೆ ಹೇಳಿದೆ (2:62, 3:114, 5:69, 13:26) ಮತ್ತೊಂದು ಕಡೆ ಅಲ್ಲಾಹನ ಮೇಲೂ ಪ್ರವಾದಿಗಳ ಮೇಲೂ ವಿಶ್ವಾಸವಿರಿಸುವಂತೆ (3:179, 57:28) ಹೇಳಿದರೆ ಮಗದೊಂದು ಕಡೆ ಅಲ್ಲಾಹನನ್ನೂ ಮುಹಮ್ಮದ್(ಸ) ಅವರನ್ನೂ ನಂಬಿದವರನ್ನು ಮಾತ್ರ ವಿಶ್ವಾಸಿಗಳೆಂದು ಹೇಳಿದೆ. (24:62, 47:33,48:13, 72:23) ಬೇರೊಂದು ಕಡೆ, ಅಲ್ಲಾಹ್, ಮುಹಮ್ಮದ್(ಸ) ಮತ್ತು ಕುರ್‌ಆನ್ ಈ ಮೂರರಲ್ಲೂ ವಿಶ್ವಾಸವಿರಿಸುವಂತೆ ಆದೇಶಿಸಿದರೆ (64:8) ಒಂದು ಕಡೆ ಅಲ್ಲಾಹ್, ಗ್ರಂಥಗಳು, ಕುರ್‌ಆನ್ ಮತ್ತು ಪರಲೋಕ– ಈ ನಾಲ್ಕನ್ನೂ ಪ್ರಸ್ತಾಪಿಸುತ್ತದೆ (4:22).

ಅಲ್ಲಾಹನನ್ನೂ ದೇವಚರರನ್ನೂ ಪ್ರವಾದಿಗಳನ್ನೂ ಕುರ್‌ಆನನ್ನು ನಿರಾಕರಿಸುವುದು ಕುಫ್ರ್ ಮತ್ತು ಕರ್ಮಭ್ರಷ್ಟತೆಯೆಂದು ಕುರ್‌ಆನ್ ಸಾರಿದೆ. (2:98) ಅದೇ ರೀತಿ ಅಲ್ಲಾಹ್, ದೇವಚರರು, ಪ್ರವಾದಿಗಳು ಮತ್ತು ಕುರ್‌ಆನಿನ ಮೇಲೆ ವಿಶ್ವಾಸವಿರಿಸುವವರನ್ನು ವಿಶ್ವಾಸಿಗಳು ಎನ್ನಲಾಗಿದೆ. (2:285) ಒಂದು ಸ್ಥಳದಲ್ಲಿ ಈಮಾನಿನ ಐದು ಅಂಶಗಳನ್ನು ಪ್ರಸ್ತಾಪಿಸಲಾಗಿದೆ. ಅಲ್ಲಾಹ್, ಪರಲೋಕ, ದೇವಚರರು, ಗ್ರಂಥಗಳು ಮತ್ತು ಪ್ರವಾದಿಗಳು (2:177) ಈ ಐದು ಅಂಶಗಳಲ್ಲದೆ ಮುಹಮ್ಮದ್(ಸ) ಮತ್ತು ಕುರ್‌ಆನಿನ ಮೇಲೂ ವಿಶ್ವಾಸವಿರಿಸುವಂತೆ ಒಂದು ಕಡೆ ಕರೆ ನೀಡಲಾಗಿದೆ. ಅವುಗಳ ನಿರಾಕರಣೆಯು ಕುಫ್ರ್ ಮತ್ತು ಪಥಭ್ರಷ್ಟತೆ ಎಂದು ಹೇಳಲಾಗಿದೆ (4:136). ಇಂತಹ ವಿವಿಧ ಅಂಶಗಳ ಪ್ರಸ್ತಾಪವು ಕುರ್‌ಆನಿನ ಇನ್ನೂ ಅನೇಕ ಕಡೆಗಳಲ್ಲಿವೆ. ಪ್ರವಾದಿಗಳ ಮೇಲೆ

ವಿಶ್ವಾಸವಿರಿಸುವುದರ ಜೊತೆಯಲ್ಲಿ ಮುಹಮ್ಮದ್(ಸ) ಅವರ ಮೇಲಿನ ವಿಶ್ವಾಸವೂ ಈಮಾನಿನ ಕಡ್ಡಾಯ ನಿಬಂಧನೆಯೆನ್ನಲಾಗಿದೆ. (7:157, 23:67, 47:2, 65:11) ಈ ಪೈಕಿ ಹೆಚ್ಚಿನ ಸೂಕ್ತಗಳಲ್ಲಿ ಮೂಸಾ ಮತ್ತು ಈಸಾರ(ಅ) ಸಮುದಾಯಗಳೊಂದಿಗೆ ಪ್ರವಾದಿ ಮುಹಮ್ಮದ್(ಸ) ಅವರ ಮೇಲೆ ವಿಶ್ವಾಸ ತಾಳುವಂತೆ ಕರೆ ನೀಡಲಾಗಿದೆ. ಕುರ್‌ಆನ್ ಮತ್ತು ಮುಹಮ್ಮದ್(ಸ) ಅವರ ಮೇಲೆ ವಿಶ್ವಾಸ ತಾಳದೆ ಇದ್ದರೆ ನಿಮಗೆ ಸನ್ಮಾರ್ಗ ಲಭ್ಯವಾಗದು ಎಂದು ಹೇಳಲಾಗಿದೆ.

ಈ ಎಲ್ಲ ವಿವರಣೆಗಳಿಂದ ಈಮಾನಿನ ಐದು ಅಂಶಗಳಿವೆಯೆಂದು ತಿಳಿದುಬರುತ್ತದೆ. ಅಲ್ಲಾಹ್, ದೇವಚರರು, ಗ್ರಂಥಗಳು (ಇದರಲ್ಲಿ ಕುರ್‌ಆನ್ ಕೂಡಾ ಇದೆ), ಪ್ರವಾದಿಗಳು (ಇದರಲ್ಲಿ ಮುಹಮ್ಮದ್(ಸ) ಕೂಡಾ ಸೇರಿದ್ದಾರೆ) ಹಾಗೂ ಪರಲೋಕ.[1]

## ಬೌದ್ಧಿಕ ವಿಶ್ಲೇಷಣೆ

ಪ್ರಸ್ತುತ ಐದೂ ವಿಶ್ವಾಸಗಳು ಪರೋಕ್ಷಕ್ಕೆ ಸಂಬಂಧಿಸಿದ್ದಾಗಿದೆ. ಆದ್ದರಿಂದ ಇದನ್ನು ಧಾರ್ಮಿಕ ಮತ್ತು ಆಧ್ಯಾತ್ಮಿಕ ನಂಬಿಕೆಗಳೆನ್ನಬಹುದು. ಆದರೆ ಇಸ್ಲಾಮ್ ಅವುಗಳ ಮೇಲೆ ಆಧ್ಯಾತ್ಮಿಕ ವ್ಯವಸ್ಥೆಯನ್ನು ಮಾತ್ರ ಕಟ್ಟಿದ್ದಲ್ಲ. ನೈತಿಕ, ರಾಜಕೀಯ ಮತ್ತು ನಾಗರಿಕ ವ್ಯವಸ್ಥೆಯ ಅಸ್ತಿವಾರವನ್ನೂ ಹಾಕಿದೆ. ಅದು ಧರ್ಮ ಮತ್ತು ಲೋಕ ಎರಡನ್ನೂ ಸೇರಿಸಿ ಒಂದು ವ್ಯವಸ್ಥೆಯನ್ನು ಹುಟ್ಟುಹಾಕಿದ್ದು ಮಾನವ ಜೀವನದ ಸಕಲ ರಂಗಗಳೂ ಅದರಂತೆ ಚಲಿಸುತ್ತವೆ. ಆ ವ್ಯವಸ್ಥೆಯ ಸ್ಥಿರತೆ ಮತ್ತು ಉಳಿವಿಗೆ ಎಷ್ಟು ಶಕ್ತಿ ಬೇಕೋ ಅದು ಈ ಐದೂ ನಂಬಿಕೆಗಳಿಂದ ದೊರಕುತ್ತದೆ.

ಇಸ್ಲಾಮ್ ಕಟ್ಟ ಬಯಸುವ ನಾಗರಿಕತೆಯು ಕೇವಲ ಮಾನವ ನಾಗರಿಕತೆಯಾಗಿದೆ. ಅಂದರೆ ಅದು ಯಾವುದೇ ದೇಶ, ವರ್ಗ, ವರ್ಣ, ಭಾಷೆಗಳಿಗೆ ಸೀಮಿತವಾಗಿರದೆ ಸಕಲ ಮಾನವ ಕೋಟಿಯ ಕಲ್ಯಾಣವನ್ನು ಬಯಸುತ್ತದೆ. ಮಾನವನಿಗೆ ಒಳಿತಾಗಿರುವ ಎಲ್ಲವನ್ನೂ ಬೆಳೆಯಗೊಡುವ ಹಾಗೂ ಮಾನವನಿಗೆ ಹಾನಿಕಾರಕವಾಗಿರುವ ಎಲ್ಲ ಕೆಡುಕುಗಳನ್ನೂ ಅಳಿಸಿ ಹಾಕುವಂತಹ ವ್ಯವಸ್ಥೆಯನ್ನು ಸ್ಥಾಪಿಸಬಯಸುತ್ತದೆ. ಇಂತಹ ಅಪ್ಪಟ ಮಾನವ ನಾಗರಿಕತೆಯನ್ನು ಭೌತಿಕ ನಂಬಿಕೆಗಳ ಮೇಲೆ ಸ್ಥಾಪಿಸಲು ಸಾಧ್ಯವಿಲ್ಲ. ಏಕೆಂದರೆ ಅದರಲ್ಲಿ ಎರಡು ಅಂಶಗಳಿವೆ. ಅವುಗಳಿಗೆ ಮಾನವನೊಂದಿಗೆ ಗಾಢ ಸಂಬಂಧವಿದೆ. ಉದಾ:

---

1. ಹದೀಸ್‌ನಲ್ಲಿ "ಒಳಿತು-ಕೆಡುಕುಗಳೆಲ್ಲವೂ ಅಲ್ಲಾಹನಿಂದಲೇ ವಿಧಿಸಲಾಗಿದೆ" ಎಂಬ ಆರನೇ ಅಂಶವೂ ಇದೆ. ಆದರೆ ಅದು ಅಲ್ಲಾಹನ ಮೇಲಿನ ವಿಶ್ವಾಸದ ಒಂದು ಭಾಗವಾಗಿದೆ. ಕುರ್‌ಆನ್ ಅದನ್ನು ಹಾಗೆಯೇ ಪ್ರಸ್ತಾಪಿಸಿದೆ. ಇದು ಅಲ್ಲಾಹನ ಮೇಲಿನ ವಿಶ್ವಾಸದ ಒಂದು ಪ್ರಧಾನ ಹಾಗೂ ಅಜ್ಞಾತ ಅಂಶವಾಗಿರುವುದರಿಂದ ಅದನ್ನು ಮನಸ್ಸಿನಲ್ಲಿ ನಾಟುವಂತೆ ಮಾಡಲು ಹದೀಸ್‌ನಲ್ಲಿ ಅದನ್ನು ಪ್ರತ್ಯೇಕವಾಗಿ ಹೇಳಲಾಗಿದೆ.

ಸೂರ್ಯ, ಚಂದ್ರ, ಭೂಮಿ, ಗಾಳಿ, ಬೆಳಕು ಇತ್ಯಾದಿ ಎಲ್ಲವೂ ಮಾನವರು ಗ್ರಹಿಸುವಂತಹ ವಸ್ತುಗಳಾಗಿದ್ದು ಅವುಗಳೊಂದಿಗೆ ಎಲ್ಲರ ಸಂಬಂಧವೂ ಸಮಾನವಾಗಿದೆ. ಆದರೆ ಇನ್ನೊಂದವರೊಂದಿಗೆ ಮಾನವರ ಸಂಬಂಧ ಸಮಾನವಾಗಿಲ್ಲ, ಉದಾ: ದೇಶ, ಜನಾಂಗ, ವರ್ಣ, ಭಾಷೆ ಇತ್ಯಾದಿ. ಇವೆರಡರ ಪೈಕಿ ಮೊದಲಿನವುಗಳ ಮೇಲೆ ವಿಶ್ವಾಸಕ್ಕೆ ಅರ್ಥವಿಲ್ಲ. ಎರಡನೆಯದು ಮಾನವರನ್ನು ಏಕೀಕರಿಸುವ ಬದಲು ಅವರನ್ನು ವಿಂಗಡಿಸುತ್ತದೆ. ಆದ್ದರಿಂದ ಮಾನವರನ್ನು ಏಕೀಕರಿಸುವಂತಹ ನಾಗರಿಕತೆಯ ಅಸ್ತಿವಾರವನ್ನು ಅಭೌತಿಕ ಮತ್ತು ಪರೋಕ್ಷ ನಂಬಿಕೆಗಳ ಮೇಲೆ ಸ್ಥಾಪಿಸುವುದು ಅನಿವಾರ್ಯವಾಗಿದೆ. ಅದರಲ್ಲಿರಬೇಕಾದ ಇನ್ನೂ ಕೆಲವು ವಿಶೇಷಗಳಿವೆ ಅದು ಅಂಧಶ್ರದ್ಧೆ, ಮೂಢನಂಬಿಕೆಗಳಿಂದ ವಿರಹಿತವಾಗಿದ್ದು ಅವುಗಳನ್ನು ನಂಬಲು ಮಾನವನಿಗೆ ಯಾವುದೇ ಅಡ್ಡಿಯುಂಟಾಗಬಾರದು. ಅದರ ವಿಷಯಗಳು ನಮ್ಮ ಜೀವನದೊಂದಿಗೆ ಗಾಢ ಸಂಬಂಧ ವಿರುವಂತಹದ್ದಾಗಿರಬೇಕು. ಅದರ ನಾಗರಿಕ ವ್ಯವಸ್ಥೆಯು ಮಾನವನ ಆಚಾರ-ವಿಚಾರಗಳನ್ನು ಆವರಿಸಲು ಸಹಾಯಕವಾಗುವಂತಹ ಶಕ್ತಿಯನ್ನು ಹೊಂದಿರಬೇಕು. ಇಸ್ಲಾಮಿನ ಮೂಲಭೂತ ವಿಶ್ವಾಸಗಳು ಇವೆಲ್ಲಕ್ಕೂ ಸರಿ ಹೊಂದುತ್ತವೆ.

ಇಸ್ಲಾಮ್ ದೇವನ ಬಗ್ಗೆ, ದೇವಚರರು, ವಹ್ಯ್(ದಿವ್ಯವಾಣಿ), ಪ್ರವಾದಿತ್ವ ಮತ್ತು ಪರಲೋಕದ ಬಗ್ಗೆ ನೀಡುವ ಕಲ್ಪನೆಯು ಮಾನವ ಬುದ್ಧಿಗೆ ನಿಲುಕದೆ ಇರುವಂತಹದ್ದಲ್ಲ. ನಮ್ಮ ಬುದ್ಧಿಗೆ ಅದನ್ನು ಗ್ರಹಿಸಲಸಾಧ್ಯವಾಗುವುದಿಲ್ಲ, ನಾವು ಅದರ ಆಳಕ್ಕೆ ತಲುಪಲಾರೆವು, ಅವುಗಳ ವಾಸ್ತವಿಕ ಸ್ವರೂಪ ನಮಗೆ ಹೊಳೆಯುವುದಿಲ್ಲ ಎಂಬುದು ಬೇರೆ ಮಾತು. ಈ ಲೋಕದಲ್ಲಿ ಯಾವುದೆಲ್ಲ ಸಂಶೋಧನೆಗಳಾಗಿವೆಯೋ ಯಾವುದನ್ನೆಲ್ಲ ವಿಜ್ಞಾನಿಗಳು ಸಮರ್ಥಿಸಿದ್ದಾರೋ ಅವುಗಳ ಸ್ಥಿತಿಯೂ ಅದೇ. ಅವು ನಮ್ಮ ಕಣ್ಣಿಗೆ ಗೋಚರಿಸುವುದಿಲ್ಲ, ಆದರೆ ಅವುಗಳ ಇರುವಿಕೆಯನ್ನು ನಾವು ನಿರಾಕರಿಸುವುದಿಲ್ಲ, ಉದಾ: ಅಣುಶಕ್ತಿ, ಗುರುತ್ವಾಕರ್ಷಣಾ ಶಕ್ತಿ, ವಿಕಾಸ ಹಾಗೂ ಇನ್ನಿತರ ವಿಷಯಗಳು. ಅವುಗಳ ವಾಸ್ತವಿಕತೆಗಳನ್ನು ನಾವು ಚೆನ್ನಾಗಿ ಗ್ರಹಿಸಿದ್ದೇವೆ ಎಂಬುದಕ್ಕಾಗಿ ನಾವು ಅವುಗಳನ್ನು ನಂಬುತ್ತಿಲ್ಲ, ಬಾಹ್ಯವಾಗಿ ಅವುಗಳ ಪ್ರಯೋಜನಗಳನ್ನು ನಾವು ಗ್ರಹಿಸುವುದರಿಂದ ಅವುಗಳನ್ನು ನಂಬಲು ನಾವು ನಿರ್ಬಂಧಿತರಾಗಿದ್ದೇವೆ. ಅದೇ ರೀತಿ ಇಸ್ಲಾಮ್ ಯಾವ ವಿಷಯಗಳನ್ನು ನಂಬಬೇಕೆಂದು ಹೇಳಿದೆಯೋ ಅವುಗಳನ್ನು ದೃಢೀಕರಿಸಲು ನಮ್ಮ ಬುದ್ಧಿಗೆ ಪೂರ್ಣವಾಗಿ ನಿಲುಕಬೇಕೆಂಬ ಅಗತ್ಯವೇನೂ ಇಲ್ಲ, ಬದಲಾಗಿ ಈ ಪ್ರಪಂಚ ಮತ್ತು ಮಾನವನ ಕುರಿತು ಇಸ್ಲಾಮಿನ ಸಿದ್ಧಾಂತವು ಬುದ್ಧಿಗೆ ವಿರುದ್ಧವಲ್ಲ, ಅದು ನಿಜವೇ ಆಗಿರುವ ಸಾಧ್ಯತೆಯಿದೆಯೆಂದು ಗ್ರಹಿಸಿದರೆ ಸಾಕು. ಇಸ್ಲಾಮ್ ಮೂಲಭೂತ ವಿಶ್ವಾಸಗಳೆಂದು ಸಾರಿರುವ ಈ ಐದು ನಂಬಿಕೆಗಳು ಇರಬೇಕೆಂದು ಬುದ್ಧಿ ಬಯಸುತ್ತದೆ.

ಇಸ್ಲಾಮಿನ ತತ್ವಸಿದ್ಧಾಂತ ಹೀಗಿದೆ- 1) ಪ್ರಪಂಚದ ವ್ಯವಸ್ಥೆಯನ್ನು ಓರ್ವ ಸರ್ವಶಕ್ತನೇ

ಸ್ಥಾಪಿಸಿ ನಡೆಸುತ್ತಿದ್ದಾನೆ. 2) ಅವನ ಅಧೀನದಲ್ಲಿ ಅವನ ಆಜ್ಞೆಗಳಂತೆ ಕಾರ್ಯವೆಸಗುವ ಇತರ ಅಸಂಖ್ಯಾತ ಜೀವಿಗಳಿವೆ. 3) ಮಾನವನೊಳಗೆ ಆ ಸೃಷ್ಟಿಕರ್ತನು ಒಳಿತು-ಕೆಡುಕುಗಳ ಒಲವು ಮತ್ತು ಸುಜ್ಞಾನ-ಅಜ್ಞಾನಗಳನ್ನು ಇರಿಸಿದ್ದು ಅವನು ಸರಿ-ತಪ್ಪು ಎರಡೂ ದಾರಿಗಳಲ್ಲಿ ನಡೆಯಬಲ್ಲನು. ಈ ಎರಡು ತದ್ವಿರುದ್ಧ ಶಕ್ತಿ ಮತ್ತು ಒಲವುಗಳಲ್ಲಿ ಯಾವುದು ಪ್ರಾಬಲ್ಯ ಪಡೆಯುತ್ತದೋ ಅದನ್ನೇ ಮಾನವ ಅನುಸರಿಸುತ್ತಾನೆ. 4) ಈ ಒಳಿತು-ಕೆಡುಕುಗಳ ಸಂಘರ್ಷದಲ್ಲಿ ಒಳಿತಿನ ಶಕ್ತಿಗಳಿಗೆ ಬೆಂಬಲ ನೀಡಲಿಕ್ಕಾಗಿ ಮತ್ತು ಮಾನವನಿಗೆ ನೇರ ಮಾರ್ಗ ತೋರಿಸಲಿಕ್ಕಾಗಿ ಆ ಸೃಷ್ಟಿಕರ್ತನು ಮಾನವರಿಂದಲೇ ಅತ್ಯುತ್ತಮ ವ್ಯಕ್ತಿಯನ್ನು ಆರಿಸಿ ಅವನಿಗೆ ನೈಜ ಜ್ಞಾನ ನೀಡಿ ಜನರನ್ನು ಸನ್ಮಾರ್ಗದಲ್ಲಿ ನಡೆಸಲಿಕ್ಕಾಗಿ ನೇಮಿಸುತ್ತಾನೆ. 5) ಮಾನವ ಹೊಣೆ ರಹಿತನಲ್ಲ, ಅವನ ಎಲ್ಲ ಐಚ್ಛಿಕ ಕ್ರಿಯೆಗಳಿಗೆ ಅವನು ಸೃಷ್ಟಿಕರ್ತನ ಮುಂದೆ ವಿಚಾರಣೆಗೊಳಗಾಗಲಿದ್ದಾನೆ. ಒಂದು ದಿನ ಅವನಿಗೆ ಪ್ರತಿಯೊಂದು ಕರ್ಮದ ಲೆಕ್ಕಾಚಾರ ನೀಡಲಿಕ್ಕಿದ್ದು ತನ್ನ ಕರ್ಮಗಳ ಒಳ್ಳೆಯ ಅಥವಾ ಕೆಟ್ಟ ಪರಿಣಾಮಗಳನ್ನು ನೋಡಲಿದ್ದಾನೆ.

ಈ ತತ್ವಸಿದ್ಧಾಂತವು- ದೇವ, ದೇವಚರರು, ಪ್ರವಾದಿತ್ವ, ಗ್ರಂಥಗಳು ಹಾಗೂ ಪರಲೋಕ, ಕೇವಲ ಮೂಢನಂಬಿಕೆಗಳಲ್ಲ, ಅವುಗಳ ಬಗ್ಗೆ ಚಿಂತನ-ಮಂಥನ ನಡೆಸಿದಂತೆಲ್ಲ ಅವು ಸತ್ಯವೆಂಬುದರ ಕಡೆಗೆ ನಮ್ಮ ಒಲವು ಸಾಗುತ್ತದೆ.

ಅಲ್ಲಾಹನ ಅಸ್ತಿತ್ವವು ನಮ್ಮ ಬುದ್ಧಿಗೆ ನಿಲುಕದಿದ್ದರೂ ಅದನ್ನು ಒಪ್ಪಿಕೊಳ್ಳದೆ ಗತ್ಯಂತರವಿಲ್ಲ. ಅದು ಪ್ರಪಂಚದ ಒಗಟು ಯಾವ ರೀತಿಯಿಂದಲೂ ಬಿಡಿಸಲು ಸಾಧ್ಯವಿಲ್ಲದಂತಹ ಒಂದು ಅಗತ್ಯವಾಗಿದೆ. ಮಲಕ್‌ಗಳ(ದೇವಚರರು) ಅಸ್ತಿತ್ವ ಹೇಗೆಂಬುದನ್ನು ನಾವು ನಿರ್ಧರಿಸಲಾರೆವು. ಆದರೆ ಅವುಗಳ ಇರುವಿಕೆಯ ಬಗ್ಗೆ ಸಂದೇಹಪಡಲು ಅವಕಾಶವಿಲ್ಲ. ಅವುಗಳ ಅಸ್ತಿತ್ವವನ್ನು ಎಲ್ಲ ಬುದ್ಧಿಜೀವಿಗಳು ಒಂದಲ್ಲ ಒಂದು ರೀತಿಯಲ್ಲಿ ಅಂಗೀಕರಿಸುತ್ತಾರೆ. ಕುರ್‌ಆನ್ ಯಾವ ಹೆಸರಿನಿಂದ ಅವುಗಳನ್ನು ಕರೆಯುತ್ತದೋ ಆ ಹೆಸರು ಅವರು ಕೇಳುವುದಿಲ್ಲವಾದರೂ ಸರಿ.

ಕಿಯಾಮತ್ ಅಥವಾ ಪರಲೋಕವಾಗುವುದು ಮತ್ತು ಈ ಲೋಕವು ಒಂದಲ್ಲ ಒಂದು ದಿನ ನಾಶವಾಗುವುದು ಕೂಡಾ ವೈಜ್ಞಾನಿಕ ಚಿಂತನೆಯಲ್ಲಿ ಸಾಧ್ಯ ಮಾತ್ರವಲ್ಲ ಅದು ಬೆಂಬಲರ್ಹವಾಗಿದೆ. ಮಾನವನು ತನ್ನ ದೇವನ ಮುಂದೆ ವಿಚಾರಣೆಗೆ ನಿಂತು, ತನ್ನ ಕರ್ಮಗಳಿಗೆ ಪುರಸ್ಕಾರ ಅಥವಾ ಶಿಕ್ಷೆ ಪಡೆಯಬೇಕಾದೀತೆಂಬುದನ್ನು ಸ್ಪಷ್ಟ ಪುರಾವೆಗಳಿಂದ ಸಾಬೀತು ಪಡಿಸಲು ಸಾಧ್ಯವಿಲ್ಲ, ಆದರೆ ಮರಣ ಮತ್ತು ಮರಣದ ನಂತರ ಸ್ಥಿತಿಯ ಬಗ್ಗೆ ಎಷ್ಟೆಲ್ಲ ಸಿದ್ಧಾಂತಗಳು ಅಸ್ತಿತ್ವದಲ್ಲಿವೆಯೋ ಅವುಗಳ ಪೈಕಿ ಅತ್ಯುತ್ತಮ, ಪರಿಣಾಮಕಾರಿ ಹಾಗೂ ಊಹೆಗೆ ಹತ್ತಿರವಾಗಿರುವ ಸಿದ್ಧಾಂತವು ಇಸ್ಲಾಮಿನದ್ದೆಂದು ಸಾಮಾನ್ಯ ಬುದ್ಧಿಯು ಒಪ್ಪಿಕೊಳ್ಳುವುದಕ್ಕೆ ಅಡ್ಡಿಯಿಲ್ಲ.

ವಹ್ಯ್(ದಿವ್ಯ ಸೂಚನೆ/ವಾಣಿ) ಮತ್ತು ಪ್ರವಾದಿತ್ವಕ್ಕೆ ವೈಜ್ಞಾನಿಕ ಪುರಾವೆಗಳ ನೀಡಲು ಸಾಧ್ಯವಿಲ್ಲ. ಆದರೆ ದೈವಿಕವೆಂದು ಹೇಳಲಾಗುವ ಗ್ರಂಥಗ ಅರ್ಥ-ತಾತ್ಪರ್ಯಗಳನ್ನು ಹಾಗೂ ಪ್ರವಾದಿಗಳೆಂದು ಹೇಳಲಾಗುವ ಜನರ ಬದುಕ ವಿಶ್ಲೇಷಿಸಿದರೆ ಮಾನವರ ಆಚಾರ-ವಿಚಾರಗಳ ಮೇಲೆ ಗಾಢ, ವಿಶಾಲ ಮ ಪರಿಣಾಮಕಾರಿಯಾದ ಪ್ರಭಾವವನ್ನು ಬೇರಾವ ಮನುಷ್ಯರೂ ಬೀರಿಲ್ಲವೆಂಬ ತೀರ್ಮಾ ಬರಬೇಕಾಗುತ್ತದೆ. ಮಾನವ ಕೃತಿಗಳಿಗಿಲ್ಲದ ಮತ್ತು ಸಾಮಾನ್ಯ ಮನುಷ್ಯರಿಗಿಲ್ಲದ ಯಾವುದೋ ವಿಶೇಷತೆ ಅವುಗಳಲ್ಲಿದೆಯೆಂದು ನಂಬಲಿಕ್ಕೆ ಇದು ಧಾರಾಳ ಸಾಕು.

ಈ ವಿಶ್ಲೇಷಣೆಗಳಿಂದ ಇಸ್ಲಾಮಿನ ಮೂಲಭೂತ ವಿಶ್ವಾಸಗಳು ಬುದ್ಧಿ ವಿರುದ್ಧವಲ್ಲವೆಂದು ಸ್ಪಷ್ಟವಾಗುತ್ತದೆ. ಅದನ್ನು ನಿರಾಕರಿಸಲು ಬುದ್ಧಿಯ ಬಳಿ ಯಾವುದೇವ ಇಲ್ಲ, ಅಷ್ಟೇ ಅಲ್ಲ, ವೈಜ್ಞಾನಿಕ ಮತ್ತು ಬೌದ್ಧಿಕ ಪ್ರಗತಿಯ ಯಾವುದಾದರೂ ಹಂತ ತಲಪಿದಾಗ, ಮಾನವನು ಅವುಗಳನ್ನು ತಿರಸ್ಕರಿಸಲು ನಿರ್ಬಂಧಿತನಾಗುವಂತಹ ಯಾ ಅಂಶವೂ ಅದರಲ್ಲಿಲ್ಲ, ಬದಲಾಗಿ ಬುದ್ಧಿಯು ಅವುಗಳ ಸಾಧ್ಯತೆಯನ್ನೇ ಒಪ್ಪುತ್ತದೆ. ಇ ವಿಶ್ವಾಸ ಮತ್ತು ದೃಢೀಕರಣಕ್ಕೂ ಬುದ್ಧಿಗೂ ಸಂಬಂಧವಿಲ್ಲ, ಅದು ಸಂಪೂರ್ಣ ಆತ್ಮಸಾಕ್ಷಿ ವಿಷಯವಾಗಿದೆ. ಒಂದು ವೇಳೆ ನಾವು ಯಾವುದೇ ಅಜ್ಞಾತ ವಿಷಯಗಳನ್ನು ನಂಬದಿದ್ದ ನಮ್ಮ ಮನಸ್ಸಿಗೆ ಅದು ಎಟಕದಿದ್ದರೆ ಅದನ್ನು ನಂಬುವಂತೆ ನಮ್ಮನ್ನು ಯಾರ ನಿರ್ಬಂಧಿಸುವಂತಿಲ್ಲ, ನಾವು ಯಾವುದನ್ನೆಲ್ಲ ನಂಬುತ್ತೇವೋ ಅವು ಕೇವಲ ವೈಜ್ಞಾನಿಕವಾಗಿ ನಮ್ಮ ಪ್ರಾಯೋಗಿಕ ಜೀವನದೊಂದಿಗೆ ಅದಕ್ಕೆ ಸಂಬಂಧವಿಲ್ಲ. ಉದಾ: ಗುರುತ್ವಾಕರ್ಷ ಶಕ್ತಿ, ಅಣುಶಕ್ತಿ ಇತ್ಯಾದಿಗಳನ್ನು ನಂಬಿದರೂ ನಂಬದಿದ್ದರೂ ನಮ್ಮ ಜೀವನದ ಮೇ ಅದರ ಯಾವ ಪರಿಣಾಮವೂ ಉಂಟಾಗುವುದಿಲ್ಲ, ಆದರೆ ಇಸ್ಲಾಮ್ ಯಾವ ಪರೋ ವಿಷಯ ಗಳನ್ನು ನಂಬಬೇಕೆಂದು ಕರೆ ನೀಡುತ್ತದೋ ಅವು ಹಾಗಲ್ಲ, ನಮ್ಮ ನೈತಿಕ ಮ ಕರ್ಮ ಜೀವನಗಳೊಂದಿಗೆ ಅದರ ಗಾಢ ಸಂಬಂಧವಿದೆ. ಅವು ಕೇವಲ ವೈಜ್ಞಾ ತಥ್ಯಗಳಲ್ಲ, ಬದಲಾಗಿ ಅವುಗಳ ಜ್ಞಾನ ಮತ್ತು ಅವುಗಳ ಮೇಲೆ ದೃಢ ವಿಶ್ವಾಸವು ನ ಗುಣ ನಡತೆಗಳ, ನಮ್ಮ ವೈಯಕ್ತಿಕ ಕರ್ಮಗಳ ಮತ್ತು ಸಾಮೂಹಿಕ ವ್ಯವಹಾರಗಳ ಮೇ ಗಾಢ ಪ್ರಭಾವ ಬೀರುತ್ತದೆ.

ಇಸ್ಲಾಮ್ ಯಾವ ವಿಷಯಗಳ ಮೇಲೆ ದೃಢವಾದ ನಂಬಿಕೆಯಿಡಲು ಕ ಕೊಡುತ್ತದೋ ಅವುಗಳಿಂದ ಮಾತ್ರ ಸಕಲ ಮಾನವರ ಜೀವನದ ಎಲ್ಲ ರಂಗಗಳಲ್ಲೂ ತ ಹಿಡಿತವನ್ನು ಸಾಧಿಸಲು ಸಾಧ್ಯ. ಓರ್ವ ಸರ್ವಶಕ್ತ, ಸರ್ವವೀಕ್ಷಕ, ಸರ್ವಶ್ರುತ ಹಾಗ ಮಹಾ ಕರುಣಾಳುವಾದ ದೇವನು ನಮ್ಮನ್ನು ಆಳುತ್ತಿದ್ದಾನೆ. ಅವನ ಅಸಂಖ್ಯಾತ ಸೈನಿಕ ಎಲ್ಲೆಡೆ ವ್ಯಾಪಿಸಿದ್ದಾರೆ. ಪ್ರವಾದಿಯನ್ನು ಅವನೇ ಕಳುಹಿಸಿದ್ದಾನೆ, ಅವರು ನಮ ನೀಡಿರುವ ಆಜ್ಞೆಗಳು ಅವರ ಸ್ವಯಂ ನಿರ್ಮಿತವಲ್ಲ, ಅವೆಲ್ಲವೂ ಸರ್ವಸಂಪೂರ್ಣವಾ

ದೇವನ ಕಡೆ ಯಿಂದಾಗಿವೆ, ನಮ್ಮ ಅನುಸರಣೆ ಅಥವಾ ಧಿಕ್ಕಾರದ ಉತ್ತಮ ಅಥವಾ ಕೆಟ್ಟ ಪರಿಣಾಮವನ್ನು ನಾವು ಖಂಡಿತ ನೋಡಲಿರುವೆವು ಎಂಬ ವಿಶ್ವಾಸದಲ್ಲಿ ಪ್ರಬಲ ಶಕ್ತಿಯಿದೆ. ಅದು ಇನ್ನಾವ ಮೂಲದಿಂದಲೂ ಪ್ರಾಪ್ತವಾಗದು. ಭೌತಿಕ ಶಕ್ತಿಗಳು ಶರೀರವನ್ನು ಎದಿರಿಸಬಹುದು. ಶಿಕ್ಷಣ-ತರಬೇತಿಗಳ ನೈತಿಕ ಪ್ರಭಾವವು ಮಾನವ ಸಮಾಜದ ಉನ್ನತ ವರ್ಗಗಳಿಗೆ ತಲುಪಬಹುದು. ಕಾನೂನಿನ ಆಟವು ಅದರ ಕಾರ್ಯಕರ್ತರು ತಲುಪುವಲ್ಲಿಗೆ ಮಾತ್ರ ನಡೆಯುತ್ತದೆ. ಆದರೆ ಈ ಶಕ್ತಿಯು ಆತ್ಮ ಮತ್ತು ಮನಸ್ಸಲ್ಲಿ ಪ್ರಭಾವ ಬೀರುತ್ತದೆ. ಗಣ್ಯರು-ಸಾಮಾನ್ಯರು, ಅಜ್ಞಾನಿ-ಸುಜ್ಞಾನಿಗಳು, ಬುದ್ಧಿಜೀವಿಗಳು-ಪಾಮರರು ಎಲ್ಲರನ್ನೂ ಅದು ತನ್ನ ಹಿಡಿತ ದಲ್ಲಿರಿಸುತ್ತದೆ. ಕಾಡಿನ ಏಕಾಂತತೆಯಲ್ಲೂ ರಾತ್ರಿಯ ಅಂಧಕಾರದಲ್ಲೂ ತನ್ನ ಕೆಲಸ ಮಾಡುತ್ತದೆ. ಅಪರಾಧ ಕೃತ್ಯದಿಂದ ತಡೆಯುವವರು, ನೋಡುವವರು ಯಾರೂ ಇಲ್ಲದಿರುವಾಗಲೂ ದೇವನು ಸದಾ ನಮ್ಮ ಜೊತೆಗಿದ್ದು ನೋಡುತ್ತಿದ್ದಾನೆಂಬ ವಿಶ್ವಾಸ, ಪ್ರವಾದಿಗಳ ಶಿಕ್ಷಣ ಸತ್ಯಪೂರ್ಣವಾದುದೆಂಬ ನಂಬಿಕೆ ಹಾಗೂ ಪರಲೋಕದ ವಿಚಾರಣೆಯ ಕುರಿತು ದೃಢ ವಿಶ್ವಾಸವು ಪೋಲಿಸನೂ ನ್ಯಾಯಾಧಿಪತಿಯೂ ಉಪನ್ಯಾಸಕನ ಬೋಧನೆಗಳೂ ಮಾಡದ ಕಾರ್ಯವನ್ನು ಮಾಡುತ್ತದೆ.

ಈ ನಂಬಿಕೆಯು, ಲೋಕದಲ್ಲಿ ಹರಡಿರುವ ವಿಭಿನ್ನ ಮತ್ತು ವ್ಯತ್ಯಸ್ತ ಸ್ವಭಾವದ ಜನರನ್ನು ಒಂದುಗೂಡಿಸಿ ಒಂದು ಜನಾಂಗವಾಗಿ ಮಾಡಿತು. ಅದರ ವಿಚಾರ, ಆಚಾರ ಮತ್ತು ಸ್ವಭಾವಗಳಲ್ಲಿ ಉತ್ತಮ ಮಟ್ಟದ ಭಾವೈಕ್ಯವನ್ನು ಸೃಷ್ಟಿಸಿತು. ಅವರೊಳಗೆ ಕಾಲ-ದೇಶಗಳ ಹೊರತಾಗಿಯೂ ಒಂದು ಸಂಸ್ಕೃತಿಯನ್ನು ಬೆಳೆಸಿತು ಮತ್ತು ಅವರಲ್ಲಿ ಒಂದು ಉನ್ನತ ಉದ್ದೇಶಕ್ಕಾಗಿ ಜೀವಾರ್ಪಣೆ ಮಾಡುವ ಸ್ಫೂರ್ತಿ ಹುಟ್ಟಿಸಿತು. ಇದರ ಉದಾಹರಣೆಯು ಹುಡುಕಿದರೂ ಸಿಗದು.

ಇಸ್ಲಾಮಿನ ಪಾರಿಭಾಷಿಕದಲ್ಲಿ ಈಮಾನ್ ಎಂದರೆ, ಅಲ್ಲಾಹ್, ದೇವಚರರು, ದೇವ ಗ್ರಂಥಗಳು, ಪ್ರವಾದಿಗಳು ಮತ್ತು ಪರಲೋಕಗಳ ಮೇಲೆ ವಿಶ್ವಾಸ ತಾಳುವುದಾಗಿದೆ. ಈ ಐದೂ ವಿಷಯಗಳು ವಿಂಗಡಿಸಲಾಗದ ಒಂದು ಏಕತೆಯಾಗಿದೆ. ಅಂದರೆ ಅವುಗಳ ಮಧ್ಯೆ ಎಂತಹ ಸಂಬಂಧವಿದೆಯೆಂದರೆ ಅವುಗಳ ಪೈಕಿ ಒಂದನ್ನಾದರೂ ನಿರಾಕರಿಸಿದರೆ ಆ ಇಡೀ ಏಕತೆಯನ್ನು ನಿರಾಕರಿಸಿದಂತಾಗುತ್ತದೆ. ಇಸ್ಲಾಮ್ ಸ್ಥಾಪಿಸ ಬಯಸುವ ಸಂಸ್ಕೃತಿಗೆ ಇದೇ ನಂಬಿಕೆಗಳ ಅಗತ್ಯವಿದೆ. ಇದು ಬೌದ್ಧಿಕ ಮತ್ತು ವೈಜ್ಞಾನಿಕ ಪ್ರಗತಿಗೆ ಅಡ್ಡಿಯೂ ಆಗುವುದಿಲ್ಲವೆಂಬುದು ಈ ವರೆಗಿನ ಚರ್ಚೆಯಿಂದ ವ್ಯಕ್ತವಾಯಿತು.

## ಇಸ್ಲಾಮಿನಲ್ಲಿ ಈಮಾನಿನ ಸ್ಥಾನ

ಕುರ್‌ಆನಿನ ಕರೆಯ ಮೂಲ ಬಿಂದು ಯಾವುದೆಂಬ ಪ್ರಶ್ನೆಗೆ 'ಈಮಾನ್' ಎಂಬ ಒಂದೇ ಉತ್ತರ ನೀಡಬಹುದು. ಕುರ್‌ಆನಿನ ಅವತರಣ ಮತ್ತು ಪ್ರವಾದಿ ಮುಹಮ್ಮದ್(ಸ)

ಅವರ ನೇಮಕದ ಉದ್ದೇಶವೇ ಈಮಾನಿನತ್ತ ಕರೆಯ ನೀಡುವುದಾಗಿದೆ. ಕುರ್‌ಆನ್ ತನ ಸಂದೇಶವಾಹಕನನ್ನು ಈಮಾನಿನ ಕರೆ ಕೊಡುವವನೆಂದು ಸ್ಪಷ್ಟವಾಗಿ ತಿಳಿಸುತ್ತದೆ. **"ಓ ನಮ ಪ್ರಭೂ, ನಾವು ಸತ್ಯವಿಶ್ವಾಸದ ಕಡೆಗೆ ಆಹ್ವಾನಿಸುತ್ತಿದ್ದ ಮತ್ತು ನಿಮ್ಮ ಪ್ರಭುವನ್ನು ನಂಬಿರೆಂದು ಹೇಳುತ್ತಿದ್ದ ಓರ್ವ ಕರೆ ಕೊಡುವಾತನನ್ನು ಆಲಿಸಿದೆವು." (ಪವಿತ್ರ ಕುರ್‌ಆನ್, 3:193** ಅದು ಸ್ವಯಂ ತನ್ನ ಕುರಿತು ಪರೋಕ್ಷದ ಮೇಲೆ ವಿಶ್ವಾಸವಿರಿಸುವವರಿಗೆ ಮಾತ್ರ ಸನ್ಮಾರ್ಗ ತೋರಿಸುತ್ತದೆಂದು ಹೇಳುತ್ತದೆ ಅಂದರೆ ಇದೇ ವಿಶ್ವಾಸಗಳು. **"ಪರೋಕ್ಷದ ಮೇಲೆ ವಿಶ್ವಾಸವಿರಿಸುವ ಭಯಭಕ್ತಿಯುಳ್ಳವರಿಗೆ ಇದು ಮಾರ್ಗದರ್ಶಿ.(ಪವಿತ್ರ ಕುರ್‌ಆನ್, 2:2-3**

ಅದು ಉಪದೇಶ, ಬೋಧನೆ, ಎಚ್ಚರಿಕೆ, ಆಧಾರ ಪ್ರಮಾಣಗಳು ಮತ್ತು ಕತೆಗಳ ಮೂಲಕ ಅದರ ಕಡೆಗೇ ಕರೆ ನೀಡುತ್ತದೆ. ಈಮಾನ್ (ವಿಶ್ವಾಸ) ಸ್ವೀಕರಿಸಬೇಕೆಂದು ಮಾನವನಿಗೆ ಅದು ಹೇಳುತ್ತದೆ. ಅದರ ನಂತರವೇ ಆತ್ಮಸಂಸ್ಕರಣೆ, ನೈತಿಕ ಸುಧಾರಣೆ ಮತ್ತು ಕಾನೂನು ನಿರ್ಮಾಣದ ಕಡೆಗೆ ಅದು ಹೆಜ್ಜೆ ಇರಿಸುತ್ತದೆ. ಅದರ ದೃಷ್ಟಿಯಲ್ಲಿ ಈಮಾನ್ ಮಾತ್ರ ಸತ್ಯ, ಸನ್ಮಾರ್ಗ, ಜ್ಞಾನ ಮತ್ತು ಪ್ರಕಾಶವಾಗಿದೆ. ಅದಕ್ಕೆ ಹೊರತಾದುದು ಅಂದರೆ ಕುಫ್ರ್ ಎಂಬುದು ಅಜ್ಞಾನ, ಅಕ್ರಮ, ಅಸತ್ಯ, ಅಂಧಕಾರ ಮತ್ತು ಪಥಭ್ರಷ್ಟತೆಯಾಗಿದೆ.

ಪವಿತ್ರ ಕುರ್‌ಆನ್ ಸ್ಪಷ್ಟವಾದ ರೇಖೆಯೊಂದನ್ನೆಳೆದು ಎಲ್ಲ ಮಾನವರನ್ನು ಎರಡು ವರ್ಗಗಳಾಗಿ ವಿಂಗಡಿಸಿದೆ. ಒಂದು, ವಿಶ್ವಾಸ ತಾಳುವವರದ್ದು, ಇನ್ನೊಂದು ನಿರಾಕರಿಸುವವರದ್ದು. ಒಂದನೆಯ ವರ್ಗವು ಅದರ ದೃಷ್ಟಿಯಲ್ಲಿ ಸತ್ಯದಲ್ಲಿದೆ. ಜ್ಞಾನ ಮತ್ತು ಪ್ರಕಾಶವನ್ನು ಹೊಂದಿದೆ. ಅದಕ್ಕೆ ಸನ್ಮಾರ್ಗ ಮತ್ತು ನಿಷ್ಠೆಯ ಹಾಗೂ ಕೆಡುಕ ಮುಕ್ತದ್ವಾರ ತೆರೆದಿದೆ. ಅವರೇ ಯಶಸ್ವಿಯಾಗುವವರು. ಇನ್ನೊಂದು ವರ್ಗವು ಅದರ ದೃಷ್ಟಿಯಲ್ಲಿ ನಿರಾಕರಿಸುವವರು (ಕಾಫಿರ್), ಅಕ್ರಮಿಗಳು, ಅಜ್ಞಾನಿಗಳು ಮತ್ತು ಅಂಧಕಾರದಲ್ಲಿ ಸಿಲುಕಿರುವವರಾಗಿದ್ದಾರೆ. ಸನ್ಮಾರ್ಗವು ಅವರ ಮಟ್ಟಿಗೆ ಮುಚ್ಚಲ್ಪಟ್ಟಿದೆ. ನಿಷ್ಠೆ ಮತ್ತು ಕೆಡುಕಿನಿಂದ ಮುಕ್ತಿ ಅದಕ್ಕಿಲ್ಲ, ಅವರು ನಷ್ಟ ಹೊಂದುವವರಾಗಿದ್ದಾರೆ. ಈ ಎರಡು ವರ್ಗಗಳಲ್ಲಿ ಒಂದನ್ನು ಕುರುಡ, ಕಿವುಡನಿಗೆ ಹಾಗೂ ಇನ್ನೊಂದನ್ನು ನೋಡುವವ ಮತ್ತು ಕೇಳುವವನಿಗೆ ಹೋಲಿಸುತ್ತದೆ. **(ಪವಿತ್ರ ಕುರ್‌ಆನ್, 11:24)** ಈಮಾನಿನ ಮಾರ್ಗ ಮಾತ್ರ ಸನ್ಮಾರ್ಗವೆಂದು ಅದು ಹೇಳುತ್ತದೆ.**(ಪವಿತ್ರ ಕುರ್‌ಆನ್,42:52)** ಅದರ ಹೊರತು ಬೇರೇ ಮಾರ್ಗಗಳನ್ನು ತೊರೆಯ ಬೇಕೆಂದು ಅದು ಹೇಳುತ್ತದೆ.**(ಪವಿತ್ರ ಕುರ್‌ಆನ್,6:153** ಅಲ್ಲಾಹನನ್ನೂ ಅವನ ಸಂದೇಶ ವಾಹಕರನ್ನೂ ಅವನ ಗ್ರಂಥವನ್ನೂ ನಂಬುವವರ ಬಳಿ ಒಂದು ಬೆಳಗುತ್ತಿರುವ ದೀಪವಿದ್ದು ಅದರ ಸಹಾಯದಿಂದ ಆತ ನೇರ ಮಾರ್ಗದಲ್ಲಿ ನಡೆಯಬಲ್ಲನೆಂದೂ ಅವನು ದಾರಿತಪ್ಪುವ ಆಶಂಕೆಯಿಲ್ಲವೆಂದೂ ಅದು ಸ್ಪಷ್ಟವಾಗಿ ಸಾರುತ್ತದೆ. ಅದರಿಂದ ಅವನು ದುರ್ಮಾರ್ಗಗಳನ್ನು ಗುರುತಿಸಬಲ್ಲನು. ಅವನು ಸಕ್ಷೇವ

ಯಶಸ್ಸಿನ ಗುರಿ ತಲುಪುವವನು. ಈ ದೀಪವಿಲ್ಲದವನ ಬಳಿ ಬೆಳಕೇ ಇಲ್ಲ, ಅವನು ಅಂಧಕಾರದಲ್ಲಿ ಅಲೆದಾಡುತ್ತಿರುವವನು. ನೇರ ಮಾರ್ಗ ಯಾವುದೆಂದು ಗುರುತಿಸಲು ಅವನಿಂದ ಸಾಧ್ಯವಿಲ್ಲ, ಅವನಿಗೆ ಸೋಲೇ ಗತಿ. **(ಪವಿತ್ರ ಕುರ್‌ಆನ್, 2:256-257)**

## ಕರ್ಮಕ್ಕಿಂತ ಮೊದಲು ಈಮಾನ್

ಈಮಾನ್ ಮತ್ತು ಕುಫ್ರ್‌ನ ನಡುವಿನ ಮೂಲಭೂತ ವ್ಯತ್ಯಾಸದಿಂದಾಗಿ ಮಾನವರ ಕರ್ಮಗಳ ಮೇಲೆಯೂ ವ್ಯತ್ಯಾಸವುಂಟಾಗುತ್ತದೆ. ಕುರ್‌ಆನಿನ ದೃಷ್ಟಿಯಲ್ಲಿ ಈಮಾನ್ (ವಿಶ್ವಾಸ) ಸ್ವೀಕರಿಸಿದವನು ಮಾತ್ರ ಸಜ್ಜನ ಮತ್ತು ಸತ್ಕರ್ಮಿಯಾಗಬಲ್ಲನು. ಈಮಾನ್‌ನ ಹೊರತು ಯಾವ ಕರ್ಮವೂ ಸತ್ಕರ್ಮವೆನಿಸಲಾರದು. ಲೋಕದ ದೃಷ್ಟಿಯಲ್ಲಿ ಅದೆಷ್ಟು ಉತ್ತಮ ಕರ್ಮವಾದರೂ ಸರಿ. **(ಪವಿತ್ರ ಕುರ್‌ಆನ್, 2:2-4)**

ಕುರ್‌ಆನಿನ ನೈತಿಕ ಆದೇಶಗಳು ಮತ್ತು ಕಾನೂನು ಪರ ಆಜ್ಞೆಗಳೆಲ್ಲವೂ ಮುಸ್ಲಿಮರನ್ನು ಉದ್ದೇಶಿಸಿ ನೀಡಲಾಗಿದೆ. ಅಂತಹ ಸೂಕ್ತಗಳು 'ಓ ಸತ್ಯವಿಶ್ವಾಸಿಗಳೇ' ಎಂದು ಆರಂಭಗೊಳ್ಳುತ್ತದೆ. ಇದಕ್ಕೆ ವ್ಯತಿರಿಕ್ತವಾಗಿ ಸತ್ಯನಿಷೇಧಿಗಳಿಗೆ ಈಮಾನಿನ ಕರೆ ಕೊಡಲಾಗಿದೆಯೇ ಹೊರತು ಸತ್ಕರ್ಮಗಳದ್ದಲ್ಲ, ಅವಿಶ್ವಾಸಿಯಾದವರ ಕರ್ಮಗಳಿಗೆ ಯಾವುದೇ ಬೆಲೆಯಿಲ್ಲವೆಂದು ಸಾರಲಾಗಿದೆ. ಅವರು ಏನಾದರೂ ಸತ್ಕರ್ಮ ಮಾಡಿದರೂ ಅವು ಸ್ವೀಕೃತವಾಗದು. **(ಪವಿತ್ರ ಕುರ್‌ಆನ್, 18:103-106)** ಸತ್ಯನಿಷೇಧಿಯು ಬಾಹ್ಯನೋಟಕ್ಕೆ ಸತ್ಕರ್ಮ ಮಾಡಿದರೂ ಅವನ ಕರ್ಮವು ವಿಶ್ವಾಸಿಯ ಕರ್ಮಕ್ಕೆ ಸಮಾನವಾಗದು. **(ಪವಿತ್ರ ಕುರ್‌ಆನ್, 9:19-20)** ಇದರಿಂದ ಮೂರು ವಿಷಯಗಳು ಸಂದೇಹಾತೀತವಾಗಿ ಸಾಬೀತುಗೊಳ್ಳುತ್ತದೆ.

1) ಈಮಾನ್, ಇಸ್ಲಾಮೀ ವ್ಯವಸ್ಥೆಯ ಅಸ್ತಿವಾರವಾಗಿದೆ. ಅದರ ಮೇಲೆಯೇ ಆ ವ್ಯವಸ್ಥೆಯ ಕಟ್ಟಡ ನಿರ್ಮಿಸಲಾಗಿದೆ. ಕುಫ್ರ್ ಮತ್ತು ಇಸ್ಲಾಮ್‌ನ ವ್ಯತ್ಯಾಸವು ಈಮಾನ್ (ವಿಶ್ವಾಸ) ಮತ್ತು ಕುಫ್ರ್(ಅವಿಶ್ವಾಸದ) ಮೂಲಭೂತ ವ್ಯತ್ಯಾಸವನ್ನು ಅವಲಂಬಿಸಿದೆ.

2) ಮಾನವನೊಡನೆ ಇಸ್ಲಾಮ್ ಪ್ರಪ್ರಥಮವಾಗಿ ವಿಶ್ವಾಸ ತಾಳಬೇಕೆಂದು ಹೇಳುತ್ತದೆ. ಅದನ್ನು ಸ್ವೀಕರಿಸಿದವನು ಇಸ್ಲಾಮಿನ ವೃತ್ತದೊಳಗೆ ಪ್ರವೇಶಿಸುವನು. ಎಲ್ಲ ನೈತಿಕ ಮತ್ತು ನಾಗರಿಕ ನಿಯಮ ಅವನಿಗೇ ಆಗಿರುತ್ತವೆ. ಇಸ್ಲಾಮಿನ ಬೇಡಿಕೆಯನ್ನು ತಿರಸ್ಕರಿಸಿದವನು ಇಸ್ಲಾಮಿನ ವೃತ್ತದಿಂದ ಹೊರಗಿರುವನು. ಅವನಿಗೆ ನೈತಿಕ ನಿಯಮಗಳಾಗಲಿ, ನಾಗರಿಕ ಕಾನೂನುಗಳಾಗಲಿ ಬಾಧಕವಲ್ಲ.

3) ಇಸ್ಲಾಮಿನ ದೃಷ್ಟಿಯಲ್ಲಿ ಕರ್ಮದ ಮೂಲ ಬೇರು ಈಮಾನ್ ಮಾತ್ರವಾಗಿದೆ. ಅದರ ಆಧಾರದಲ್ಲಿರುವ ಕರ್ಮಗಳು ಮಾತ್ರ ಮೌಲ್ಯ ಮತ್ತು ತೂಕ ಹೊಂದಿರುತ್ತದೆ. ಈ ಮೂಲ ಬೇರು ಇಲ್ಲದೇ ಇದ್ದಲ್ಲಿ ಎಲ್ಲ ಕರ್ಮಗಳೂ ಮೌಲ್ಯರಹಿತವಾಗಿರುತ್ತದೆ.

ಮಾನವನಿಗೆ ಸರಿಯಾದ ಜ್ಞಾನವಿದ್ದರೆ ಅವನ ಕರ್ಮಗಳು ಸರಿಯಾದ ದಿಕ್ಕಿಗೆ ಚಲಿಸುತ್ತವೆ. ಅವನ ನೀತಿ-ನಡವಳಿಕೆಯನ್ನು ಉತ್ತಮವಾಗಿ ರೂಪಿಸಬಹುದು. ಆದ್ದರಿಂದ ಮನುಷ್ಯನ ತರಬೇತಿಗೆ ಮುಂಚೆ ಅವನಿಗೆ ಜ್ಞಾನ ದೊರಕಬೇಕಾದುದು ಅಗತ್ಯ. ಈ ಜ್ಞಾನವೆಂದರೇನು? ಒಂದು ಜ್ಞಾನ ನಾವು ಶಾಲೆ ಕಾಲೇಜುಗಳಲ್ಲಿ ಕಲಿಯುವ ವಿದ್ಯೆ. ಇನ್ನೊಂದು ಪೂರ್ಣ ಜ್ಞಾನ. ಇದನ್ನು ಕುರ್‌ಆನ್ 'ಅಲ್-ಇಲ್ಮ್' ಎಂದು ಕರೆದಿದೆ. ನಮ್ಮ ವ್ಯವಹಾರ ನಡವಳಿಕೆಗಳೊಂದಿಗೆ ಈ ಜ್ಞಾನಕ್ಕೆ ಯಾವುದೇ ಸಂಬಂಧವಿಲ್ಲ. ಅದರ ಸಂಬಂಧವು 'ನಮ್ಮೊಂದಿಗೆ' ಇದೆ. ಅದು ನಮ್ಮ ಮುಂದೆ ಅನೇಕ ಪ್ರಶ್ನೆಗಳನ್ನು ಇಡುತ್ತದೆ. ನಾವು ಏನು ಮಾಡಬೇಕು, ಈ ಲೋಕದಲ್ಲಿ ನಮ್ಮ ನೆಲೆಯೇನು, ನಮ್ಮನ್ನೂ ಈ ಲೋಕವನ್ನೂ ಯಾರು ಸೃಷ್ಟಿಸಿದರು. ನಮ್ಮ ಜೀವನಕ್ಕೆ ಬೇಕಾದ ಸರಿಯಾದ ಮಾರ್ಗ ಯಾವುದು, ಅದನ್ನು ಗಳಿಸುವುದು ಹೇಗೆ, ನಮ್ಮ ಜೀವನ ಯಾತ್ರೆಯ ಕೊನೆಯ ಗುರಿಯೇನು? ಇತ್ಯಾದಿ.

ಪ್ರಸ್ತುತ ಎರಡು ಬಗೆಯ ಜ್ಞಾನಗಳ ಪೈಕಿ ಈ ಎರಡನೆಯ ಜ್ಞಾನವೇ ಮೂಲಭೂತವಾಗಿದೆ. ನಮ್ಮ ಎಲ್ಲ ಆಂಶಿಕ ಜ್ಞಾನಗಳು ಈ ಮೂಲಭೂತ ಜ್ಞಾನದ ಶಾಖೆಗಳಾಗಿವೆ. ಈ ಜ್ಞಾನವು ಸರಿಯೋ ತಪ್ಪೋ ಆದರೆ ನಮ್ಮ ವಿಚಾರ ಮತ್ತು ವ್ಯವಹಾರಗಳೂ ಸರಿಯೋ ತಪ್ಪೋ ಆಗುತ್ತದೆ. ಮಾನವನ ತರಬೇತಿ ಮತ್ತು ಸಂಸ್ಕರಣೆಗೆ ಯಾವ ವ್ಯವಸ್ಥೆಯನ್ನು ರೂಪಿಸಲಾಗುವುದೋ ಅದು ಇದೇ ಮೂಲಭೂತ ಜ್ಞಾನ ಆಧಾರಿತವಾಗಿದೆ.

ಕುರ್‌ಆನಿನಲ್ಲಿ ಮುಂದಿಡಲಾಗಿರುವ ಅಲ್ಲಾಹ್, ದೇವಚರರು, ದಿವ್ಯ ಗ್ರಂಥಗಳು, ಪ್ರವಾದಿಗಳು ಮತ್ತು ಪರಲೋಕದ ನಂಬಿಕೆಗಳು ಇದೇ ಪೂರ್ಣ ಜ್ಞಾನಕ್ಕೆ ಸಂಬಂಧಿಸಿವೆ. ಇಸ್ಲಾಮಿನ ಸಂಸ್ಕರಣೆ ಮತ್ತು ತರಬೇತಿ ವ್ಯವಸ್ಥೆ ಇದೇ ಜ್ಞಾನ ಆಧಾರಿತವಾಗಿರುವುದರಿಂದ ಅವುಗಳ ಮೇಲೆ ವಿಶ್ವಾಸವಿರಿಸಬೇಕೆಂದು ಒತ್ತುಕೊಟ್ಟು ಹೇಳಲಾಗಿದೆ. ಇದಕ್ಕೆ ಹೊರತಾದ ಎಲ್ಲ ಮಾರ್ಗಗಳೂ ತಪ್ಪಾಗಿವೆ. ಅವುಗಳ ಆಧಾರದಲ್ಲಿ ಕಟ್ಟಲಾದ ತರಬೇತಿ-ಸಂಸ್ಕರಣೆಯ ವ್ಯವಸ್ಥೆಯು ತಪ್ಪಾಗಿವೆ. ಅವುಗಳು ಮಾನವನನ್ನು ತಪ್ಪು ದಾರಿಗಳಲ್ಲಿ ನಡೆಸುತ್ತವೆ. ಅದು ಅವನನ್ನು ಗುರಿ ಮುಟ್ಟಿಸಲಾರದು. ಆತ ಯಶಸ್ವಿಯಾಗಲಾರ. ಆದ್ದರಿಂದಲೇ ಇಸ್ಲಾಮ್ ತನ್ನ ಮಾರ್ಗವನ್ನು ಮಾತ್ರ 'ಅಸ್ಸಿರಾತುಲ್ ಮುಸ್ತಕೀಮ್' ಅಥವಾ ಸನ್ಮಾರ್ಗವೆಂದು ಸಾರಿದೆ. ಜ್ಞಾನದ ಹೊರತಾದ ಅಥವಾ ತಪ್ಪು ಜ್ಞಾನದಿಂದ ಅನುಸರಿಸಲಾದ ಎಲ್ಲ ಮಾರ್ಗಗಳನ್ನು ತೊರೆಯುವಂತೆ ಕರೆ ನೀಡಿದೆ. **(ಪವಿತ್ರ ಕುರ್‌ಆನ್, 6:153)** ಈಮಾನ್ ಸರಿಯಿಲ್ಲದವರ ಎಲ್ಲ ಕರ್ಮಗಳು ವ್ಯರ್ಥವಾಗಿದ್ದು ಕಟ್ಟಕಡೆಗೆ ಅವನು ಸೋಲುಣ್ಣುವನು ಎಂದೂ ಇಸ್ಲಾಮ್ ತಿಳಿಸುತ್ತದೆ. **(ಪವಿತ್ರ ಕುರ್‌ಆನ್, 5:5)**

ಇಸ್ಲಾಮ್ ಮೊತ್ತಮೊದಲು ಮಾನವನ ಆತ್ಮ ಮತ್ತು ವಿಚಾರ ಶಕ್ತಿಯನ್ನು ಪ್ರಬಲ ಆಧಾರದ ಮೇಲೆ ಕಟ್ಟುತ್ತದೆ. ಅದರ ನಂತರ ಕಟ್ಟುವ ಕಟ್ಟಡವು ಯಾರೇ ಅಲುಗಾಡಿಸಿದರೂ ಕದಲದು. ಅದು ಮೊತ್ತ ಮೊದಲು ಮಾನವನಿಗೆ ಹೀಗೆ ಹೇಳುತ್ತದೆ: ನಿನ್ನ ಮೇಲೊಬ್ಬ ದೇವನಿದ್ದಾನೆ. ಅವನು ಇಹ-ಪರ ಎರಡೂ ಲೋಕಗಳ ಪ್ರಭುವಾಗಿದ್ದಾನೆ. ಅವನ ಸಾಮ್ರಾಜ್ಯ ದಿಂದ ಹೊರ ಹೋಗಲು ನಿನ್ನಿಂದಸಾಧ್ಯವಿಲ್ಲ. ಅವನು ನಿನ್ನ ಎಲ್ಲ ರಹಸ್ಯಗಳನ್ನೂ ಬಲ್ಲವನಾಗಿದ್ದಾನೆ. ಅವನು ನಿನ್ನ ಮಾರ್ಗದರ್ಶನಕ್ಕಾಗಿ ಪ್ರವಾದಿಗಳನ್ನು ಕಳಿಸಿದನು. ಅವರ ಮೂಲಕ ಗ್ರಂಥ ಮತ್ತು ಶರೀಅತ್(ಧರ್ಮಶಾಸ್ತ್ರ) ಕಳಿಸಿದನು. ಅದನ್ನು ಅನುಸರಿಸಿ ನಡೆದರೆ ಆ ಪ್ರಭುವಿನ ಸಂಪ್ರೀತಿಯನ್ನು ಗಳಿಸಬಲ್ಲೆ. ಅದಕ್ಕೆ ವ್ಯತಿರಿಕ್ತವಾಗಿ ನಡೆದರೆ ಅವನು ನಿನ್ನನ್ನು ಖಂಡಿತ ಹಿಡಿಯುವನು. ನಿನ್ನ ಕರ್ಮವು ಎಷ್ಟೇ ರಹಸ್ಯವಾಗಿದ್ದರೂ ಸರಿ.

ಈ ವಿಷಯವನ್ನು ಮಾನವನ ಮನಸ್ಸಿನಲ್ಲಿ ಅಚ್ಚೊತ್ತಿದ ಬಳಿಕ ಅದು ಉತ್ತಮ ಚಾರಿತ್ರ್ಯವನ್ನು ಕಲಿಸುತ್ತದೆ. ವಿಧಿ-ನಿಷೇಧಗಳ ಆಜ್ಞೆಗಳನ್ನು ನೀಡುತ್ತದೆ. ಅದರ ಬಲದಿಂದಲೇ ತನ್ನ ಆಜ್ಞೆಯನ್ನು ಪಾಲಿಸುವಂತೆ ಮಾಡುತ್ತದೆ. ಈಮಾನ್ ಮನಸ್ಸಿನಲ್ಲಿ ಎಷ್ಟು ಆಳವಾಗಿ ಬೇರೂರುವುದೋ ಅವನ ಅನುಸರಣೆಯೂ ಅಷ್ಟೇ ಪ್ರಬಲವಾಗಿರುವುದು. ತರಬೇತಿ ಮತ್ತು ಸಂಸ್ಕರಣೆಯ ವ್ಯವಸ್ಥೆಯೂ ಅಷ್ಟೇ ಬಲಿಷ್ಠವಾಗಿರುವುದು. ಒಂದು ವೇಳೆ ಈಮಾನ್ ದುರ್ಬಲವಾಗಿದ್ದರೆ ಅಥವಾ ಅದು ಮನಸ್ಸಿನಲ್ಲಿ ಇಲ್ಲದೇ ಹೋದರೆ ಅದರ ಹೊರತಾದ ಬೇರಾವುದೇ ವಿಶ್ವಾಸ ಮನೆ ಮಾಡಿಕೊಂಡಿದ್ದರೆ ನೈತಿಕತೆಯು ಕೇವಲ ನೀರಿನ ಮೇಲಿನ ಬರಹದಂತಾಗುವುದು, ವಿಧಿನಿಷೇಧಗಳ ಆಜ್ಞೆಗಳಿಗೆ ತೂಕವೇ ಇಲ್ಲವಾಗುವುದು. ತರಬೇತಿ ಮತ್ತು ಸಂಸ್ಕರಣೆಯ ಎಲ್ಲ ವ್ಯವಸ್ಥೆಗಳೂ ಕೇವಲ ಮಕ್ಕಳಾಟಿಕೆಯಂತಾಗುವುದು. ಅದು ಸ್ಥಿರವಾಗಿ ನಿಲ್ಲಲಾರದು. ಅದು ಒಂದು ವೇಳೆ ನೋಡಲು ಸುಂದರ, ವಿಶಾಲ ಹಾಗೂ ಉನ್ನತವಾಗಿರಬಹುದು. ಆದರೆ ಅದು ಭದ್ರವಾಗಿರಲಾರದು. ಇದನ್ನು ಪವಿತ್ರ ಕುರ್‌ಆನ್ ಒಂದು ಉದಾಹರಣೆಯ ಮೂಲಕ ಪ್ರಸ್ತುತಪಡಿಸುತ್ತದೆ. ಅಂದರೆ ಸತ್ಯವಚನ ಮತ್ತು ಮಿಥ್ಯ ವಚನದ ಉದಾಹರಣೆ.

**''ಅಲ್ಲಾಹನು 'ಪವಿತ್ರ ವಚನ'ವನ್ನು ಯಾವುದಕ್ಕೆ ಹೋಲಿಸಿರುತ್ತಾನೆಂದು ನೀವು ನೋಡುತ್ತಿಲ್ಲವೇ? ಅದರ ಉಪಮೆ ಹೀಗಿದೆ:- ಒಂದು ಉತ್ತಮ ಜಾತಿಯ ಮರ. ಅದರ ಬೇರುಗಳು ನೆಲದೊಳಗೆ ಆಳಕ್ಕೆ ಸ್ಥಿರವಾಗಿ ನಾಟಿವೆ. ಗೆಲ್ಲುಗಳು ಆಕಾಶಕ್ಕೆ ಮುಟ್ಟಿವೆ. ಅದು ಸದಾಕಾಲವೂ ತನ್ನ ಪ್ರಭುವಿನ ಅನುಜ್ಞೆಯಿಂದ ತನ್ನ ಫಲಗಳನ್ನು ಕೊಡುತ್ತಿದೆ. ಜನರು ಇವುಗಳಿಂದ ಪಾಠ ಕಲಿಯಲೆಂದು ಅಲ್ಲಾಹ್ ಈ ಉದಾಹರಣೆಗಳನ್ನು ಕೊಡುತ್ತಾನೆ. 'ಪೈಶಾಚಿಕ ವಚನ'ದ ಉಪಮೆ - ಒಂದು ಕೆಟ್ಟ ಜಾತಿಯ ಮರದಂತಿದೆ. ಅದು ಭೂಮಿಯ ಮೇಲ್ಭಾಗದಿಂದ ಕಿತ್ತೆಸೆಯಲ್ಪಡುತ್ತದೆ. ಅದಕ್ಕೆ ಸ್ಥಿರತೆಯೆಂಬುದೇ ಇಲ್ಲ. ಅಲ್ಲಾಹ್**

ಸತ್ಯವಿಶ್ವಾಸಿಗಳಿಗೆ ಒಂದು ಸ್ಥಿರ ವಚನದ ಆಧಾರದಲ್ಲಿ ಇಹಪರಗಳೆರಡರಲ್ಲೂ ಭದ್ರತೆ ದಯಪಾಲಿಸುತ್ತಾನೆ ಮತ್ತು ಅಕ್ರಮಿಗಳನ್ನು ಅಲ್ಲಾಹನು ದಾರಿಗೆಡಿಸುತ್ತಾನೆ. ತನಗಿಷ್ಟಬಂದಂತೆ ಮಾಡುವ ಅಧಿಕಾರ ಅಲ್ಲಾಹನಿಗಿದೆ.'' (ಪವಿತ್ರ ಕುರ್‌ಆನ್, 14:24-27)

ಇನ್ನು ಇಸ್ಲಾಮಿನ ಈ ಮೂಲಭೂತ ನಂಬಿಕೆಗಳ ಔಚಿತ್ಯವೇನು, ಅದು ಮಾನವನ ವೈಚಾರಿಕ ಶಕ್ತಿಯ ಮೇಲೆ ಯಾವ ಪ್ರಭಾವ ಬೀರುತ್ತದೆ, ಅದು ಮನಸ್ಸಿನಲ್ಲಿ ನಾಟಿ ಬಿಟ್ಟರೆ, ಆದರಿಂದ ಎಂತಹ ಉತ್ತಮ ಮತ್ತು ಸುಭದ್ರ ನೀತಿ-ಚಾರಿತ್ರ್ಯ ನಿರ್ಮಾಣಗೊಳ್ಳುತ್ತದೆಂಬುದನ್ನು ನೋಡೋಣ.

# ಅಲ್ಲಾಹನ ಮೇಲೆ ವಿಶ್ವಾಸ

ಇಸ್ಲಾಮಿನ ಎಲ್ಲ ವಿಶ್ವಾಸ-ಕರ್ಮಗಳ ಮೂಲಾಧಾರ ಅಲ್ಲಾಹನ ಮೇಲಿನ ವಿಶ್ವಾಸವಾಗಿದೆ. ಉಳಿದಂತೆ ಎಷ್ಟೆಲ್ಲ ನಂಬಿಕೆಗಳಿವೆಯೋ ಅವೆಲ್ಲ ಈ ಮೂಲಾಧಾರದ ಶಾಖೆಗಳಾಗಿವೆ. ಎಷ್ಟೆಲ್ಲ ನೈತಿಕ ಆದೇಶಗಳು ಮತ್ತು ನಾಗರಿಕ ಕಾನೂನುಗಳಿವೆಯೋ ಅವೆಲ್ಲವೂ ಅದರಿಂದ ಶಕ್ತಿ ಪಡೆಯುತ್ತವೆ. ಇಲ್ಲಿರುವುದೆಲ್ಲದರ ಕೇಂದ್ರ ಬಿಂದು ಅಲ್ಲಾಹನಾಗಿದ್ದಾನೆ. ದೇವಚರರು ದೇವನ ದೂತರಾಗಿರುವುದರಿಂದ ಮತ್ತು ಪರಲೋಕದ (ಅಂತ್ಯದಿನ) ದಿನವು ದೇವನ ನ್ಯಾಯ ನೀಡುವ ದಿನವಾಗಿರುವುದರಿಂದ ನಾವು ಅವೆಲ್ಲವುಗಳನ್ನು ನಂಬುತ್ತೇವೆ. ಅದೇ ರೀತಿ ಕಡ್ಡಾಯ ಕರ್ಮಗಳನ್ನು ಅವನು ನಿಶ್ಚಯಿಸಿದ್ದಾನೆ, ಹಕ್ಕುಗಳು ದೇವನ ಆದೇಶ ಗಳಿಂದಾಗಿವೆ. ವಿಧಿ-ನಿಷೇಧಗಳು ದೇವನ ವತಿಯಿಂದಾಗಿವೆ. ಆದ್ದರಿಂದ ನಾವು ಅವುಗಳನ್ನು ಪಾಲಿಸುತ್ತೇವೆ. ಒಟ್ಟಿನಲ್ಲಿ ಇಸ್ಲಾಮಿನಲ್ಲಿರುವ ಪ್ರತಿಯೊಂದು ವಿಷಯದ ಮೂಲವು ಅಲ್ಲಾಹನ ಮೇಲಿನ ವಿಶ್ವಾಸದಲ್ಲಿ ನಿಂತಿದೆ. ಅದು ವಿಶ್ವಾಸಕ್ಕೆ ಸಂಬಂಧಿಸಿದ್ದಾಗಿರಬಹುದು, ಕರ್ಮಗಳಿಗೆ ಸಂಬಂಧಿದ್ದಾಗಿರಬಹುದು. ಆ ಒಂದು ಮೂಲಾಧಾರ(ಅಲ್ಲಾಹನ ಮೇಲಿನ ವಿಶ್ವಾಸ)ವನ್ನು ಪ್ರತ್ಯೇಕಿಸಿ ನೋಡಿರಿ. ಅನಂತರ ದೇವಚರರಾಗಲಿ, ಪರಲೋಕದ ದಿನವಾಗಲಿ ಏನೂ ಇಲ್ಲ, ಪ್ರವಾದಿ ಯಾಗಲಿ, ಗ್ರಂಥವಾಗಲಿ ಅನುಸರಣೆಗೆ ಅರ್ಹರಾಗಿ ಉಳಿಯುವುದಿಲ್ಲ. ಅಷ್ಟೇ ಅಲ್ಲ, ಕಡ್ಡಾಯ ಕರ್ತವ್ಯಗಳು, ಹಕ್ಕು-ಬಾಧ್ಯತೆಗಳು, ವಿಧಿ-ನಿಷೇಧಗಳು ಹಾಗೂ ಕಾನೂನು ಕಟ್ಟಳೆಗಳು ಯಾವುದೂ ಉಳಿಯುವುದಿಲ್ಲ. ಈ ಒಂದು ಕೇಂದ್ರ ಬಿಂದು ಸರಿಯುವುದರಿಂದ ಇಸ್ಲಾಮಿನ ಸಂಪೂರ್ಣ ಸೌಧವೇ ಕುಸಿದು ಬೀಳುವುದು. ಇಸ್ಲಾಮಿನ ಅಸ್ತಿತ್ವವೇ ಇರುವುದಿಲ್ಲ.

**ವಿವರಣೆ:**

ಇಸ್ಲಾಮಿನ ಆಚಾರ-ವಿಚಾರಗಳ ಕೇಂದ್ರ ಶಕ್ತಿಯಾಗಿರುವ ಈ ಮೂಲಭೂತ ವಿಶ್ವಾಸವು ಕೇವಲ 'ಅಲ್ಲಾಹನಿದ್ದಾನೆ' ಎಂಬುದಕ್ಕೆ ಸೀಮಿತವಾಗಿಲ್ಲ. ಹಾಗೆಂದು ಎಲ್ಲ ಮತ ಧರ್ಮದವರೂ ದೇವನ ಅಸ್ತಿತ್ವವನ್ನು ಒಪ್ಪಿಕೊಳ್ಳುವವರೇ. ಆದರೆ ಇಸ್ಲಾಮನ್ನು ಆ ಎಲ್ಲ ಮತಧರ್ಮಗಳಿಂದ ಪ್ರತ್ಯೇಕಿಸುವ ವಿಷಯವು 'ಅಲ್ಲಾಹನಿದ್ದಾನೆ' ಎಂಬುದರ ಜೊತೆಗೆ ಆತನ

ಗುಣಗಳ ಸಂಪೂರ್ಣ ಮತ್ತು ಸರಿಯಾದ ಕಲ್ಪನೆಯನ್ನು ನೀಡುತ್ತದೆ. ಈ ಕಲ್ಪನೆಯಿಂದಾಗಿಯೇ ಮಾನವನ ಎಲ್ಲ ಆಚಾರ-ವಿಚಾರಗಳಿಗೆ ಶಕ್ತಿ ನೀಡುತ್ತದೆ. ಈ ಗುಣಗಳ ಸಂಪೂರ್ಣ ಮತ್ತು ಸಮಗ್ರ ಜ್ಞಾನ ವನ್ನೇ 'ಈಮಾನ್' ಎನ್ನಲಾಗುತ್ತದೆ. ಅದರಿಂದ ಆತ್ಮಸಂಸ್ಕರಣೆ, ನೈತಿಕ ಸುಧಾರಣೆ, ಕರ್ಮಗಳ ಸಂಯೋಜನೆ, ಒಳಿತಿನ ಪ್ರಚಾರ ಮತ್ತು ಕೆಡುಕಿನ ನಿರ್ಮೂಲನ ಹಾಗೂ ನಾಗರಿಕತೆಯ ಬುನಾದಿಯಂತಹ ಬಹಳ ದೊಡ್ಡ ಕಾರ್ಯಗಳನ್ನು ಮಾಡಲಾಗಿದೆ. ಇಂತಹ ಕೆಲಸವು ಬೇರೆ ಯಾವ ಮತ-ಧರ್ಮದಲ್ಲೂ ಇಲ್ಲ.

ಅಲ್ಲಾಹನ ಮೇಲೆ ಈಮಾನ್‌ನ ಸಂಕ್ಷಿಪ್ತ ರೂಪ 'ಲಾ ಇಲಾಹ ಇಲ್ಲಲ್ಲಾಹ್'(ಅಲ್ಲಾಹನಲ್ಲದೆ ಅನ್ಯ ಆರಾಧ್ಯರಿಲ್ಲ) ಎಂಬ ವಚನವನ್ನು ಬಾಯಿಯಿಂದ ಉಚ್ಚರಿಸಿ ಹೃದಯದಿಂದ ದೃಢಪಡಿಸುವುದಾಗಿದೆ. ಇದನ್ನೇ ಇಸ್ಲಾಮಿನೊಳಗೆ ಪ್ರವೇಶಿಸುವುದಕ್ಕೆ ಪ್ರಪ್ರಥಮ ನಿಶ್ಚಯಿಸಲಾಗಿದೆ. ಅಲ್ಲಾಹನ ಹೊರತು ಬೇರೆ ಯಾವ ಆರಾಧ್ಯನೂ ಇಲ್ಲವೆಂಬುದನ್ನು ಮನಸಾರೆ ಒಪ್ಪಿ ನಾಲಗೆಯಿಂದ ಉಚ್ಚರಿಸುವುದು. ಇದರ ಸ್ಪಷ್ಟ ಅರ್ಥವೇನೆಂದರೆ ಪ್ರಪಂಚದ ಎಲ್ಲ ವಸ್ತುಗಳಿಂದಲೂ ದೇವತ್ವವನ್ನು ಕಸಿದು ಕೇವಲ ಸೃಷ್ಟಿಕರ್ತನಿಗೆ ನೀಡುವುದಾಗಿದೆ. ಆಗ ಮಾನವನ ಎಲ್ಲ ಭಾವನೆಗಳು, ವಿಚಾರ-ವಿಶ್ವಾಸಗಳು, ಆರಾಧನೆ ಮತ್ತು ಅನುಸರಣೆಗಳು ಕೇವಲ ಅವನಿಗೆ ಮಾತ್ರವೆಂದಾಗುತ್ತದೆ. ದೇವತ್ವದ ಈ ಪರಿಪೂರ್ಣ ಮತ್ತು ಸಮಗ್ರ ಕಲ್ಪನೆಯು ಬೇರೆಲ್ಲೂ ಯಾವ ಧರ್ಮದಲ್ಲೂ ಗ್ರಂಥಗಳಲ್ಲೂ ಕಾಣಸಿಗದು. ಲೋಕದ ಎಲ್ಲ ಸಮುದಾಯಗಳೂ ದೇವನನ್ನು ಒಂದಲ್ಲ ಒಂದು ರೀತಿಯಲ್ಲಿ ಒಪ್ಪುತ್ತಾರೆ. ಆದರೆ ಎಲ್ಲ ಕಡೆಯೂ ಅದು ತಪ್ಪಾದ ಅಥವಾ ಅಪೂರ್ಣ ರೀತಿಯಲ್ಲಿದೆ.

ದೇವನನ್ನು ಆದಿ, ಸೃಷ್ಟಿಕರ್ತನೆಂದು ಕೆಲವರು ಭಾವಿಸಿದರೆ, ಇನ್ನು ಕೆಲವರು ಶಕ್ತಿಯೆಂದು ಕಲ್ಪಿಸಿದ್ದಾರೆ. ಮತ್ತೆ ಕೆಲವರು ಭಯಪಡಬೇಕಾದ ವಸ್ತುವೆಂದು ಹೇಳಿದರೆ, ಬೇರೆ ಕೆಲವರು ಅದು ಪ್ರೀತಿಸಲ್ಪಡಬೇಕಾದ ವಸ್ತುವೆನ್ನುತ್ತಾರೆ. ಕೆಲವೆಡೆ ಅದರ ಅರ್ಥ ಸಂಕಟಹರ, ಪ್ರಾರ್ಥನೆಯನ್ನು ಆಲಿಸುವವ ಎಂದಿದ್ದರೆ ಇನ್ನು ಕೆಲವೆಡೆ ಅದು ವಿಭಜಿಸಲ್ಪಡಬಹುದಾದ ವಸ್ತುವೆಂದು ಹೇಳುತ್ತಾರೆ. ಮತ್ತೆ ಕೆಲವೆಡೆ ಅದಕ್ಕೆ ರೂಪ, ಶರೀರ ಹಾಗೂ ಸಂತಾನಗಳನ್ನು ಕಲ್ಪಿಸುತ್ತಾರೆ. ಕೆಲವರು ದೇವನು ಆಕಾಶದಲ್ಲಿ ವಿರಾಜಮಾನನಾಗಿದ್ದಾನೆ ಎಂದು ಭಾವಿಸಿದರೆ ಇನ್ನು ಕೆಲವರು ಅವನು ಅವತಾರ ತಾಳಿ ಬರುತ್ತಾನೆ ಎಂದು ಕಲ್ಪಿಸುತ್ತಾರೆ. ಈ ಎಲ್ಲ ತಪ್ಪು ಮತ್ತು ಅಪೂರ್ಣ ಕಲ್ಪನೆಗಳನ್ನು ಪವಿತ್ರ ಕುರ್‌ಆನ್ ತಿದ್ದಿ ಸರಿಯಾದ ಮತ್ತು ಪರಿಪೂರ್ಣವಾದ ಕಲ್ಪನೆಯನ್ನು ಮುಂದಿಟ್ಟಿದೆ. ಕುರ್‌ಆನ್ ಕಲಿಸುವ ಪ್ರಕಾರ, ನಿರಪೇಕ್ಷ, ಸ್ವಯಂಸ್ಥಿರ, ಚಿರಂತನ, ಸರ್ವಶಕ್ತ, ಸರ್ವಜ್ಞಾನಿ, ಮಹಾ ಕರುಣಾಳು, ಯಾವುದೇ ನ್ಯೂನತೆಗಳಿಲ್ಲದವನು, ಸಂಪೂರ್ಣ ನ್ಯಾಯಪಾಲಿಸುವವನು, ಜೀವನ ಮತ್ತು ಜೀವನಾಧಾರ ನೀಡುವವನು ಲಾಭ-ನಷ್ಟಗಳನ್ನುಂಟು ಮಾಡುವ ಶಕ್ತಿಯುಳ್ಳವನು, ಎಲ್ಲರ ಅಗತ್ಯಗಳನ್ನು ಪೂರೈಸುವವನು, ಎಲ್ಲರ ವಿಚಾರಣೆ ನಡೆಸಿ ಪುರಸ್ಕಾರ ಅಥವಾ ಶಿಕ್ಷೆ

ನೀಡುವವನು ಮಾತ್ರ ದೇವನಾಗಬಲ್ಲನು. ಇನ್ನು ಈ ಗುಣಗಳು ವಿಭಜಿಸಲ್ಪಡ ತಕ್ಕದ್ದಲ್ಲ, ಒಂದೇ ಹೊತ್ತಿನಲ್ಲಿ ಅನೇಕ 'ದೇವರುಗಳು' ಅವರ ಪೈಕಿ ಪ್ರತಿಯೊಂದಕ್ಕೂ ಬೇರೆ ಬೇರೆ ಗುಣಗಳು, ಶಕ್ತಿ ಸಾಮರ್ಥ್ಯಗಳು ಎಂದಿಲ್ಲ.

ದೇವತ್ವದ ಈ ಪರಿಪೂರ್ಣ ಮತ್ತು ಸರಿಯಾದ ಕಲ್ಪನೆಯನ್ನು ನೀಡಿದ ಬಳಿಕ ಕುರ್‌ಆನ್, ಪ್ರಪಂಚದ ಯಾವ ವಸ್ತುವಿನಲ್ಲೂ ಯಾವ ಶಕ್ತಿಯಲ್ಲೂ ಈ ಗುಣಗಳಿಲ್ಲ, ಎಲ್ಲವೂ ಪರಾವಲಂಬಿಗಳು ಎಂಬುದನ್ನು ಸಾಬೀತುಪಡಿಸುತ್ತದೆ. ಲಾಭ-ನಷ್ಟ ಮಾಡುವ ಮಾತಂತಿರಲಿ, ಸ್ವಯಂ ತಮ್ಮ ಮೇಲೆಯೇ ಬರುವ ಸಂಕಷ್ಟಗಳನ್ನು ದೂರೀಕರಿಸುವ ಶಕ್ತಿ ಪ್ರಪಂಚದಲ್ಲಿ ಯಾರಿಗೂ, ಯಾವ ಶಕ್ತಿಗೂ ಇಲ್ಲವೆಂದು ಘಂಟಾಘೋಷವಾಗಿ ಸಾರುತ್ತದೆ. ಈ ನಿರಾಕರಣೆಯ ಬಳಿಕ, 'ಪ್ರಭುತ್ವ ಅಥವಾ ದೇವತ್ವವು ಕೇವಲ 'ಅಲ್ಲಾಹ್' ಎಂಬ ಒಂದು ಅಸ್ತಿತ್ವಕ್ಕೆ ಮಾತ್ರವಿರುವುದೆಂದು ಸಾರಿ ಎಲ್ಲವನ್ನೂ ಬಿಟ್ಟು ಕೇವಲ ಅವನ ಮೇಲೆ ವಿಶ್ವಾಸ ತಾಳುವಂತೆ ಮಾನವನಿಗೆ ಆದೇಶಿಸುತ್ತದೆ. ಅದು ಮಾನವನೊಂದಿಗೆ ಅವನ ಮುಂದೆ ಮಾತ್ರ ಬಾಗುವಂತೆ, ಅವನಿಗೆ ಮಾತ್ರ ಗೌರವ ಸಲ್ಲಿಸುವಂತೆ, ಅವನನ್ನು ಮಾತ್ರ ಪ್ರೀತಿಸುವಂತೆ, ಅವನ ಮೇಲೆ ಮಾತ್ರ ಭರವಸೆ ತಾಳುವಂತೆ ಆದೇಶಿಸಿ, ಒಂದು ದಿನ ಅವನ ಬಳಿಗೆ ಮರಳಿ ಅವನ ಮುಂದೆ ನಿಮ್ಮ ಲೆಕ್ಕ ಸಮರ್ಪಿಸಬೇಕಾಗಿದೆಯೆಂದೂ ನಿಮ್ಮ ಸದ್ಗತಿ ಅಥವಾ ದುರ್ಗತಿ ಅವನ ತೀರ್ಮಾನವನ್ನೇ ಅವಲಂಬಿಸಿದೆಯೆಂದೂ ಹೇಳುತ್ತದೆ.

## ಅಲ್ಲಾಹನ ಮೇಲೆ ವಿಶ್ವಾಸದ ನೈತಿಕ ಪ್ರಯೋಜನಗಳು

ಅಲ್ಲಾಹನ ಗುಣಗಳ ಈ ವಿವರವಾದ ಕಲ್ಪನೆಯೊಂದಿಗೆ ಅಲ್ಲಾಹನ ಮೇಲಿನ ವಿಶ್ವಾಸವು ಮಾನವನ ಹೃದಯದಲ್ಲಿ ರೂಢಮೂಲವಾದ ಬಳಿಕ, ಅವನು ಅಸಾಮಾನ್ಯ ಪ್ರಯೋಜನಗಳನ್ನು ಕಾಣುವನು. ಬೇರೆಲ್ಲೂ ಅದು ಕಾಣದಿಗದು.

## ವಿಶಾಲ ದೃಷ್ಟಿ

ಅಲ್ಲಾಹನ ಮೇಲೆ ಪರಿಪೂರ್ಣ ವಿಶ್ವಾಸವಿಡುವವನು ಸಂಕುಚಿತ ದೃಷ್ಟಿಯವನಾಗಿರುವುದಿಲ್ಲ, ಅವನು ತಾನು ತನ್ನವರು, ತನ್ನ ದೇಶ ಎಂಬ ಸೀಮಿತ ಕಲ್ಪನೆಯಿಂದ ಹೊರ ಬಂದು ವಿಶಾಲವಾಗಿ ಚಿಂತಿಸತೊಡಗುತ್ತಾನೆ. ಅವನು ಪ್ರಪಂಚದ ಎಲ್ಲ ವಸ್ತುಗಳೊಂದಿಗೆ ಒಂದೇ ರೀತಿಯ ಸಂಬಂಧವನ್ನು ಹೊಂದಿರುತ್ತಾನೆ. ನಾನು ನಂಬುವ ದೇವನು ನನ್ನ, ನನ್ನ ಕುಟುಂಬದ ಅಥವಾ ನನ್ನ ದೇಶದ ಮಾತ್ರ ದೇವನಲ್ಲ; ಅವನು ಭೂಮಿ ಆಕಾಶಗಳ ಪ್ರಭುವೂ ಆಗಿದ್ದಾನೆ. ಅವನ ಒಡೆತನವು ಕೇವಲ ನನ್ನ ದೇಶಕ್ಕೆ ಸೀಮಿತವಲ್ಲ, ಅವನು ಭೂಮಿ-ಆಕಾಶಗಳ ಮತ್ತು ಪೂರ್ವ-ಪಶ್ಚಿಮಗಳ ಒಡೆಯನಾಗಿದ್ದಾನೆ. ನಾನು ಮಾತ್ರ ಅವನ ದಾಸ್ಯ ಆರಾಧನೆ ಮಾಡುವುದಲ್ಲ, ಭೂಮಿ-ಆಕಾಶಗಳಲ್ಲಿರುವ

ಸಕಲವೂ ಅವನ ಮುಂದೆ ಬಾಗಿವೆ ಎಂದು ಅವನು ಭಾವಿಸುತ್ತಾನೆ. **"ಭೂಮಿ ಆಕಾಶಗಳಲ್ಲಿರುವ ಸಕಲ ವಸ್ತುಗಳೂ ಬಯಯೋ ಬಯಸದೆಯೋ ಅವನಿಗೆ ಅಧೀನವಾಗಿವೆ."** **(ಪವಿತ್ರ ಕುರ್‌ಆನ್, 3:83)**

**"ಸಪ್ತ ಗಗನಗಳೂ ಭೂಮಿಯೂ ಅವುಗಳಲ್ಲಿರುವ ಸಕಲ ವಸ್ತುಗಳೂ ಅವನ ಪಾವಿತ್ರ್ಯವನ್ನು ಕೊಂಡಾಡುತ್ತಿವೆ."** **(ಪವಿತ್ರ ಕುರ್‌ಆನ್, 17:44)**

ಈ ದೃಷ್ಟಿಯಲ್ಲಿ ಪ್ರಪಂಚವನ್ನು ನೋಡುವಾಗ ಅವನಿಗೆ ಯಾರೂ ಪರಕೀಯರಾಗಿ ಕಾಣುವುದಿಲ್ಲ, ಎಲ್ಲರೂ ತನ್ನವರಾಗಿ ಕಾಣುತ್ತಾರೆ. ಅವನ ಅನುಕಂಪ, ಪ್ರೀತಿ ಮತ್ತು ಸೇವೆಗಳಿಗೆ ಯಾವುದೇ ಮೇರೆಯಿರುವುದಿಲ್ಲ, ತಾನು ಈ ವರೆಗೆ ಹಾಕಿಕೊಂಡಿದ್ದ ನಿರ್ಬಂಧವು ಹೋಗಿ ಬಿಡುತ್ತದೆ.

ಒಟ್ಟಿನಲ್ಲಿ ಅಲ್ಲಾಹನ ಮೇಲೆ ವಿಶ್ವಾಸವಿರಿಸುವವನು ಎಂದೂ ಸಂಕುಚಿತ ದೃಷ್ಟಿಯವನಾಗಿರುವುದಿಲ್ಲ. ಅವನ ವಿಶಾಲದೃಷ್ಟಿಗೆ 'ಅಂತಾರಾಷ್ಟ್ರೀಯ'ವೆಂಬ ಪದವೂ ಸಾಲದು. ವಾಸ್ತವದಲ್ಲಿ ಅವನದು 'ಸಾರ್ವಲೌಕಿಕ' ದೃಷ್ಟಿಯಾಗಿದೆ.

## ಸ್ವಾಭಿಮಾನ

ಅಲ್ಲಾಹನ ಮೇಲಿನ ವಿಶ್ವಾಸವು ಮಾನವನನ್ನು ಸ್ವಾಭಿಮಾನದ ಉನ್ನತ ಸ್ತರಗಳಿಗೆ ಕೊಂಡೊಯ್ಯುತ್ತದೆ. ಅವನು ದೇವನನ್ನು ಗುರುತಿಸದೆ ಇದ್ದಾಗ ಲೋಕದ ಪ್ರತಿಯೊಂದು ಬಲಾಢ್ಯ ವಸ್ತು, ಲಾಭ-ನಷ್ಟಗಳನ್ನು ಉಂಟು ಮಾಡುವ ವಸ್ತು ಮತ್ತು ಪ್ರತಿಯೊಂದು ಶ್ರೇಷ್ಠ ವಸ್ತುಗಳ ಮುಂದೆ ಬಾಗುತ್ತಿದ್ದನು. ಅದಕ್ಕೆ ಹೆದರುತ್ತಿದ್ದನು. ಅವನ ಮುಂದೆ ಕೈಚಾಚುತ್ತಿದ್ದನು. ಅದರಲ್ಲಿ ನಿರೀಕ್ಷೆ ಯಿರಿಸುತ್ತಿದ್ದನು. ಆದರೆ ದೇವನನ್ನು ಗುರುತಿಸಿದಾಗ ತಾನು ಕೈ ಚಾಚುತ್ತಿದ್ದುದು ಸ್ವಯಂ ಅಸಹಾಯಕರ ಮುಂದೆಯೆಂದು ಅವನಿಗೆ ಮನವರಿಕೆಯಾಗುತ್ತದೆ. ತಾನು ಆರಾಧಿಸುತ್ತಿದ್ದ ವಸ್ತುಗಳು ಸ್ವಯಂ ದಾಸರಾಗಿವೆ. ತಾನು ನಿರೀಕ್ಷೆಯಿರಿಸಿಕೊಂಡಿದ್ದ ವಸ್ತು ತನಗೆ ಸಹಾಯ ಮಾಡುವುದಂತಿರಲಿ, ಸ್ವಯಂ ಅದಕ್ಕೇ ಸಹಾಯ ಮಾಡುವ ಸ್ಥಿತಿ ಯಲ್ಲಿಲ್ಲವೆಂದು ಅವನಿಗೆ ತಿಳಿಯುತ್ತದೆ. **(ಪವಿತ್ರ ಕುರ್‌ಆನ್, 17:57, 7:192-194)** ಅವನಿಗೆ, ದೇವನೇ ನೈಜ ಶಕ್ತಿಯ ಒಡೆಯ, ಅವನದೇ ಆಜ್ಞೆ ನಡೆಯುತ್ತದೆ. ಅವನ ಹೊರತು ಯಾರೂ ಸಹಾಯಕರಿಲ್ಲ, ಅವನೇ ಜೀವನಾಧಾರ ನೀಡುವವನು, ಭೂಮಿ ಆಕಾಶಗಳ ಕೀಲಿಕೈಗಳು ಅವನ ಬಳಿಯಲ್ಲೇ ಇದೆ. ಜೀವನ-ಮರಣ ಕೊಡುವವನು ಅವನೇ. ಅವನ ಹೊರತು ಜೀವನವನ್ನಾಗಲಿ, ಮರಣವನ್ನಾಗಲಿ ನೀಡುವವರು ಯಾರೂ ಇಲ್ಲ, ಲಾಭ-ನಷ್ಟಗಳು ಅವನಿಂದಲೇ ಆಗಿರುತ್ತವೆ. **(ಪವಿತ್ರ ಕುರ್‌ಆನ್, 2:107,165, 3:126,145, 6:52, 10:107, 51:58)** ಎಂಬುದು ಮನದಟ್ಟಾಗುತ್ತದೆ.

ಈ ಜ್ಞಾನ ದೊರಕಿದ ಬಳಿಕ ಅವನು ಲೋಕದ ಎಲ್ಲ ಶಕ್ತಿಗಳಿಂದಲೂ

ನಿರಪೇಕ್ಷನಾಗುತ್ತಾನೆ. ಯಾರ ಭಯವೂ ಅವನಿಗಿರುವುದಿಲ್ಲ, ದೇವನ ಹೊರತು ಅವನ ಕೊರಳು ಯಾರ ಮುಂದೆಯೂ ಬಾಗುವುದಿಲ್ಲ, ಯಾರ ಮುಂದೆಯೂ ಅವನು ಕೈಚಾಚುವುದಿಲ್ಲ, ದೇವನ ಹೊರತು ಇನ್ಯಾರ ಮಹಾನತೆಯೂ ಅವನ ಹೃದಯದಲ್ಲಿರುವುದಿಲ್ಲ, ದೇವನನ್ನು ಬಿಟ್ಟು ಅವನು ಯಾರಲ್ಲೂ ನಿರೀಕ್ಷೆಗಳನ್ನಿರಿಸುವುದಿಲ್ಲ.

## ನಯ-ವಿನಯ

ಮೇಲೆ ವಿವರಿಸಿದ ಸ್ವಾಭಿಮಾನವು ಮಾನವನಿಗೆ ತನ್ನ ಶಕ್ತಿ, ಸಂಪತ್ತು ಮತ್ತು ಸಾಮರ್ಥ್ಯದ ಅಹಂಕಾರದಿಂದ ಉಂಟಾಗುವಂತಹದ್ದಲ್ಲ, ಇದು ದೇವನೊಂದಿಗೆ ತನ್ನ ಮತ್ತು ಲೋಕದ ಇತರೆಲ್ಲ ವಸ್ತುಗಳ ಸಂಬಂಧವನ್ನು ಸರಿಯಾಗಿ ಗ್ರಹಿಸಿರುವುದರಿಂದ ಉಂಟಾಗುವ ಸ್ವಾಭಿಮಾನವಾಗಿದೆ. ಆದ್ದರಿಂದ ಅಲ್ಲಾಹನ ಮೇಲೆ ವಿಶ್ವಾಸವಿರಿಸುವವನಲ್ಲಿ ಸ್ವಾಭಾವಿಕವಾಗಿ ವಿನಯಶೀಲತೆ ಇರುತ್ತದೆ. ದೇವನ ಶಕ್ತಿಯ ಮುಂದೆ ತಾನೇನೂ ಅಲ್ಲ, ಅವನ ಸಾಮ್ರಾಜ್ಯದಿಂದ ಹೊರಹೋಗಲು ತನ್ನಿಂದಾಗಲೀ ಇತರ ಯಾರಿಂದಲೇ ಆಗಲಿ ಸಾಧ್ಯವಿಲ್ಲವೆಂದು ಅವನು ತಿಳಿದಿರುತ್ತಾನೆ. **(ಪವಿತ್ರ ಕುರ್‌ಆನ್, 6:61, 55:33)** ದೇವನು ನಿರಪೇಕ್ಷಕನಾಗಿದ್ದಾನೆ. ನಾವು ಅವಲಂಬಿತರು. ಭೂಮಿ ಆಕಾಶಗಳಲ್ಲಿರುವುದೆಲ್ಲವೂ ಅವನದೇ. ನನಗೆ ಸಿಕ್ಕಿರುವಂತಹ ಅನುಗ್ರಹಗಳು ಅವನಿಂದಲೇ ಆಗಿವೆ **(ಪವಿತ್ರ ಕುರ್‌ಆನ್, 47:38, 16:53)** ಎಂದು ಅವನು ಗ್ರಹಿಸಿರುತ್ತಾನೆ. ಹಾಗಿರುವಾಗ ಅವನಲ್ಲಿ ಅಹಂಕಾರವಿರುವುದಾದರೂ ಎಲ್ಲಿ? ಅಲ್ಲಾಹನ ಮೇಲಿನ ವಿಶ್ವಾಸದಿಂದಾಗಿ ಅವನು ವಿನಯಶೀಲನಾಗಿ ಮಾಪಡುತ್ತಾನೆ. **(ಪವಿತ್ರ ಕುರ್‌ಆನ್, 25:63)**

## ತಪ್ಪು ನಿರೀಕ್ಷೆಗಳಿಗೆ ಪ್ರಹಾರ

ಸೃಷ್ಟಿಕರ್ತ ಮತ್ತು ಸೃಷ್ಟಿಯ ಸಂಬಂಧದ ಕುರಿತು ಸರಿಯಾದ ಕಲ್ಪನೆ ಮೂಡಿದ ಬಳಿಕ, ಅದಕ್ಕಿಂತ ಮುಂಚೆ ಇಟ್ಟುಕೊಂಡಿದ್ದ ಎಲ್ಲ ತಪ್ಪು ನಿರೀಕ್ಷೆಗಳು ಮತ್ತು ಸುಳ್ಳು ಭರವಸೆಗಳು ಹುಸಿಯಾಗುತ್ತವೆ. ತನ್ನ ಮಟ್ಟಿಗೆ ಸರಿಯಾದ ವಿಶ್ವಾಸ ಮತ್ತು ಸತ್ಕರ್ಮದ ಹೊರತು ಮೋಕ್ಷಕ್ಕೆ ಬೇರಾವ ದಾರಿಯೂ ಇಲ್ಲವೆಂದು ಮನುಷ್ಯನಿಗೆ ಮನವರಿಕೆಯಾಗುತ್ತದೆ. ಈ ಕಲ್ಪನೆಯಿಲ್ಲದವರು ಅನೇಕ ಬಗೆಯ ನಂಬಿಕೆಗಳನ್ನಿಟ್ಟುಕೊಂಡಿರುತ್ತಾರೆ. ಕೆಲವರು, ದೇವನ ಕೆಲಸ ಕಾರ್ಯಗಳಲ್ಲಿ ಅನೇಕ ಸಣ್ಣ ದೇವರುಗಳು ಭಾಗಿಯಾಗಿದ್ದಾರೆ. ನಾವು ಅವರನ್ನು ಸಂತುಷ್ಟಗೊಳಿಸಿದರೆ ಅವರು ನಮ್ಮ ಬಗ್ಗೆ ದೇವನಲ್ಲಿ ಶಿಫಾರಸ್ಸು ಮಾಡುತ್ತಾರೆಂದು ಭಾವಿಸುತ್ತಾರೆ. **(ಪವಿತ್ರ ಕುರ್‌ಆನ್, 10:18)** ಇನ್ನು ಕೆಲವರು, ದೇವನಿಗೆ ಒಬ್ಬ ಮಗನಿದ್ದು ಆತ ನಮಗಾಗಿ ಶಿಲುಬೆಯಲ್ಲಿ ಜೀವ ತೆತ್ತು ನಮ್ಮ ಪಾಪ ಪರಿಹಾರ ಮಾಡಿ, ಸ್ವರ್ಗದಲ್ಲಿ ನಮ್ಮ ಸ್ಥಾನ ಭದ್ರಪಡಿಸಿದ್ದಾನೆ ಎಂಬ ಭ್ರಮೆಯಲ್ಲಿದ್ದಾರೆ. ಮತ್ತೆ ಕೆಲವರು, ನಾವು

ಅಲ್ಲಾಹನ ಮಕ್ಕಳು ಮತ್ತು ಪ್ರೀತಿ ಪಾತ್ರರು. (ಪವಿತ್ರ ಕುರ್‌ಆನ್, 5:18) ನಾವೇನ ಮಾಡಿದರೂ ನಮಗೆ ಶಿಕ್ಷೆಯಿರದು ಎಂದು ಭಾವಿಸುತ್ತಾರೆ. ಇಂತಹ ಅನೇಕ ಹು ನಿರೀಕ್ಷೆಗಳು ಜನರನ್ನು ಯಾವಾಗಲೂ ಪಾಪಗಳ ಸುಳಿಯಲ್ಲಿ ಸಿಲುಕಿಸುತ್ತಿರುತ್ತದೆ. ಏಕೆಂದ ಅದರಿಂದಾಗಿ ಆತ್ಮ ಮತ್ತು ಕರ್ಮಶುದ್ಧಿಯ ಕಡೆಗೆ ಅವರ ಗಮನ ಹರಿಯುವುದಿಲ್ಲ.

ಆದರೆ ಕುರ್‌ಆನ್ ಕಲಿಸುವ 'ಅಲ್ಲಾಹನ ಮೇಲಿನ ವಿಶ್ವಾಸ'ವು ಇಂತಹ ತಪ್ಪು ನಿರೀಕ್ಷೆಗಳಿಗೆ ಅವಕಾಶವನ್ನೇ ನೀಡುವುದಿಲ್ಲ. ಯಾರೂ ದೇವನಿಗೆ ಸರಿಸಮಾನರಿಲ್ಲ. ಅವನ ಎಲ್ಲರ ಸೃಷ್ಟಿಕರ್ತ, ಎಲ್ಲರೂ ಅವನ ಸೃಷ್ಟಿಗಳು, ದೇವಭಯ ಮಾತ್ರ ಶ್ರೇಷ್ಠತೆಯ ಮಾನದಂಡವೆಂದು ಕುರ್‌ಆನ್ ಹೇಳುತ್ತದೆ. (ಪವಿತ್ರ ಕುರ್‌ಆನ್, 49:13) ದೇವನ ಬ ಶಿಫಾರಸು ಮಾಡತಕ್ಕವರು ಯಾರೂ ಇಲ್ಲ. (ಪವಿತ್ರ ಕುರ್‌ಆನ್, 2:255) ದೇವನಿ ಅವಿಧೇಯರಾಗಿ ನಡೆದರೆ ಅವನ ಶಿಕ್ಷೆಯಿಂದ ಪಾರುಗೊಳಿಸುವ ಯಾವ ಶಿಫಾರಸುದಾರರು ಸಹಾಯಕರೂ ಇಲ್ಲವೆಂದು ಅದು ಹೇಳುತ್ತದೆ. (ಪವಿತ್ರ ಕುರ್‌ಆನ್, 13:11)

## ಶುಭ ನಿರೀಕ್ಷೆ ಮತ್ತು ಆತ್ಮ ಸಮಾಧಾನ

ಅಲ್ಲಾಹನ ಮೇಲಿನ ವಿಶ್ವಾಸವು ಮಾನವನಲ್ಲಿ ಎಂದೂ ಶುಭ ನಿರೀಕ್ಷೆಯ ಸ್ಥಿತಿಯನ ಹತಾಶಗೊಳಿಸುವುದಿಲ್ಲ. ಸತ್ಯವಿಶ್ವಾಸಿಯ ಮಟ್ಟಿಗೆ ಈಮಾನ್ ಒಂದು ಅಕ್ಷಯ ಪಾತ್ರೆಯಾಗಿದೆ ಅದರಿಂದ ಅವನಿಗೆ ಮನೋಬಲ ಮತ್ತು ಆತ್ಮಸಮಾಧಾನ ಸದಾ ಲಭಿಸುತ್ತಿರುತ್ತದೆ ಲೋಕದ ಎಲ್ಲ ಬಾಗಿಲುಗಳೂ ಅವನ ಮಟ್ಟಿಗೆ ಮುಚ್ಚಲ್ಪಟ್ಟರೂ ಎಲ್ಲ ಸಂಪನ್ಮೂಲಗಳು ಅವನಿಂದ ಕಡಿಯಲ್ಪಟ್ಟರೂ ಎಲ್ಲ ಸಾಧನಾನುಕೂಲತೆಗಳು ಅವನಿಂದ ಒಂದೊಂದಾಗಿ ಜಾರಿ ಹೋದರೂ ಒಬ್ಬ ದೇವನ ಸಹಾಯ ಅವನನ್ನೆಂದೂ ಕೈಬಿಡುವುದಿಲ್ಲ. ಅದ ಆಧಾರದಲ್ಲಿ ಅವನು ಯಾವಾಗಲೂ ಶುಭ ನಿರೀಕ್ಷೆಯಲ್ಲಿರುತ್ತಾನೆ. ಏಕೆಂದರೆ ಯಾವ ದೇವನನ್ನು ಅವನು ನಂಬಿದ್ದಾನೋ ಅವನು ಹೇಳುತ್ತಾನೆ- ನಾನು ನಿಮಗೆ ಅ ನಿಕಟನಾಗಿದ್ದೇನೆ, ನಿಮ್ಮ ಮೊರೆಯನ್ನು ಆಲಿಸುತ್ತೇನೆ. (ಪವಿತ್ರ ಕುರ್‌ಆನ್, 2:186) ನ ಕರುಣೆಯು ಎಲ್ಲವನ್ನೂ ಆವರಿಸಿದೆ. ನನ್ನ ಮೇಲೆ ವಿಶ್ವಾಸವಿಲ್ಲದವರು ಮಾತ್ರ ನ ಕರುಣೆಯಿಂದ ನಿರಾಶರಾಗುತ್ತಾರೆ. (ಪವಿತ್ರ ಕುರ್‌ಆನ್, 7:156, 12:87) ಅವನು ಏನಾದರೂ ತಪ್ಪು ಮಾಡಿದ್ದರೆ ನಿರಾಶನಾಗಬೇಕಾಗಿಲ್ಲ. ನನ್ನಿಂದ ಕ್ಷಮೆ ಯಾಚಿಸಿದ ನಾನವನ ತಪ್ಪುಗಳನ್ನು ಕ್ಷಮಿಸುವೆನು. (ಪವಿತ್ರ ಕುರ್‌ಆನ್, 4: 110) ಈ ಲೋಕದ ಎ ಆಸರೆಗಳೂ ಕೈಬಿಟ್ಟರೆ ಅವುಗಳನ್ನು ನಂಬುವಬದಲು ನನ್ನ ಆಶ್ರಯ ಹಿಡಿಯಲಿ. ಅನಂತ ಯಾವುದೇ ಭಯ-ಆಶಂಕೆ ಅವನ ಬಳಿ ಸುಳಿಯದು. (ಪವಿತ್ರ ಕುರ್‌ಆನ್, 41:30) ನನ್ನ ಸ್ಮರಣೆಯಿಂದ ಅವನ ಮನಸ್ಸಿಗೆ ಸಮಾಧಾನ ದೊರೆಯುತ್ತದೆ. (ಪವಿತ್ರ ಕುರ್‌ಆನ್, 13:28)

## ಸಹನೆ ಮತ್ತು ಭರವಸೆ

ಈ ಶುಭ ನಿರೀಕ್ಷೆಯು ಪ್ರಗತಿ ಹೊಂದಿ ಮಾನವನಲ್ಲಿ ಸಹನೆ-ಸ್ಥೈರ್ಯ ಮತ್ತು ಅಲ್ಲಾಹನ ಮೇಲೆ ಭರವಸೆಯ ಉನ್ನತ ಮಟ್ಟಕ್ಕೆ ತಲಪಿಸುತ್ತದೆ. ಆಗ ವಿಶ್ವಾಸಿಯ ಮನಸ್ಸು ಬಂಡೆಕಲ್ಲಿನಷ್ಟು ಬಲಿಷ್ಠವೂ ಸುಭದ್ರವೂ ಆಗುತ್ತದೆ. ಲೋಕದ ಯಾವುದೇ ಸಂಕಷ್ಟ, ವೈರತ್ವ, ತೊಂದರೆ ಮತ್ತು ನಷ್ಟಗಳು ಹಾಗೂ ವಿರೋಧಿ ಶಕ್ತಿಗಳು ಸೇರಿದರೂ ಅವನನ್ನು ತನ್ನ ಸ್ಥಾನದಿಂದ ಕದಲಿಸಲಾರವು. ಈ ಪ್ರಬಲ ಶಕ್ತಿ ಅಲ್ಲಾಹನ ಮೇಲಿನ ವಿಶ್ವಾಸದಿಂದಲ್ಲದೆ ಸಾಧ್ಯವೇ ಇಲ್ಲ. ದೇವನನ್ನು ನಂಬದವರ ದೃಷ್ಟಿಯು ಭೌತಿಕ ಅಥವಾ ಕಾಲ್ಪನಿಕ ವಸ್ತುಗಳ ಮೇಲಿರುತ್ತದೆ. ಅವುಗಳಾದರೋ ಸ್ವಯಂ ಯಾವುದೇ ಶಕ್ತಿಯನ್ನು ಹೊಂದಿರುವುದಿಲ್ಲ. ಅದರ ಆಧಾರದಲ್ಲಿ ಬದುಕುವವನು ವಾಸ್ತವದಲ್ಲಿ ಜೇಡರ ಬಲೆಯ ಆಶ್ರಯ ಪಡೆಯುತ್ತಾನೆ. **(ಪವಿತ್ರ ಕುರ್‌ಆನ್, 29:41)** ಇಂತಹ ದುರ್ಬಲ ಆಶ್ರಯವನ್ನು ಪಡೆದು ಬದುಕುವವನು ಸ್ವಯಂ ದುರ್ಬಲನೆಂಬುದು ಶತಃಸಿದ್ಧ **(ಪವಿತ್ರ ಕುರ್‌ಆನ್, 22:73)** ಯಾವುದೇ ಸಂಕಷ್ಟ ಬಂದರೂ ಇದೆಲ್ಲವೂ ದೇವನ ವತಿಯಿಂದ ಎಂದು ಅವನು ಬಲವಾಗಿ ನಂಬಿರುತ್ತಾನೆ. ಅದನ್ನು ನೀಗಿಸುವವನೂ ಅವನೇ ಎಂದು ಅವನಿಗೆ ದೃಢವಾದ ವಿಶ್ವಾಸವಿರುತ್ತದೆ. **(ಪವಿತ್ರ ಕುರ್‌ಆನ್, 9:51)**

## ಶೌರ್ಯ-ಪರಾಕ್ರಮ

ಅಲ್ಲಾಹನ ಮೇಲೆ ವಿಶ್ವಾಸವಿರಿಸುವುದರಿಂದ ಮಾನವನಲ್ಲಿ ಅಪ್ರತಿಮ ಶೌರ್ಯ-ಪರಾಕ್ರಮದ ಗುಣ ಬೆಳೆಯುತ್ತದೆ. ಮಾನವನು ತನ್ನ ಜೀವ, ಸೊತ್ತು ಮತ್ತು ಮನೆ ಮಂದಿಯೊಂದಿಗಿರುವ ಪ್ರೀತಿ ಹಾಗೂ ಹಾನಿಯುಂಟು ಮಾಡುವ ಶಕ್ತಿಯು ಇತರರಲ್ಲಿದೆಯೆಂಬ ಭಯವು ಮಾನವನನ್ನು ಹೇಡಿಯನ್ನಾಗಿ ಮಾಡುತ್ತದೆ. ಆದರೆ ಅಲ್ಲಾಹನ ಮೇಲಿನ ವಿಶ್ವಾಸವು ಈ ಎರಡೂ ಭಾವನೆಗಳನ್ನು ಹೃದಯದಿಂದ ತೆಗೆದು ಹಾಕುತ್ತದೆ. ಅತಿ ಹೆಚ್ಚು ಪ್ರೀತಿಗೆ ಅರ್ಹನು ಕೇವಲ ಅಲ್ಲಾಹನಾಗಿದ್ದಾನೆಂದು ವಿಶ್ವಾಸಿಯ ದೃಢ ನಂಬಿಕೆಯಾಗಿರುತ್ತದೆ. **(ಪವಿತ್ರ ಕುರ್‌ಆನ್, 2:165)** ಸೊತ್ತು-ಸಂತಾನಗಳು ಈ ಲೋಕದ ಅಲಂಕಾರಗಳಾಗಿದ್ದು ಒಂದಲ್ಲ ಒಂದು ದಿನ ಅವು ಅಳಿಯಲೇಬೇಕಾಗಿದೆ. ದೇವನ ಬಳಿಯಿರುವುದು ಮಾತ್ರ ಶಾಶ್ವತವಾದದ್ದೆಂದು ಅವನು ನಂಬಿರುತ್ತಾನೆ. **(ಪವಿತ್ರ ಕುರ್‌ಆನ್, 18:46)** ಅದೇ ರೀತಿ ಈ ಲೋಕವು ನಶ್ವರವಾಗಿದ್ದು, ಮರಣವೂ ಸುನಿಶ್ಚಿತವಾಗಿದ್ದು ಅದನ್ನು ತಪ್ಪಿಸಲು ಯಾರಿಂದಲೂ ಸಾಧ್ಯವಿಲ್ಲ. **(ಪವಿತ್ರ ಕುರ್‌ಆನ್, 4:78, 62:8)** ಆದ್ದರಿಂದ ನಶ್ವರ ಲೋಕದ ಕೆಲವು ದಿವಸಗಳ ಸಂತೋಷವನ್ನು ನಮ್ಮ ಜೀವ-ಸೊತ್ತುಗಳ ಒಡೆಯನಾದ ಅಲ್ಲಾಹನಿಗೆ ಅರ್ಪಿಸಿ, ಅವುಗಳ ಬದಲಿಗೆ ಶಾಶ್ವತವಾದ, ಅತ್ಯುತ್ತಮ ಲಾಭದಾಯಕ ಜೀವನವನ್ನು ಪಡೆಯುವುದು ಒಳ್ಳೆಯದಲ್ಲವೆ? **(ಪವಿತ್ರ ಕುರ್‌ಆನ್, 9:111)**

ಇನ್ನು, ಹಾನಿಯುಂಟು ಮಾಡುವ ಮತ್ತು ನಾಶಪಡಿಸುವ ಶಕ್ತಿ ಯಾವ ಮಾನ ಅಥವಾ ಪ್ರಾಣಿಯಲ್ಲೋ ತೋಪು-ತಲವಾರುಗಳಲ್ಲೋ ಕಲ್ಲು ಮರಗಳಲ್ಲೋ ಇಲ್ಲ; ಅದ ಅಲ್ಲಾಹನ ಕೈಯಲ್ಲಿದೆಯೆಂಬ ನಂಬಿಕೆಯು ಅಲ್ಲಾಹನ ಹೊರತು ಬೇರೆಲ್ಲದರ ಭಯವ ಅವನ ಮನಸ್ಸಿನಿಂದ ತೆಗೆದುಹಾಕುತ್ತದೆ. ಲೋಕದ ಎಲ್ಲ ಶಕ್ತಿಗಳೂ ಒಟ್ಟು ಸೇರಿ ಒಬ್ಬನಿ ನಷ್ಟವುಂಟು ಮಾಡಬಯಸಿದರೆ, ಅಲ್ಲಾಹನ ಅನುಜ್ಞೆಯಿಲ್ಲದೆ ಅವನ ಕೂದಲು ಕೊಂಕಿಸಲ ಸಾಧ್ಯವಿಲ್ಲ ವೆಂದು ಅವನು ನಂಬಿರುತ್ತಾನೆ. **(ಪವಿತ್ರ ಕುರ್‌ಆನ್, 2:102)** ಮರಣ ಸಮಯ ಬಂದು ಬಿಟ್ಟರೆ ಅದನ್ನು ನೀಗಿಸಲು ಯಾರಿಂದಲೂ ಸಾಧ್ಯವಿಲ್ಲ. **(ಪವಿ ಕುರ್‌ಆನ್, 3:145,154)** ಆದ್ದರಿಂದ ಅಲ್ಲಾಹನನ್ನು ಮಾತ್ರ ಭಯ ಪಡಬೇಕು. ಅವನ ಮಾತ್ರ ಅದಕ್ಕೆ ಅರ್ಹನು. **(ಪವಿತ್ರ ಕುರ್‌ಆನ್, 3:175, 33:37)** ಯಾರ ಹೃದಯದ ಈಮಾನ್ ಇರುವುದಿಲ್ಲವೋ ಅವರು ಅಲ್ಲಾಹನಿಗಿಂತ ಹೆಚ್ಚು ಜನರನ್ನು ಹೆದರುತ್ತಾ ಆದ್ದರಿಂದ ಅವರು ಅಲ್ಲಾಹನ ಮಾರ್ಗದಲ್ಲಿ ಹೋರಾಡಲು ಹಿಂಜರಿಯುತ್ತಾರೆ. **(ಪವಿ ಕುರ್‌ಆನ್, 4:77)** ಆದರೆ ನೈಜ ಸತ್ಯವಿಶ್ವಾಸಿಗಳು ಯಾರನ್ನೂ ಹೆದರುವುದಿಲ್ಲ, ಶತ್ರುಗಳನ ತೋರಿಸಿ ಅವರನ್ನು ಹೆದರಿಸಿದಾಗ ಅವರ ಈಮಾನ್ ವೃದ್ಧಿಸುತ್ತದೆ. ಅವರು ಇನ್ನಷ ಶೂರರಾಗುತ್ತಾರೆ. ಸರ್ವಸ್ವವನ್ನೂ ಅರ್ಪಿಸಲು ಅವರು ಸಿದ್ಧರಾಗುತ್ತಾರೆ. ಏಕೆಂದರೆ ಅವ ಸಂಪೂರ್ಣ ಭರವಸೆಯು ಅಲ್ಲಾಹನ ಮೇಲೆ ಮಾತ್ರ ಆಗಿರುತ್ತದೆ. **(ಪವಿತ್ರ ಕುರ್‌ಆನ್ 3:173)**

## ಸಂತೃಪ್ತಿ ಮತ್ತು ನಿರಪೇಕ್ಷತೆ

ಈಮಾನ್ ಮನುಷ್ಯರಲ್ಲಿ ಸಂತೃಪ್ತಿ ಮತ್ತು ನಿರಪೇಕ್ಷತೆಯನ್ನುಂಟು ಮಾಡುತ್ತದೆ ದುರಾಸೆ ಮತ್ತು ವ್ಯಾಮೋಹವನ್ನು ದೂರಗೊಳಿಸುತ್ತದೆ. ಅನೈತಿಕ ಮಾರ್ಗಗಳಿಂ ಸಂಪಾದಿಸುವುದರಿಂದ ತಡೆಯುತ್ತದೆ. ಇತರರೊಂದಿಗೆ ಆತ ಪೈಪೋಟಿಗಿಳಿಯುವುದಿಲ್ಲ ಅಕ್ರಮವಾಗಿ ಸಂಪತ್ತು ಗಳಿಸುವುದಿಲ್ಲ, ಯಾವಾಗಲೂ ತನ್ನ ಪ್ರಭುವಿನ ಅನುಗ್ರಹವನ ಸಭ್ಯ ಮಾರ್ಗಗಳಿಂದ ಅರಸುತ್ತಾನೆ. ತನ್ನ ಸಂಪಾದನೆಯು ಹೆಚ್ಚಿರಲಿ, ಕಡಿಮೆಯಿರಲ ಅದನ್ನು ತನ್ನ ಪ್ರಭುವಿನ ಅನುಗ್ರಹವೆಂದು ಬಗೆದು ಅದರಲ್ಲೇ ತೃಪ್ತಿಪಟ್ಟುಕೊಳ್ಳುತ್ತಾನೆ ಅನುಗ್ರಹವು ಸಂಪೂರ್ಣವಾಗಿ ಅಲ್ಲಾಹನ ಕೈಯಲ್ಲಿದ್ದು ಅವನು ಯಾರಿಗೆ ಬಯಸುತ್ತಾನೋ ಅವರಿಗೆ ನೀಡುತ್ತಾನೆ. **(ಪವಿತ್ರ ಕುರ್‌ಆನ್, 3:7-8)** ಜೀವನಾಧಾರವೂ ಅವನ ಕೈಯಲ್ಲೇ ಇದ್ದು ಅದನ್ನು ಬಯಸಿದವರಿಗೆ ನೀಡುತ್ತಾನೆ. **(ಪವಿತ್ರ ಕುರ್‌ಆನ್, 13:26)** ಇನ ಸ್ಥಾನಮಾನ, ಸಂಪತ್ತು, ಶಕ್ತಿ, ಸೌಂದರ್ಯ, ಖ್ಯಾತಿ ಹಾಗೂ ಇತರ ಇನ್ನೂ ಹಲವ ವಿಷಯಗಳನ್ನು ಅಲ್ಲಾಹನು ಕೆಲವರಿಗೆ ಹೆಚ್ಚು ನೀಡಿದರೆ, ಇನ್ನು ಕೆಲವರಿಗೆ ಕಡಿಮ

ನೀಡುತ್ತಾನೆ. ಇದೆಲ್ಲವೂ ಆತನೇ ನಿಶ್ಚಯಿಸಿದ ನಿಯಮಗಳಾಗಿದ್ದು ಅದರ ಔಚಿತ್ಯಗಳನ್ನು ಅವನೇ ಬಲ್ಲನು. ಅವನ ವ್ಯವಸ್ಥೆಯನ್ನು ಬದಲಿಸಲು ಮಾನವನು ಪ್ರಯತ್ನಿಸುವುದು ಅವನಿಗೆ ಭೂಷಣವೂ ಅಲ್ಲ, ಅವನಿಗೆ ಅದರಲ್ಲಿ ಯಶಸ್ಸೂ ಸಿಗಲಾರದು. **(ಪವಿತ್ರ ಕುರ್‌ಆನ್, 4:31)**

## ನೈತಿಕ ಸುಧಾರಣೆ ಮತ್ತು ಕರ್ಮಬದ್ಧತೆ

ಅಲ್ಲಾಹನ ಮೇಲೆ ವಿಶ್ವಾಸದಿಂದ ನಾಗರಿಕತೆಗೆ ಉಂಟಾಗುವ ಅತಿ ದೊಡ್ಡ ಪ್ರಯೋಜನವೇನೆಂದರೆ ಅದರಿಂದ ಸಮಾಜದ ವ್ಯಕ್ತಿಗಳಲ್ಲಿ ಕರ್ತವ್ಯ ಪ್ರಜ್ಞೆ ಉಂಟಾಗುತ್ತದೆ. ಆತ್ಮಗಳಲ್ಲಿ ಪರಿಶುದ್ಧತೆ ಮತ್ತು ಕರ್ಮಗಳಲ್ಲಿ ಸೂಕ್ಷ್ಮತೆಯುಂಟಾಗುತ್ತದೆ. ಜನರ ಪರಸ್ಪರ ಸಂಬಂಧಗಳು, ವ್ಯವಹಾರಗಳು ಸರಿಯಾಗಿರುತ್ತದೆ. ಕಾನೂನು ಪಾಲನೆಯ ಪ್ರಜ್ಞೆ ಮೂಡುತ್ತದೆ. ಆಜ್ಞಾಪಾಲನೆ ಮತ್ತು ಶಿಸ್ತು ಉಂಟಾಗುತ್ತದೆ. ವ್ಯಕ್ತಿಗಳು ಒಂದು ಬಲಿಷ್ಠ ಆಂತರಿಕ ಶಕ್ತಿಯಾಗಿ ಒಳಗಿಂದೊಳಗೇ ಸುಧಾರಿತಗೊಂಡು ಒಂದು ಸಾತ್ವಿಕ ಮತ್ತು ಸುಭದ್ರ ಸಮಾಜವಾಗಿ ರೂಪುಗೊಳ್ಳಲು ಸಿದ್ಧ ರಾಗುತ್ತಾರೆ. ಇದು ವಾಸ್ತವದಲ್ಲಿ ಅಲ್ಲಾಹನ ಮೇಲಿನ ವಿಶ್ವಾಸದ ಪವಾಡವಾಗಿದ್ದು, ಅದುವೇ ಅದರ ವೈಶಿಷ್ಟ್ಯವಾಗಿದೆ. ಲೋಕದ ಯಾವುದೇ ಅಧಿಕಾರ ಶಕ್ತಿ, ಶಿಕ್ಷಣ-ತರಬೇತಿ ಅಥವಾ ಬೋಧನೆ-ಪ್ರವಚನಗಳು ಇಷ್ಟು ದೊಡ್ಡ ಪ್ರಮಾಣದಲ್ಲಿ ಹಾಗೂ ಇಷ್ಟು ಸುಭದ್ರ ಬುನಾದಿಗಳ ಮೇಲೆ ನೈತಿಕ ಸುಧಾರಣೆ ಮತ್ತು ಕರ್ಮಬದ್ಧತೆಯ ಕಾರ್ಯವನ್ನು ಇಷ್ಟು ವ್ಯಾಪಕವಾಗಿ ಮಾಡಲು ಸಾಧ್ಯವಿಲ್ಲ. ಲೌಕಿಕ ಶಕ್ತಿಗಳು ಶರೀರಕ್ಕೆ ಮಾತ್ರ ತಲುಪಬಲ್ಲವು, ಆತ್ಮಕ್ಕೆ ತಲುಪಲಾರವು. ಶರೀರದಲ್ಲೂ ಅದರ ಹಿಡಿತವು ಎಲ್ಲ ಕಡೆ ಯಾವಾಗಲೂ ಇರುವುದಿಲ್ಲ. ಶಿಕ್ಷಣ- ತರಬೇತಿ ಹಾಗೂ ಬೋಧನೆ-ಪ್ರವಚನಗಳು ಒಂದು ಹಂತದ ವರೆಗೆ ಬುದ್ಧಿ-ವಿಚಾರಗಳಿಗೆ ಸೀಮಿತವಾಗಿರುತ್ತದೆ. ಕೆಡುಕಿನ ವಾಂಛೆಯಿರುವ ಚಿತ್ತವು ಅದನ್ನು ಲೆಕ್ಕಿಸುವುದಿಲ್ಲ, ಕೆಲವೊಮ್ಮೆ ಅದು ಬುದ್ಧಿಯನ್ನೂ ಅಧೀನಗೊಳಿಸುತ್ತದೆ. ಆದರೆ ಈಮಾನ್ ತನ್ನ ಸುಧಾರಣಾತ್ಮಕ ಮತ್ತು ಸಂಘಟನಾ ಸಾಮರ್ಥ್ಯಗಳೊಂದಿಗೆ ಮಾನವನ ಹೃದಯ ಮತ್ತು ಆತ್ಮದ ಆಳಕ್ಕಿಳಿದು ಅಲ್ಲಿ ಒಂದು ಪ್ರಬಲ ಮತ್ತು ಜಾಗೃತ ಮನಸ್ಸನ್ನು ಬೆಳೆಸುತ್ತದೆ. ಇದು ಎಲ್ಲೆಡೆ, ಪ್ರತಿಕ್ಷಣ ಮಾನವನಿಗೆ ದೇವಭಯ ಮತ್ತು ಅನುಸರಣೆಯ ನೇರ ಮಾರ್ಗವನ್ನು ತೋರಿಸುತ್ತಾ ಇರುತ್ತದೆ. ಮಾತ್ರವಲ್ಲ, ಅತ್ಯಂತ ಕೆಟ್ಟ ವ್ಯಕ್ತಿಗಳಲ್ಲೂ ತನ್ನ ಎಚ್ಚರಿಕೆ ಮತ್ತು ಚುಚ್ಚುವಿಕೆಯ ಒಂದಿಷ್ಟಾದರೂ ಪ್ರಭಾವವನ್ನು ಬೀರದೆ ಇರುವುದಿಲ್ಲ.

ಕುರ್‌ಆನಿನಲ್ಲಿ ಅಲ್ಲಲ್ಲಿ ಅಲ್ಲಾಹನ ಜ್ಞಾನವು ಸರ್ವವ್ಯಾಪಿಯಾಗಿದ್ದು, ಯಾವೊಂದು ವಿಷಯವೂ ಅವನಿಂದ ಅಡಗಿರುವುದಿಲ್ಲವೆಂದು ಮಾನವನನ್ನು ಎಚ್ಚರಿಸುತ್ತದೆ. (ಉದಾ: **ಪವಿತ್ರ ಕುರ್‌ಆನ್, 2:77, 3:5, 6:51, 13:10-11, 50:16-18,)**

ಇದರ ಜೊತೆಗೇ ಮಾನವನಿಗೆ ಒಂದು ದಿನ ದೇವನ ಮುಂದೆ ಹಾಜರಾಗಿ ಲೆಕ್ಕ ಸಮರ್ಪಿಸಲಿಕ್ಕಿದೆಯೆಂಬುದನ್ನೂ ಮನವರಿಕೆ ಮಾಡಲಾಗಿದೆ. (ಪವಿತ್ರ ಕುರ್‌ಆನ್, 2:203,223, 4:86, 85:12)

ಈ ವಿಶ್ವಾಸವು ವಾಸ್ತವದಲ್ಲಿ ಇಸ್ಲಾಮಿನ ಕಾನೂನನ್ನು ಜಾರಿಗೊಳಿಸುವ ಶಕ್ತಿಯಾಗಿದೆ. ಇಸ್ಲಾಮಿನ ಹರಾಮ್-ಹಲಾಲ್‌ಗಳ ಮೇರೆಗಳು, ನೈತಿಕ, ಸಾಮಾಜಿಕ ಇತ್ಯಾದಿ ವ್ಯವಹಾರಗಳಿಗೆ ಸಂಬಂಧಿಸಿದ ನಿಯಮಗಳನ್ನು ಸೈನ್ಯ, ಪೊಲೀಸು ಅಥವಾ ಶಿಕ್ಷಣ-ಬೋಧನೆಗಳಿಂದ ಜಾರಿಗೊಳಿಸತಕ್ಕದ್ದಲ್ಲ. ಬದಲಾಗಿ ಈ ಶಕ್ತಿಯು, ಪ್ರಬಲ ಸರ್ವಾಧಿಕಾರಿಯಾದ ಅಲ್ಲಾಹನು ನಿಶ್ಚಯಿಸಿದ ಈಮಾನ್‌ನಿಂದ ಉಂಟಾಗುತ್ತದೆ. ಅವನ ಜ್ಞಾನ ಸರ್ವವ್ಯಾಪಿಯಾಗಿದೆ. ಅವನ ಆಜ್ಞೆ ಆದೇಶಗಳನ್ನು ಉಲ್ಲಂಘಿಸಿದವನಿಗೆ, ಅವನಿಂದ ತನ್ನ ಅಪರಾಧವನ್ನು ಅಡಗಿಸುವ ಶಕ್ತಿಯಿಲ್ಲ ಮತ್ತು ಅವನ ವಿಚಾರಣೆಯಿಂದ ತಪ್ಪಿಸಿಕೊಳ್ಳಲೂ ಅವನಿಗೆ ಸಾಧ್ಯವಿಲ್ಲ. ಆದ್ದರಿಂದಲೇ ಈ ವಿಶ್ವಾಸದ ಬಗ್ಗೆ ಪದೇ ಪದೇ ಮಾನವನಿಗೆ ತಿಳಿಹೇಳಲಾಗಿದೆ. ಕುರ್‌ಆನಿನಲ್ಲಿ ಹೀಗೆ ಹೇಳಲಾಗಿದೆ.

**''ಇವು ಅಲ್ಲಾಹನು ನಿಶ್ಚಯಿಸಿದ ಮೇರೆಗಳು,..... ಅವುಗಳನ್ನು ಮೀರದಿರಿ.'' ಎಚ್ಚರಿಕೆ! ನೀವು ಮಾಡುವುದೆಲ್ಲವನ್ನೂ ಅಲ್ಲಾಹನು ನೋಡುತ್ತಿರುತ್ತಾನೆ. (ಅಲ್‌ಬಕರ: 229,233)**

# ಮಲಕ್‌ಗಳ (ದೇವಚರರ) ಮೇಲೆ ವಿಶ್ವಾಸ

ಮಲಕ್‌ಗಳ ಮೇಲಿನ ವಿಶ್ವಾಸವು ಅಲ್ಲಾಹನ ಮೇಲಿನ ವಿಶ್ವಾಸದ ಪೂರ್ಣತೆ ಹಾಗೂ ಅನುಬಂಧವಾಗಿದೆ. ಅದರ ಉದ್ದೇಶವು ಅವರ ಅಸ್ತಿತ್ವವಿದೆಯೆಂದು ಒಪ್ಪಿಕೊಳ್ಳುವುದಲ್ಲ, ಬದಲಾಗಿ ವರ ನೈಜ ಸ್ಥಾನಮಾನವೇನು ಎಂಬುದನ್ನು ಅರಿಯುವುದಾಗಿದೆ. ಅವುಗಳ ಬಗ್ಗೆ ಒಂದು ಅಸ್ಪಷ್ಟ ಕಲ್ಪನೆಯು ಎಲ್ಲ ಧರ್ಮಗಳಲ್ಲೂ ಜನಾಂಗಗಳಲ್ಲೂ ಇದೆ. ಅದೇ ಕಲ್ಪನೆಯನುಸಾರ ವಿವಿಧ ಧರ್ಮಗಳು ವಿವಿಧ ನಂಬಿಕೆಗಳ ಗೋಪುರಗಳನ್ನು ಕಟ್ಟಿವೆ. ಕೆಲವರ ಪ್ರಕಾರ, ಪ್ರಕೃತಿಯ ರಹಸ್ಯವಾಗಿರುವ ಅವರು ವಿಶ್ವವ್ಯವಸ್ಥೆಯನ್ನು ನಡೆಸುವವರಾಗಿದ್ದಾರೆ. ಇನ್ನು ಕೆಲವರ ಅಭಿಪ್ರಾಯದಲ್ಲಿ, ಅವರು ವಿವಿಧ ಇಲಾಖೆಗಳ ಮುಖ್ಯಸ್ಥರಾಗಿದ್ದಾರೆ. ಉದಾ: ಒಬ್ಬರು ಗಾಳಿಯ ಒಡೆಯರಾದರೆ, ಇನ್ನೊಬ್ಬರು ನೀರಿನ ಮಾಲಿಕ. ಒಬ್ಬರು ಬೆಳಕಿನ ತಾಪದ ಅಥವಾ ಬೆಂಕಿಯ ಯಜಮಾನ. ಕೆಲವರ ವಿಶ್ವಾಸವು ಅವರು ದೇವನ ಪ್ರತಿನಿಧಿ ಹಾಗೂ ಸಹಾಯಕರಾಗಿದ್ದಾರೆ. ಇನ್ನು ಕೆಲವರು ಅವರನ್ನು ದೇವಪುತ್ರಿ ಯರೆಂದು ಹೇಳುತ್ತಾರೆ. ಕೆಲವರ ಪ್ರಕಾರ ಅವರಿಗೆ ಭೌತಿಕ ಅಸ್ತಿತ್ವವಿದೆ. ಒಟ್ಟಿನಲ್ಲಿ ಮಲಕ್ ಗಳ ಕುರಿತು ಚಿತ್ರವಿಚಿತ್ರ ನಂಬಿಕೆಗಳನ್ನು ಇಡಲಾಗಿದೆ. ಅವರು ಒಂದಲ್ಲ ಒಂದು ರೀತಿಯಲ್ಲಿ ದೇವತ್ವದಲ್ಲಿ ಪಾಲುದಾರರೆಂದು ಭಾವಿಸಲಾಯಿತು. ಆದ್ದರಿಂದ ಅವರ ವಿಗ್ರಹಗಳನ್ನು ಮಾಡಿ ಅಥವಾ ಚಿತ್ರ ಬಿಡಿಸಿ ಅವರಿಗೆ ಪೂಜೆ ಸಲ್ಲಿಸಲಾಯಿತು. ಅವರಲ್ಲಿ ಪ್ರಾರ್ಥಿಸಲಾಯಿತು. ಅವರನ್ನು ಸಂಕಟಹರರು, ವಿಘ್ನ ನಿವಾರಕರು ಶಿಫಾರಸುದಾರರು ಇತ್ಯಾದಿಯಾಗಿ ಭಾವಿಸಲಾಯಿತು. ಅದರಿಂದಾಗಿಯೇ ಲೋಕದಲ್ಲಿ ಶಿರ್ಕ್ ಅಥವಾ ಬಹುದೇವಾರಾಧನೆ ವ್ಯಾಪಿಸಿತು.

ಕುರ್‌ಆನ್ ದೇವನ ಅಸ್ತಿತ್ವ, ಅವನ ಗುಣಗಳು ಹಾಗೂ ಅವನ ಕ್ರಿಯೆಗಳಲ್ಲಿ ಅಪ್ಪಟ ತೌಹೀದ್ ಅಥವ ಏಕದೇವತ್ವನ್ನು ಸ್ಥಾಪಿಸಿತು. ಇನ್ನೊಂದೆಡೆ ಶಿರ್ಕ್ ನುಸುಳಬಹುದಾದ ದ್ವಾರವನ್ನೇ ಮುಚ್ಚಲು ಮಲಕ್‌ಗಳ ಕುರಿತು ಸರಿಯಾದ ಕಲ್ಪನೆಯನ್ನು ಮೂಡಿಸಿತು. ಅದು ಮಲಕ್‌ಗಳ ವಾಸ್ತವಿಕತೆಯನ್ನು ವಿವರಿಸ ಹೋಗಿಲ್ಲ, ಅದರಿಂದ ಯಾವುದೇ ಪ್ರಯೋಜನವಿಲ್ಲ, ಅದನ್ನು ಮಾನವನಿಗೆ ಗ್ರಹಿಸಲಿಕ್ಕೂ ಸಾಧ್ಯವಿಲ್ಲ, ವಿಶ್ವ ವ್ಯವಸ್ಥೆಯಲ್ಲಿ

ಮಲಕ್‌ಗಳ ಸ್ಥಾನವೇನೆಂಬುದನ್ನು ಕುರ್‌ಆನ್ ಸ್ಪಷ್ಟವಾಗಿ ತಿಳಿಸಿತು. ಮಲಕ್‌ಗಳು ದೇವನ ಸಂತಾನವಲ್ಲ, ಅವನ ಸಹಭಾಗಿಗಳೂ ಅಲ್ಲ, ಬದಲಾಗಿ ಕುರ್‌ಆನ್ ಅವರನ್ನು ದೇವನ ದಾಸರು ಎಂದು ತಿಳಿಸಿತು. (ಪವಿತ್ರ ಕುರ್‌ಆನ್, 21:26-28)

ಅಲ್ಲಾಹನು ಅವರಿಗೆ ಯಾವ ಕಾರ್ಯವನ್ನು ವಹಿಸಿಕೊಟ್ಟಿರುತ್ತಾನೋ ಅದನ್ನು ಮಾತ್ರ ಅವರು ಮಾಡುತ್ತಾರೆ. ದೇವತ್ವದಲ್ಲಿ ಅವರ ಪಾಲುದಾರಿಕೆ ದೂರದ ಮಾತು. ದೇವನ ಆಜ್ಞೆಯನ್ನು ಕಿಂಚಿತ್ತಾದರೂ ಉಲ್ಲಂಘಿಸುವಷ್ಟು ಧೈರ್ಯವೂ ಅವರಿಗಿಲ್ಲ. ದೇವನ ಅನುಸರಣೆ ಮತ್ತು ಆರಾಧನೆ ಮಾತ್ರ ಅವರ ಕೆಲಸವಾಗಿದೆ. ಒಂದು ಕ್ಷಣದ ಮಟ್ಟಿಗೂ ಅವರು ತಮ್ಮ ಕರ್ತವ್ಯಗಳ ಬಗ್ಗೆ ನಿರ್ಲಕ್ಷ್ಯರಾಗಿರುವುದಿಲ್ಲ, ಪ್ರತಿಕ್ಷಣ ಅವರು ದೇವನನ್ನು ಸ್ತುತಿಸುತ್ತಿರುತ್ತಾರೆ. (ಪವಿತ್ರ ಕುರ್‌ಆನ್, 21:19-20) ಅವರು ದೇವನ ಆಜ್ಞೆಯನ್ನು ಮೀರುವುದಿಲ್ಲ, ಅವರಿಗೆ ಆಜ್ಞಾಪಿಸಿದ್ದನ್ನು ಮಾಡುತ್ತಾರೆ (ಪವಿತ್ರ ಕುರ್‌ಆನ್, 66:6)

ಈ ಕಲ್ಪನೆಯಿಂದಾಗಿ ಬಹುದೇವ ವಿಶ್ವಾಸಕ್ಕೆ ಯಾವುದೇ ಅವಕಾಶ ಉಳಿಯುವುದಿಲ್ಲ. ದೇವರೆಂದು ಕಲ್ಪಿಸಿಕೊಂಡವರೆಲ್ಲ ನಮ್ಮಂತೆಯೇ ಅಸಹಾಯಕ ದಾಸರಾಗಿರುವಾಗ, ನಮ್ಮ ಆರಾಧನೆ, ಪ್ರಾರ್ಥನೆ, ಸಹಾಯ, ಭರವಸೆಗೆ ಅವರ ಅಗತ್ಯವಾದರೂ ಏನಿದೆ? ಅವೆಲ್ಲ ಕೇವಲ ಅಲ್ಲಾಹನಿಗಾಗಿವೆ.

## ಮಾನವನ ಮತ್ತು ಮಲಕ್‌ಗಳ ವಿಶಿಷ್ಟ ಸ್ಥಾನಮಾನ

ಕುರ್‌ಆನ್ ಮಾನವನನ್ನು ಅತಿ ಶ್ರೇಷ್ಠ ಜೀವಿಯೆಂದು ಬಣ್ಣಿಸಿದೆ. ಪ್ರಥಮ ಮಾನವನನ್ನು ಸೃಷ್ಟಿಸಿದಾಗ, ಅವರ ಮುಂದೆ ಸಾಷ್ಟಾಂಗವೆರಗುವಂತೆ ಮಲಕ್‌ಗಳಿಗೆ ಆಜ್ಞಾಪಿಸಿದನು. ಇಬ್ಲೀಸನ ಹೊರತು ಎಲ್ಲರೂ ಸಾಷ್ಟಾಂಗವೆರಗಿದರು.

**''ತರುವಾಯ, ಆದಮರ ಮುಂದೆ ಬಾಗಿ ಎಂದು ನಾವು ದೇವಚರರಿಗೆ ಆಜ್ಞಾಪಿಸಿದಾಗ ಎಲ್ಲರೂ ಬಾಗಿದರು. ಆದರೆ ಇಬ್‌ಲೀಸನು ನಿರಾಕರಿಸಿದನು. ಅವನು ತನ್ನ ಶ್ರೇಷ್ಠತೆಯ ದುರಹಂಕಾರದಲ್ಲಿ ಬಿದ್ದು ಅವಿಧೇಯರಲ್ಲಾದನು.''(ಪವಿತ್ರ ಕುರ್‌ಆನ್, 2:34)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್, 7:11, 17:61, 18:50, 20:116, 38:71-74) ಮಲಕ್‌ಗಳು, ನಾವು ನಿನ್ನ ಸ್ತುತಿ ಸ್ತೋತ್ರಗೈಯುವವರಾಗಿರುವುದರಿಂದ ಶ್ರೇಷ್ಠರಾಗಿದ್ದೇವೆಂದು ವಾದಿಸಿದಾಗ, ಅಲ್ಲಾಹನು ಅದನ್ನು ಅಲ್ಲಗಳೆದನು. ಆದಮ್‌ರಿಗೆ(ಅ) ಸಕಲ ವಿಷಯಗಳ ಜ್ಞಾನ ನೀಡಿ, ಅವರಿಗೆ ನಿಮಗಿಂತ ಉನ್ನತ ಶ್ರೇಷ್ಠಸ್ಥಾನ ನೀಡಿದ್ದೇನೆಂದು ಸಾಬೀತುಪಡಿಸಿದನು. ಇಬ್ಲೀಸನು ತನ್ನ ಸೃಷ್ಟಿಯನ್ನು ಆಧಾರವಾಗಿಟ್ಟು ಆದಮ್‌ರ ಶ್ರೇಷ್ಠತೆಯನ್ನು ಒಪ್ಪಿಕೊಳ್ಳಲು ಮತ್ತು ಅವರ ಮುಂದೆ ಬಾಗಲು ನಿರಾಕರಿಸಿದನು. ಅದರಿಂದ ಆತನು ಶಾಶ್ವತವಾಗಿ ತಿರಸ್ಕರಿಸಲ್ಪಟ್ಟನು. ಇದು ಮಾನವನಲ್ಲಿ ಆತ್ಮ ಗೌರವದ ಭಾವನೆಯನ್ನು ಮೂಡಿಸಿತು. ಇನ್ನೊಂದೆಡೆ ಅವನ ಎಲ್ಲ ದಾಸ್ಯ ಭಾವನೆಗಳನ್ನು ದೇವನ

ದಾಸ್ಯದಲ್ಲಿ ಕೇಂದ್ರೀಕರಿಸಿತು. ಇದರಿಂದ ಪ್ರಪಂಚದ ಯಾವ ವಸ್ತುವೂ ಅಲ್ಲಾಹನ ಹೊರತು ಮಾನವನಿಗಿಂತ ಶ್ರೇಷ್ಠವಲ್ಲವೆಂದು ತಿಳಿದು ಬರುತ್ತದೆ. ಮಲಕ್‌ಗಳು ಅತಿ ಶ್ರೇಷ್ಠ ಜೀವಿಗಳಾಗಿದ್ದರೂ ಮಾನವನ ಮುಂದೆ ಬಾಗುವ ಮೂಲಕ ಅವನಷ್ಟು ಶ್ರೇಷ್ಠವಲ್ಲವೆಂದು ಸಾಬೀತುಗೊಂಡಿತು. ಹಾಗಿರುವಾಗ ಮಾನವ ಅಲ್ಲಾಹನ ಹೊರತು ಬೇರಾರದೇ ಮುಂದೆ ಸಾಷ್ಟಾಂಗವೆರಗುವುದು, ಅವರನ್ನು ಆರಾಧಿಸುವುದು, ಅವರಲ್ಲಿ ಪ್ರಾರ್ಥಿಸುವುದು ಹೇಗೆ ತಾನೇ ಸಾಧ್ಯ? ಈ ರೀತಿ ಮಲಕ್‌ಗಳ ಮೇಲಿನ ವಿಶ್ವಾಸದಿಂದ ಅಲ್ಲಾಹನ ಮೇಲಿನ ವಿಶ್ವಾಸವು ಅಪ್ಪಟವೂ ವಿಶಿಷ್ಟವೂ ಪರಿಪೂರ್ಣವೂ ಆಗುತ್ತದೆ.

ಎರಡನೆಯದಾಗಿ, ಅಲ್ಲಾಹನು ಅವರ ಮೂಲಕವೇ ತನ್ನ ಪ್ರವಾದಿಗಳಿಗೆ ತನ್ನ ಸೂಕ್ತಗಳನ್ನೂ ಆದೇಶಗಳನ್ನೂ ಕಳಿಸುತ್ತಾನೆಂದು ಕುರ್‌ಆನ್ ಹೇಳುತ್ತದೆ. ಅಷ್ಟೇ ಅಲ್ಲ, ಪ್ರವಾದಿಗಳಿಗೆ ಈ ಸಂದೇಶವನ್ನು ಯಾವುದೇ ಬಾಹ್ಯ ಹಸ್ತಕ್ಷೇಪವಿಲ್ಲದೆ, ಯಾವುದೇ ಸಂದೇಹಕ್ಕೆಡೆಯಿಲ್ಲದಂತೆ, ಮಿಶ್ರಣ ಕಲಬೆರಕೆಗೆ ಅವಕಾಶವಿಲ್ಲದಂತೆ ಪರಿಶುದ್ಧವಾಗಿ ತಲಪುವಂತೆ ಮಾಡುತ್ತಾನೆ. ಈ ಮಲಕ್‌ಗಳು ಸ್ವಯಂ ವಿಧೇಯರೂ, ಸತ್ಯಸಂಧರೂ ಆಗಿರುತ್ತಾರೆ. ಜೊತೆಗೆ ಎಲ್ಲ ರೀತಿಯ ಕೆಟ್ಟ ಒಲವು ಮತ್ತು ಪೈಶಾಚಿಕ ಉದ್ದೇಶಗಳಿಂದ ವಿರಹಿತರಾಗಿರುತ್ತಾರೆ. ಅಲ್ಲಾಹನನ್ನು ಅತಿಯಾಗಿ ಭಯಪಡುವವರೂ ಅವನ ಆಜ್ಞೆಗಳನ್ನು ಚಾಚೂ ತಪ್ಪದೆ ಪಾಲಿಸುವವರೂ ಆಗಿರುತ್ತಾರೆ. ಆದ್ದರಿಂದಲೇ ಅವರ ಮೂಲಕ ಕಳಿಸಲಾಗುವ ಸಂದೇಶದಲ್ಲಿ ಅವರೆಂದೂ ಹೆಚ್ಚು ಕಡಿಮೆ ಮಾಡುವುದಿಲ್ಲ, ಅವರಿಗೆ ಅದು ಸಾಧ್ಯವೂ ಅಲ್ಲ, ಅವರು ಎಷ್ಟು ಶಕ್ತಿಶಾಲಿಗಳೆಂದರೆ, ಅವರು ಸಂದೇಶ ಹೊತ್ತು ತರುವಾಗ ಮತ್ತು ಮೇಲುಸ್ತುವಾರಿ ನಡೆಸುವಾಗ ಯಾವುದೇ ಪೈಶಾಚಿಕ ಶಕ್ತಿಗಳು ಹಸ್ತಕ್ಷೇಪ ನಡೆಸಲಾರವು. ಇದನ್ನು ಕುರ್‌ಆನ್ ಅಲ್ಲಲ್ಲಿ ವಿವರಿಸಿದೆ. ಉದಾ:

**''ಇದು ಗೌರವಾನ್ವಿತವಾದ, ಉನ್ನತ ಮಟ್ಟದ, ಪಾವನವಾದ ಹೊತ್ತಗೆಗಳಲ್ಲಿ ಲಿಖಿತವಾಗಿದೆ ಮತ್ತು ಅವು ಮಾನ್ಯರಾದ ಶಿಷ್ಟಲಿಪಿಕಾರರ ಕೈಗಳಲ್ಲಿರುತ್ತವೆ.''**

**(ಪವಿತ್ರ ಕುರ್‌ಆನ್, 80:13-16)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್, 72:26-28, 56:77-80) ಇದರಿಂದ ತಿಳಿದು ಬರುವುದೇನೆಂದರೆ ಮಲಕ್‌ಗಳ ಮೇಲಿನ ವಿಶ್ವಾಸವು ಕೇವಲ ಅಲ್ಲಾಹನ ಮೇಲಿನ ವಿಶ್ವಾಸಕ್ಕಷ್ಟೇ ಅಲ್ಲ, ಗ್ರಂಥಗಳ ಮತ್ತು ಪ್ರವಾದಿಗಳ ಮೇಲಿನ ವಿಶ್ವಾಸಕ್ಕೂ ಅಗತ್ಯವಾಗಿದೆ. ಈ ವಿಶ್ವಾಸದ ಅರ್ಥವೇನೆಂದರೆ ದೇವನ ಸಂದೇಶವು ಯಾವ ಮಾಧ್ಯಮದ ಮೂಲಕ ಅವನ ಪ್ರವಾದಿಗಳಿಗೆ ತಲಪುತ್ತದೋ ಅದು ವಿಶ್ವಾಸಾರ್ಹವಾಗಿದೆ ಎಂದು ಅಂಗೀಕರಿಸುವುದಾಗಿದೆ. ಈ ನಂಬಿಕೆಯಿಲ್ಲದಿದ್ದರೆ ದೇವನ ಸಂದೇಶ ಮತ್ತು ಅವನ ಪ್ರವಾದಿಗಳ ಮೇಲಿನ ವಿಶ್ವಾಸವು ಪೂರ್ಣಗೊಳ್ಳುವುದಿಲ್ಲ.

ಮೂರನೆಯದಾಗಿ, ಈ ಮಲಕ್‌ಗಳು ಅಲ್ಲಾಹನ ಸಾಮ್ರಾಜ್ಯದ ಸಿಬ್ಬಂದಿಗಳೆಂದ ಕುರ್‌ಆನ್ ಹೇಳುತ್ತದೆ. ಅವರಿಗೆ ಅಲ್ಲಾಹನು ವಹಿಸಿಕೊಡುವ ಕೆಲಸಗಳನ್ನು ಸರಿಯಾಗಿಯೆ ಮಾಡುತ್ತಾರೆ. ಯಾತನೆ ಎರಗಿಸುವುದು, ಅನುಗ್ರಹಗಳನ್ನು ಸುರಿಸುವುದು, ಜನರ ಪ್ರಾ ತೆಗೆಯುವುದು, ಪ್ರಾಣ ರಕ್ಷಣೆ ಮಾಡುವುದು, ಮಳೆ ಬರಿಸುವುದು, ಬರಗಾಲ ತರುವುದ ಇತ್ಯಾದಿ ಅವರ ಕೆಲಸಗಳಾಗಿವೆ. ಅದೇ ರೀತಿ ಅವರು ಪ್ರತಿಯೊಬ್ಬ ಮನುಷ್ಯನ ಕರ್ಮ ಮತ್ತು ಮಾತುಗಳ ಸಂಪೂರ್ಣ ದಾಖಲೆ ಇಡುತ್ತಾರೆ. ಒಂದೊಂದು ಚಲನೆಯನ್ನ ಗಮನಿಸುತ್ತಿರುತ್ತಾರೆ. ಮಾನವನು ತನಗೆ ನೀಡಲಾಗಿರುವ ಜೀವಿತಾವಧಿಯಲ್ಲಿ ಏನೆಲ ಮಾಡುತ್ತಾನೋ ಅವನ ಎಲ್ಲ ಒಳ್ಳೆಯ ಮತ್ತು ಕೆಟ್ಟ ಕಾರ್ಯಗಳನ್ನು ಅವರು ನೋಡುವುದ ಮಾತ್ರವಲ್ಲ, ಅಲ್ಲಾಹನ ಅನುಜ್ಞೆ ಪ್ರಕಾರ ಅವನೊಂದಿಗೆ ಸಹಕರಿಸುತ್ತಾರೆ. ಅವ ಜೀವಿತಾವಧಿ ಕೊನೆಗೊಂಡ ಕೂಡಲೇ ಇದೇ ಮಲಕ್‌ಗಳು ಅವನನ್ನು ಸೆರೆ ಹಿಡಿಯುತ್ತಾರೆ ವಿವಿಧ ರೀತಿ ಯಲ್ಲಿ ಮಾನವನ ಪ್ರಾಣ ಹರಣ ಮಾಡುತ್ತಾರೆ. ಇದನ್ನು ಕುರ್‌ಆನ್ ಅಲ್ಲ ಪ್ರಸ್ತಾಪಿಸಿದೆ.

**''ನಿಮ್ಮ ಮೇಲೆ ನಿಯುಕ್ತನಾಗಿರುವ ಮೃತ್ಯುದೂತನು ನಿಮ್ಮನ್ನು ಸರ್ವ ಸಂಪೂರ್ಣವಾ ತನ್ನ ಹಿಡಿತಕ್ಕೆ ತೆಗೆದುಕೊಳ್ಳುವನು. ತರುವಾಯ ನೀವು ನಿಮ್ಮ ಪ್ರಭುವಿನ ಕಡೆ ಮರಳಿಸಲ್ಪಡುವಿರಿ ಎಂದು ಇವರೊಡನೆ ಹೇಳಿರಿ.'' (ಪವಿತ್ರ ಕುರ್‌ಆನ್, 31:11**

ಈ ನಿಟ್ಟಿನಲ್ಲಿ ಮಲಕ್‌ಗಳ ಮೇಲಿನ ವಿಶ್ವಾಸವು ಅಲ್ಲಾಹನ ಮೇಲಿನ ವಿಶ್ವಾಸದ ಒಂದು ಅನಿವಾರ್ಯ ಭಾಗವಾಗಿದೆ. ಮಾನವನು ಜಗದೊಡೆಯನ ಜೊತೆಗೇ ಅವನ ಸೇವಕರನ್ನು ಅರಿತಿರಬೇಕಾದುದು ಅಗತ್ಯ. ಇದರ ಹೊರತು ಮಾನವ ಈ ಪ್ರಪಂಚದಲ್ಲಿ ತನ್ನ ನೈಜ ಸ್ಥಾನವನ್ನು ಗುರುತಿಸಲಾರ ಮತ್ತು ಅದರಂತೆ ಕೆಲಸ ಮಾಡಲಾರ.

# ಪ್ರವಾದಿಗಳ ಮೇಲೆ ವಿಶ್ವಾಸ

ಏಕದೇವತ್ವದ ಬಳಿಕ ಇಸ್ಲಾಮಿನ ಎರಡನೆಯ ಮೂಲಭೂತ ವಿಶ್ವಾಸ ಪ್ರವಾದಿತ್ವವಾಗಿದೆ. ವಿಶ್ವಾಸದಲ್ಲಿ ಏಕದೇವತ್ವವು ಧರ್ಮದ ಬುನಾದಿಯಾದರೆ, ಅನುಸರಣೆಯಲ್ಲಿ ಪ್ರವಾದಿತ್ವವೇ ಬುನಾದಿಯಾಗಿದೆ. ಅಲ್ಲಾಹನ ಸಂದೇಶವನ್ನು ಅವನ ದಾಸರಿಗೆ ತಲುಪಿಸುವುದು, ಅದರಂತೆ ಜನರ ಮಾರ್ಗದರ್ಶನ ಮಾಡುವುದು ಪ್ರವಾದಿಯ ಕೆಲಸವಾಗಿದೆ. ಪ್ರವಾದಿ ಅಥವಾ ಸಂದೇಶವಾಹಕರನ್ನು ಕುರ್‌ಆನ್ 'ಹಾದೀ'(ನೇರಮಾರ್ಗ ತೋರಿಸುವವನು) ಎಂದು ಕರೆದಿದೆ.

ಅಲ್ಲಾಹನು ಮಾನವನೊಳಗೇ ಓರ್ವ ಮಾರ್ಗದರ್ಶಿಯನ್ನು ಇರಿಸಿದ್ದಾನೆ. ನೈಸರ್ಗಿಕವಾಗಿ ಅದು ಒಳಿತು-ಕೆಡುಕು ಹಾಗೂ ಸರಿ-ತಪ್ಪು ಕರ್ಮಗಳ ಮಧ್ಯೆ ವ್ಯತ್ಯಾಸ ಕಲ್ಪಿಸಿ ಮಾನವನಿಗೆ ಆಚಾರ-ವಿಚಾರಗಳ ನೇರ ಮಾರ್ಗವನ್ನು ತೋರಿಸುತ್ತದೆ. (ಪವಿತ್ರ **ಕುರ್‌ಆನ್, 91:7-10)** ಆದರೆ ಈ ಮಾರ್ಗದರ್ಶಿಯ ಮಾರ್ಗದರ್ಶನ ಸ್ಪಷ್ಟವಾಗಿರುವುದಿಲ್ಲ. ಅದರ ಜೊತೆಗೆ ಅನೇಕ ಬಾಹ್ಯಶಕ್ತಿಗಳು ಮಾನವನನ್ನು ದುಷ್ಕರ್ಮಗಳ ಕಡೆಗೆ ಸೆಳೆಯುತ್ತಿರುತ್ತದೆ. ಈ ಕಾರಣದಿಂದಾಗಿ ಈ ನೈಸರ್ಗಿಕ ಮಾರ್ಗದರ್ಶಿಯ ಮಾರ್ಗ ದರ್ಶನವು ಅನೇಕ ವಕ್ರ ಮಾರ್ಗಗಳ ಮಧ್ಯದಿಂದ ಸತ್ಯದ ನೇರ ಮಾರ್ಗವನ್ನು ಕಂಡು ಹಿಡಿದು ಅದರಲ್ಲಿ ನಿರ್ಭೀತಿಯಿಂದ ನಡೆಯಲು ಮಾನವನಿಗೆ ಸಾಲದು. ಆದ್ದರಿಂದ ಅಲ್ಲಾಹನು ಅದನ್ನು ಹೊರಗಿನಿಂದ ಪೂರೈಸಿದನು. ಈ ಆಂತರಿಕ ಮಾರ್ಗದರ್ಶಿಗೆ ತಮ್ಮ ಜ್ಞಾನದ ಬೆಳಕಿನಲ್ಲಿ ಸಹಾಯ ಮಾಡಲು ಪ್ರವಾದಿಗಳನ್ನು ಕಳಿಸಿದನು. ಅವರು ಸ್ಪಷ್ಟ ಸಂಕೇತಗಳ ಮೂಲಕ ಅಜ್ಞಾನದ ಅಂಧಕಾರ ಮತ್ತು ದುಷ್ಟ ಶಕ್ತಿಗಳಡಿಯಲ್ಲಿ ಹುದುಗಿರುವ ಅಸ್ಪಷ್ಟ ನೈಸರ್ಗಿಕ ಮಾರ್ಗದರ್ಶಿಯನ್ನು ಮಾನವನಿಗೆ ತೋರಿಸಿ ಕೊಡುತ್ತಾರೆ.

ಪ್ರವಾದಿತ್ವದ ಪದವಿಯಲ್ಲಿ ನೇಮಿಸಲ್ಪಟ್ಟಿದ್ದವರಿಗೆಲ್ಲ ಅಲ್ಲಾಹನ ವತಿಯಿಂದ ವಿಶೇಷ ಜ್ಞಾನ ಮತ್ತು ದೃಕ್‌ಶಕ್ತಿ ನೀಡಲಾಗುತ್ತದೆ. ಆದ್ದರಿಂದ ಅವರು ಅಂದಾಜಿನಂತೆ ಮಾತಾಡುವುದಿಲ್ಲ, ಬದಲಾಗಿ ಪೂರ್ಣ ಜ್ಞಾನದೊಂದಿಗೆ ಮಾನವರಿಗೆ ತಿಳಿದಿರದ ಮತ್ತು

ಅವರು ಭಿನ್ನಾಭಿಪ್ರಾಯ ಹೊಂದಿರುವಂತಹ ವಿಷಯಗಳ ವಾಸ್ತವಿಕತೆಯನ್ನು ತಿಳಿಯುತ್ತಾ ತಮ್ಮ ದೃಕ್‌ಶಕ್ತಿಯಿಂದ ಅವರು ವಕ್ರ ಮಾರ್ಗಗಳ ಮಧ್ಯದಿಂದ ಸತ್ಯದ ನೇರ ಮತ್ತು ಸ್ಪ ಮಾರ್ಗವನ್ನು ಕಾಣುತ್ತಾರೆ.

## ಪ್ರವಾದಿಗಳು ಮತ್ತು ಸಾಮಾನ್ಯ ಮುಖಂಡರ ವ್ಯತ್ಯಾಸ

ಬಾಹ್ಯ ಮಾರ್ಗದರ್ಶಿಯ ಅಗತ್ಯವನ್ನು ಎಲ್ಲ ಕಾಲಗಳಲ್ಲೂ ಮಾನವನ ಅಂಗೀಕರಿಸಿದ್ದಾನೆ. ಕೇವಲ ಆಂತರಿಕ ಮಾರ್ಗದರ್ಶಿಯ ನಿರ್ದೇಶನಗಳು ಸಾಕೆಂದ ಅವನೆಂದೂ ವಾದಿಸಿಲ್ಲ, ತಂದೆ-ತಾತಂದಿರು, ಕುಟುಂಬ-ಗೋತ್ರಗಳು, ಜನಾಂಗ ಹಿರಿಯರು, ಗುರುಗಳು, ವಿದ್ವಾಂಸರು, ಧಾರ್ಮಿಕ ಮುಖಂಡರು, ರಾಜಕೀಯ ನಾಯಕರು ಸಮಾಜ ಸುಧಾರಕರು- ಹೀಗೆ ಅನೇಕ ರೀತಿಯ ಜನರ ಜ್ಞಾನ ಶಕ್ತಿಯನ್ನು ನಂಬಿ ಅವರನ ತಮ್ಮ ಮಾರ್ಗದರ್ಶಿಗಳನ್ನಾಗಿ ಮಾಡಿ ಅವರನ್ನು ಅನುಸರಿಸಿದ್ದಾನೆ. ಆದರೆ ಓವ ಪ್ರವಾದಿಯನ್ನು ಈ ಎಲ್ಲ ಮಾರ್ಗದರ್ಶಕರಿಂದ ಪ್ರತ್ಯೇಕಿಸುವ ವಸ್ತು 'ದಿವ್ಯ ಜ್ಞಾನ'ವಾಗಿದ ಇತರರ ಬಳಿ ಇದು ಇಲ್ಲ, ಅವರು ಕೇವಲ ಊಹೆ ಮತ್ತು ಅಂದಾಜಿನಂತೆ ಮಾತಾಡುತ್ತಾರ ಅದರಲ್ಲಿ ಅವರ ಸ್ವಂತ ಭಾವನೆಗಳೂ ಸೇರಿರುತ್ತವೆ. ಆದ್ದರಿಂದ ಅವರು ಮಾಡುವ ವಿಶ್ವಾಸ- ಆಚಾರಗಳ ನಿಯಮಗಳಲ್ಲಿ ಸತ್ಯ-ಅಸತ್ಯ ಎರಡೂ ಸೇರಿಕೊಂಡಿರುತ್ತದೆ. ಪೂರ್ಣ ಸತ್ಯ ಅವರು ಸ್ಥಾಪಿಸಿದ ಮಾರ್ಗಗಳಲ್ಲಿ ಇರುವುದಿಲ್ಲ, ಇದರ ಕುರಿತೇ ಕುರ್‌ಆನ್ ಪದೆ ಪದೇ ಎಚ್ಚರಿಸುತ್ತದೆ. ಉದಾ:

**''ಇನ್ನು ಅವರು ನಿಮ್ಮ ಬೇಡಿಕೆಯನ್ನು ಪೂರ್ತಿಗೊಳಿಸದಿದ್ದರೆ ವಾಸ್ತವದಲ್ಲಿ ಅವರು ತಮ್ಮ ಸ್ವೇಚ್ಛೆಗಳ ದಾಸರಾಗಿದ್ದಾರೆಂದು ತಿಳಿದುಕೊಳ್ಳಿರಿ. ದೇವ ಮಾರ್ಗದರ್ಶನದ ಹೊರತು ಕೇವಲ ತನ್ನ ಸ್ವೇಚ್ಛೆಗಳನ್ನು ಅನುಸರಿಸುವವನಿಗಿಂತ ಹೆಚ್ಚು ದಾರಿಗೆಟ್ಟವನು ಇನ್ನಾರಿರಬಹುದು? ಅಲ್ಲಾಹ್ ಇಂತಹ ಅಕ್ರಮಿಗಳಿಗೆ ಎಷ್ಟು ಮಾತ್ರಕ್ಕೂ ಸನ್ಮಾರ್ಗದರ್ಶನ ನೀಡುವುದಿಲ್ಲ.''**

**(ಪವಿತ್ರ ಕುರ್‌ಆನ್, 28:50)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್, 30:29, 53:23,28) ಇದಕ್ಕೆ ವ್ಯತಿರಿಕ್ತವಾಗಿ ಪ್ರವಾದಿಗೆ ಅಲ್ಲಾಹನ ವತಿಯಿಂದ 'ದಿವ್ಯ ಜ್ಞಾನ' ನೀಡಲಾಗುತ್ತದೆ. ಅವರ ಮಾರ್ಗದರ್ಶನವು ಅಂದಾಜು ಮತ್ತು ಭಾವನೆಗಳಿಂದಾಗಿರುವುದಿಲ್ಲ, ಬದಲಾಗಿ ಅಲ್ಲಾಹನು ನೀಡಿರುವ ಜ್ಞಾನದ ಬೆಳಕಿನಲ್ಲಿರುತ್ತದೆ. ಕುರ್‌ಆನ್ ಎಲ್ಲೆಲ್ಲ ಪ್ರವಾದಿಗಳನ್ನು ಸಂದೇಶವಾಹಕತ್ವದ ಪದವಿಗೆ ನೇಮಿಸಿರುವುದಾಗಿ ಪ್ರಸ್ತಾಪಿಸಿದೆಯೋ ಅಲ್ಲೆಲ್ಲ ಅವರಿಗೆ 'ದಿವ್ಯಜ್ಞಾನ' ನೀಡಲಾಗಿದೆಯೆಂದು ಹೇಳಿದೆ. ಇಬ್ರಾಹೀಮ್‌ರವರ(ಅ) ಪ್ರವಾದಿತ್ವದ ಕುರಿತು ಹೀಗೆ ಹೇಳಿದೆ:

''ಅಪ್ಪಾ, ತಮಗೆ ಬಂದಿರದ ಜ್ಞಾನವೊಂದು ನನಗೆ ಬಂದಿವೆ. ತಾವು ನನ್ನನ್ನು ಅನುಸರಿಸಿರಿ. ನಾನು ತಮಗೆ ನೇರಮಾರ್ಗವನ್ನು ತೋರಿಸುವೆನು.''

(ಪವಿತ್ರ ಕುರ್‌ಆನ್, 19:43)

ಅದೇ ರೀತಿ ಲೂತ್(ಅ), ಮೂಸಾ(ಅ), ದಾವೂದ್ ಮತ್ತು ಸುಲೈಮಾನ್(ಅ) ಹಾಗೂ ಪ್ರವಾದಿ ಮುಹಮ್ಮದ್(ಸ) ಅವರ ಕುರಿತೂ ಇಂತಹದೇ ಮಾತನ್ನು ಹೇಳಿದೆ. ನೋಡಿರಿ. ಪವಿತ್ರ ಕುರ್‌ಆನ್, 2:120, 21:73, 79, 28:14)

''ಯಹೂದಿಯರೂ ಕ್ರೈಸ್ತರೂ ನೀವು ಅವರ ಮಾರ್ಗವನ್ನು ಅನುಸರಿಸುವವರೆಗೂ ನಿಮ್ಮ ಬಗ್ಗೆ ಎಂದೂ ಪ್ರಸನ್ನರಾಗರು. ಅಲ್ಲಾಹ್ ತೋರಿಸಿದ ಮಾರ್ಗದರ್ಶನವೇ ವಾಸ್ತವಿಕ ಮಾರ್ಗದರ್ಶನವೆಂದು ಸ್ಪಷ್ಟವಾಗಿ ಹೇಳಿಬಿಡಿರಿ. ನಿಮ್ಮ ಬಳಿಗೆ ಬಂದಿರುವ ದಿವ್ಯಜ್ಞಾನದ ಬಳಿಕವೂ ನೀವು ಅವರ ಚಿತ್ತಾಕಾಂಕ್ಷೆಗಳನ್ನನುಸರಿಸಿದರೆ ಅಲ್ಲಾಹನ ಹಿಡಿತದಿಂದ ರಕ್ಷಿಸಲು ಯಾವನೊಬ್ಬ ರಕ್ಷಕ ಮಿತ್ರನಾಗಲಿ, ಸಹಾಯಕನಾಗಲಿ ನಿಮಗೆ ಇರಲಾರನು.''

(ಪವಿತ್ರ ಕುರ್‌ಆನ್, 2:120)

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್, 21:73,79, 28:14) ಪ್ರಸ್ತುತ ಸೂಕ್ತಗಳಿಂದ ಸಾಮಾನ್ಯ ಜನನಾಯಕರಿಗಿಲ್ಲದ 'ದಿವ್ಯಜ್ಞಾನ'ವು ಪ್ರವಾದಿಗಳಿಗೆ ಲಭಿಸಿದ್ದು, ಇದನ್ನು ಅಲ್ಲಾಹನೇ ನೀಡಿದ್ದಾನೆಂಬುದು ಸ್ಪಷ್ಟವಾಗಿ ತಿಳಿಯಿತು.

## ಎರಡು ವಿಶ್ವಾಸಗಳ ಪರಸ್ಪರ ಸಂಬಂಧ

ಪ್ರವಾದಿಗಳಿಗೆ, ಸಾಮಾನ್ಯ ಜನರಿಗೆ ಲಭಿಸದಂತಹ ಜ್ಞಾನವಿದೆ. ಅವರಿಗೆ ಸಾಮಾನ್ಯ ಜನರಿಗೆ ನೀಡದಂತಹ ಅಂತರ್ ದೃಷ್ಟಿ ನೀಡಲ್ಪಟ್ಟಿರುವಾಗ, ದೇವನ ಕುರಿತು ಪ್ರವಾದಿಗಳು ತಿಳಿಸಿದ ವಿಶ್ವಾಸ ಮಾತ್ರ ಸರಿಯಾಗಿರಬಲ್ಲುದು. ಒಬ್ಬನು ತಾನೇ ಸ್ವಯಂ ಚಿಂತನೆ ನಡೆಸಿ ಅಥವಾ ಇತರ ದಾರ್ಶನಿಕರ ಶಿಕ್ಷಣಗಳಿಂದ ಯಾವುದಾದರೂ ವಿಶ್ವಾಸವನ್ನು ಹೊಂದಿದರೆ ದೇವನ ಬಗ್ಗೆ ಅವನ ವಿಶ್ವಾಸ ಸರಿಯಾಗಲಾರದು. ಮಾತ್ರವಲ್ಲ, ಅವನಿಗೆ ಪರೋಕ್ಷದ ಇನ್ನಿತರ ವಿಷಯಗಳೂ ತಿಳಿಯಲಾರದು. ಆದ್ದರಿಂದ ಉಳಿದೆಲ್ಲ ನಂಬಿಕೆಗಳ ಸ್ವಸ್ಥತೆಯು ಪ್ರವಾದಿಗಳ ಮೇಲಿನ ವಿಶ್ವಾಸವನ್ನು ಅವಲಂಬಿಸಿದೆ. ಈ ಮಾಧ್ಯಮವನ್ನು ಕೈಬಿಟ್ಟು ನೈಜ ಜ್ಞಾನವನ್ನು ಗಳಿಸುವುದು ಸಾಧ್ಯವೇ ಇಲ್ಲ. ಆದ್ದರಿಂದ ಕುರ್‌ಆನಿನಲ್ಲಿ ಪ್ರವಾದಿಗಳ ಮೇಲಿನ ವಿಶ್ವಾಸವನ್ನು ಪ್ರತಿಪಾದಿಸುವ ನೂರಾರು ಸೂಕ್ತಗಳನ್ನು ಕಾಣಬಹುದು. ಇಲ್ಲಿ ಎಂದೆರಡನ್ನು ಮಾತ್ರ ಸೂಚಿಸಲಾಗುತ್ತದೆ. (ಅತ್ತಲಾಕ್: 8, ಅನ್ನಿಸಾ: 115, 148-152)

ಇದರಿಂದ, ಅಲ್ಲಾಹನ ಮೇಲಿನ ವಿಶ್ವಾಸ ಮತ್ತು ಪ್ರವಾದಿಗಳ ಮೇಲಿನ ವಿಶ್ವಾಸಕ್ಕೆ ಪರಸ್ಪರ ಮುರಿಯಲಾಗದ ಅಭೇದ್ಯ ಸಂಬಂಧವಿದೆಯೆಂದು ಸ್ಪಷ್ಟವಾಗುತ್ತದೆ. ಒಬ್ಬನು ಪ್ರವಾದಿಗಳನ್ನು ನಿರಾಕರಿಸುತ್ತಾನೆ. ಅವರ ಶಿಕ್ಷಣಗಳನ್ನು ಒಪ್ಪುವುದಿಲ್ಲವೆಂದಾದರೆ, ಅವನು

ದೇವನನ್ನು ನಂಬಲಿ, ಬಿಡಲಿ ಎರಡೂ ಸ್ಥಿತಿಗಳಲ್ಲಿ ಅವನಿಗೆ ಪಥಭ್ರಷ್ಟತೆ ಕಟ್ಟಿಟ್ಟ ಬು
ಏಕೆಂದರೆ ದಿವ್ಯ ಜ್ಞಾನದ ಹೊರತಾಗಿರುವ ದೇವ ವಿಶ್ವಾಸವು ಖಂಡಿತ ಸರಿಯಾಗಿರಲಾರದ
ಅದು ಏಕದೇವ ವಿಶ್ವಾಸವೇ ಆಗಿದ್ದರೂ ಸರಿ.

## ಮಾನವ ಏಕತೆ

ಪ್ರವಾದಿಗಳ ಮೇಲಿನ ವಿಶ್ವಾಸದಿಂದ ಮಾನವ ಕುಲವು ಒಂದು ನಂಬಿಕೆಯ ಮೇ ಒಗ್ಗಟ್ಟಾಗಬಹುದು. ಭಿನ್ನಾಭಿಪ್ರಾಯಗಳ ಮೂಲ ಅಜ್ಞಾನವಾಗಿದೆ. ತಮಗೆ ತಿಳಿದಿರ ವಿಷಯದಲ್ಲಿ ಊಹೆಯ ಆಧಾರದಲ್ಲಿ ಜನರು ವಿವಿಧ ಅಭಿಪ್ರಾಯಗಳನ್ನು ತಾಳುವರ ಅದರಿಂದ ಅವರ ಮಧ್ಯೆ ಭಿನ್ನಾಭಿಪ್ರಾಯಗಳು ತಲೆದೋರಬಹುದು. ಊಹೆ ಮ ಅಂದಾಜಿನ ಮೇಲೆ ಅಭಿಪ್ರಾಯ ತಾಳುವುದೆಂದರೆ ಅಂಧಕಾರದಲ್ಲಿ ಪರದಾಡುವುದ ಸಮಾನವಾಗಿದೆ.

ಬೆಳಕಿಲ್ಲದ ಕಡೆಯಲ್ಲಿ ಒಂದು ವಸ್ತುವನ್ನು ಐವತ್ತು ಮಂದಿ ಮುಟ್ಟಿ ನೋಡಿ 5 ಅಭಿಪ್ರಾಯಗಳನ್ನು ಪ್ರಕಟಿಸುವರು. ಬೆಳಕು ಬಂದ ಕೂಡಲೇ ಈ ಭಿನ್ನಾಭಿಪ್ರಾಯಗಳ ಉಳಿಯಲಾರದು. ಕಣ್ಣುಳ್ಳವರೆಲ್ಲ ಒಂದೇ ಫಲಿತಾಂಶಕ್ಕೆ ಬದ್ಧರಾಗುವರು. ಪ್ರವಾದಿಗಳ ದಿವ್ಯಜ್ಞಾನ ಮತ್ತು ಅಂತರ್‌ದೃಷ್ಟಿಯ 'ಪ್ರಕಾಶ' ಲಭಿಸಿದಾಗ ಅವರ ಅಭಿಪ್ರಾಯಗಳು ಅವರ ಶಿಕ್ಷಣಗಳು ಮತ್ತು ಅವರ ವಿಧಾನಗಳು ವಿಭಿನ್ನವಾಗಿರಲು ಸಾಧ್ಯವಿಲ್ಲ, ಆದ್ದರಿಂದಲ ಕುರ್‌ಆನ್ ಹೇಳುತ್ತದೆ. ಎಲ್ಲ ಪ್ರವಾದಿಗಳೂ ಒಂದೇ ಗುಂಪಿನವರಾಗಿದ್ದಾರೆ. ಎಲ್ಲ ಶಿಕ್ಷಣವೂ ಒಂದೇ, ಎಲ್ಲರ ಜೀವನ ವಿಧಾನ (ಧರ್ಮ) ಒಂದೇ, ಎಲ್ಲರೂ ಸನ್ಮಾರ್ಗ ಕಡೆಗೆ ಕರೆ ನೀಡುವವರಾಗಿದ್ದಾರೆ. ಆದ್ದರಿಂದ ಎಲ್ಲರ ಮೇಲೂ ವಿಶ್ವಾಸ ತಾಳಬೇಕಾದುದಗತ್ಯ ಪ್ರವಾದಿಗಳ ಪೈಕಿ ಒಬ್ಬರನ್ನು ನಿರಾಕರಿಸಿದರೆ ಎಲ್ಲರನ್ನೂ ನಿರಾಕರಿಸಿದಂತೆ. ಅದರಿಂ ಅವನು ಅಪರಾಧಿಯಾಗುವನು. ಅವನ ಮನಸ್ಸಿನಲ್ಲಿ ಈಮಾನ್ ಇರಲಾರದು. ಏಕೆಂದ ಯಾವ ಪ್ರವಾದಿಯ ಶಿಕ್ಷಣವನ್ನು ಅವನು ನಿರಾಕರಿಸುತ್ತಾನೋ ಅದು ಕೇವಲ ಆ ಒ ಪ್ರವಾದಿಯ ಶಿಕ್ಷಣವಲ್ಲ, ಬದಲಾಗಿ ಅದು ಎಲ್ಲ ಪ್ರವಾದಿಗಳ ಶಿಕ್ಷಣವಾಗಿದೆ.

**''ಓ ಪೈಗಂಬರರೇ, ನಾವು ನೂಹ್ ಮತ್ತು ಅನಂತರದ ಪ್ರವಾದಿಗಳ ಕಡೆ 'ದಿವ್ಯವಾಣಿ' ಕಳುಹಿಸಿದಂತೆಯೇ ನಿಮ್ಮ ಕಡೆಗೂ 'ದಿವ್ಯವಾಣಿ' ಕಳುಹಿಸಿರುತ್ತೇವೆ. ನಾ ಇಬ್ರಾಹೀಮ್, ಇಸ್ಮಾಈಲ್, ಇಸ್ಹಾಕ್, ಯಅ್‌ಕೂಬ್ ಮತ್ತು ಯಅ್‌ಕೂಬರ ಸಂತತಿ ಈಸಾ, ಅಯ್ಯೂಬ್, ಯೂನುಸ್, ಹಾರೂನ್ ಮತ್ತು ಸುಲೈಮಾನರ ಕಡೆಗ 'ದಿವ್ಯವಾಣಿ'ಕಳುಹಿಸಿದೆವು. ನಾವು ದಾವೂದರಿಗೆ ಝುಬೂರ್ ನೀಡಿದೆವು. ನಾವು ಇದಕ್ಕಿಂ**

**ಮುಂಚೆ ನಿಮ್ಮ ಮುಂದೆ ಪ್ರಸ್ತಾಪಿಸಿದ್ದ ಸಂದೇಶವಾಹಕರ ಮೇಲೂ ನಿಮ್ಮ ಮುಂದೆ ಪ್ರಸ್ತಾಪಿಸದೆ ಇದ್ದ ಸಂದೇಶವಾಹಕರ ಮೇಲೂ 'ದಿವ್ಯವಾಣಿ' ಇಳಿಸಿದೆವು. ಅಲ್ಲಾಹ್ ಮೂಸಾರೊಡನೆ, ಮಾತನಾಡುವ ರೀತಿಯಲ್ಲೇ ಮಾತನಾಡಿದನು.''**

**(ಪವಿತ್ರ ಕುರ್‌ಆನ್, 4:163-164, 23:51-53,)**

ಇಂತಹ ಇನ್ನೂ ಅನೇಕ ಸೂಕ್ತಗಳು ಕುರ್‌ಆನಿನಲ್ಲಿವೆ. ಅವುಗಳಿಂದೆಲ್ಲ ತಿಳಿಯುವ ವಿಚಾರವೆಂದರೆ, ಎಲ್ಲ ಪ್ರವಾದಿಗಳೂ ಒಂದೇ ಸತ್ಯಧರ್ಮದ ಕಡೆಗೆ ಕರೆ ನೀಡಿದ್ದಾರೆ, ಎಲ್ಲ ಜನಾಂಗಗಳ ಕಡೆಗೂ ಅವರು ಕಳಿಸಲ್ಪಟ್ಟಿದ್ದಾರೆ. **(ಯೂನುಸ್: 17, ಅರ್ರಅ್‌ದ್:7)** ಅವರ ಪೈಕಿ ಕುರ್‌ಆನಿನಲ್ಲಿ ಪ್ರಸ್ತಾಪಿಸಲಾಗಿರುವವರ ಮೇಲೆ ವಿಶ್ವಾಸವಿರಿಸುವುದು ಕಡ್ಡಾಯ. ಇನ್ನು ಕುರ್‌ಆನ್ ಹೆಸರು ಪ್ರಸ್ತಾಪಿಸಿಲ್ಲದ ಪ್ರವಾದಿಗಳ ಮತ್ತು ಸುಧಾರಕರ ಕುರಿತು ಸರಿಯಾದ ನಿಲುವು, ನಂಬಿಕೆ ಏನಾಗಿರಬೇಕು? ಅವರೆಲ್ಲರೂ ಇಸ್ಲಾಮಿನ ಕಡೆಗೇ ಕರೆ ನೀಡುವವ ರಾಗಿದ್ದರು. ಆದರೆ ಅವರ ಜನತೆ ಅವರ ಶಿಕ್ಷಣಗಳನ್ನು ತಿರುಚಿ, ತಿದ್ದುಪಡಿಗೊಳಿಸಿ, ಪರಸ್ಪರ ಭಿನ್ನಾಭಿಪ್ರಾಯವನ್ನು ತಾಳಿ ಬೇರೆ ಬೇರೆ ಮತ ಧರ್ಮಗಳನ್ನು ಮಾಡಿದರು. ಗೌತಮ ಬುದ್ಧ ಶ್ರೀಕೃಷ್ಣ ಝುರತುಷ್ಟ್ರ ಕನ್ಫ್ಯೂಶಿಯಸ್ ಮುಂತಾದವರನ್ನು ಪ್ರವಾದಿಗಳೆಂದು ಒಪ್ಪದಿರಲು ಕಾರಣ ಅವರ ಹೆಸರನ್ನು ಕುರ್‌ಆನ್ ಪ್ರಸ್ತಾಪಿಸಿಲ್ಲ, ಆದರೆ ಪ್ರವಾದಿಗಳು ಭಾರತ, ಚೀನಾ, ಜಪಾನ್, ಇರಾನ್, ಆಫ್ರಿಕ, ಯುರೋಪ್ ಹಾಗೂ ಇನ್ನಿತರ ದೇಶಗಳಲ್ಲೂ ಬಂದಿದ್ದಾರೆ. ಅವರೆಲ್ಲರೂ ಪ್ರವಾದಿ ಮುಹಮ್ಮದ್(ಸ) ಬೋಧಿಸಿದ ಅದೇ ಇಸ್ಲಾಮನ್ನು ಬೋಧಿಸಿದ್ದರು ಎಂಬುದು ನಮ್ಮ ಪ್ರಬಲ ನಂಬಿಕೆಯಾಗಿದೆ. ನಾವು ಯಾವುದೇ ಜನಾಂಗದ ಗುರುಗಳನ್ನು ನಿರಾಕರಿಸುವುದಿಲ್ಲ, ಇಸ್ಲಾಮಿನ ನೇರಮಾರ್ಗದಿಂದ ವ್ಯತಿಚಲಿಸಿದ್ದೆಂದು ಕಾಣುವ ತಪ್ಪು ವಿಚಾರಗಳನ್ನು ಮಾತ್ರ ನಾವು ನಿರಾಕರಿಸುತ್ತೇವೆ.

ಪ್ರವಾದಿಗಳ ಕುರಿತು ಇಸ್ಲಾಮಿನ ಈ ಶಿಕ್ಷಣವು ಅಮೋಘವಾಗಿದೆ. ಇಂತಹ ಶಿಕ್ಷಣ ಬೇರಾವ ಧರ್ಮದಲ್ಲೂ ಇಲ್ಲ, ಇದು ಕುರ್‌ಆನಿನ ಸತ್ಯತೆಯ ಸ್ಪಷ್ಟ ಪುರಾವೆಯಾಗಿದೆ. ಮಾನವ ಕುಲದ ಏಕತೆಯ ಒಂದು ನೆಮ್ಮದಿದಾಯಕ ಸಂದೇಶ ಇದರಲ್ಲಿ ಅಡಗಿದೆ.

## ಪ್ರವಾದಿಗಳ ಅನುಸರಣೆ

ಪ್ರವಾದಿತ್ವದ ವಿಶ್ವಾಸದಿಂದಾಗಿ, ಕೇವಲ ವಿಶ್ವಾಸ ಆಚಾರಗಳಲ್ಲಿ ಮಾತ್ರವಲ್ಲ, ಜೀವನದ ಸಕಲ ವ್ಯವಹಾರಗಳಲ್ಲೂ ದೇವನ ಪ್ರವಾದಿಗಳು ನಡೆದ ಮಾರ್ಗದಲ್ಲೇ ನಡೆಯಬೇಕಾದುದು ಕಡ್ಡಾಯವಾಗುತ್ತದೆ. ಏಕೆಂದರೆ ಅವರಿಗೆ ನೀಡಲಾದ 'ಜ್ಞಾನ' ಮತ್ತು ಅಂತರ್‌ದೃಷ್ಟಿಯಿಂದ ಅವರು ಸರಿ-ತಪ್ಪುಗಳನ್ನು ನಿಖರವಾಗಿ ಗುರುತಿಸುತ್ತಿದ್ದರು. ಅವರು ನೀಡುತ್ತಿದ್ದ ವಿಧಿ-ನಿಷೇಧಗಳ ಆದೇಶಗಳೆಲ್ಲವೂ ದೇವನ ವತಿಯಿಂದಾಗಿರುತ್ತಿತ್ತು. ಸಾಮಾನ್ಯ ಮನುಷ್ಯನಿಗೆ ವರ್ಷಾನುಗಟ್ಟಲೆಯ ಅನುಭವದ ಬಳಿಕವೂ ಸರಿ-ತಪ್ಪುಗಳ ವಿವೇಚನೆ

ಮಾಡುವುವರಲ್ಲಿ ಯಶಸ್ಸು ಸಿಗುವುದಿಲ್ಲ, ಒಂದಿಷ್ಟು ಯಶಸ್ಸು ಅವರಿಗೆ ದೊರೆತರೂ ಅದ ಪೂರ್ಣ ಜ್ಞಾನದ ಬೆಳಕಿನಲ್ಲಲ್ಲ, ಬದಲಾಗಿ ಕೇವಲ ಊಹೆಯ ಆಧಾರದಲ್ಲಾಗಿರುತ್ತದೆ ಆದರೆ ಪ್ರವಾದಿಗಳಿಗೆ ನೀಡಲಾದ ಜ್ಞಾನದ ಆಧಾರದಲ್ಲಿ ನೀಡಲಾದ ಜೀವನ ವಿಧಾನದಲ ತಪ್ಪು ಸಂಭವಿಸುವ ಸಾಧ್ಯತೆಯಿಲ್ಲ, ಆದ್ದರಿಂದಲೇ ಪ್ರವಾದಿಗಳನ್ನು ಅನುಸರಿಸಲು, ಅವ ಅನುಕರಣೆ ಮಾಡಲು ಆಜ್ಞಾಪಿಸುತ್ತದೆ. ಅವರು ಸ್ಥಾಪಿಸಿದ ವಿಧಾನವನ್ನು ಶರೀಅತ್ ಮಿನ್ಹಾಜ್ ಹಾಗೂ ಸನ್ಮಾರ್ಗ ಎಂದು ಪದೇ ಪದೇ ಸಾರಿದೆ. ಇತರೆಲ್ಲರ ಅನುಸರಣೆಯನ ಬಿಟ್ಟು ಕೇವಲ ಪ್ರವಾದಿಗಳನ್ನು ಅನುಸರಿಸಿ ಅವರ ಮಾರ್ಗದಲ್ಲಿ ನಡೆಯುವಂತೆ ಆದೇಶಿಸಿದೆ ಏಕೆಂದರೆ ಅವರ ಅನುಸರಣೆಯು ದೇವನ ಅನುಸರಣೆಯಾಗಿದೆ. ಅವರನ್ನು ಅನುಕರಿಸುವುದ ಅಲ್ಲಾಹನ ಅನುಜ್ಞೆಯ ಅನುಕರಣೆಯಾಗಿದೆ. ಉದಾ:

''ಓ ಪೈಗಂಬರರೇ, ನೀವು ಜನರೊಡನೆ ಹೀಗೆ ಹೇಳಿಬಿಡಿರಿ,- ''ನೀವ ನಿಜವಾಗಿಯೂ ಅಲಾಹನನ್ನು ಪ್ರೀತಿಸುತ್ತೀರೆಂದಾದರೆ ನನ್ನ ಅನುಕರಣೆ ಮಾಡಿರಿ. ಅಲ್ಲಾಹ್ ನಿಮ್ಮನ್ನು ಪ್ರೀತಿಸುವನು ಮತ್ತು ನಿಮ್ಮ ಪಾಪಗಳನ್ನು ಕ್ಷಮಿಸುವನು. ಅವನ ಮಹಾಕ್ಷಮಾಶೀಲನೂ ಕರುಣಾಮಯಿಯೂ ಆಗಿರುತ್ತಾನೆ.'' ''ಅಲ್ಲಾಹ್ ಮತ್ತು ಸಂದೇಶವಾಹಕರ ಅನುಸರಣೆ ಮಾಡಿರಿ'' ಎಂದು ಅವರೊಡನೆ ಹೇಳಿರಿ. ಅವರು ನಿಮ ಆಹ್ವಾನವನ್ನು ಸ್ವೀಕರಿಸದಿದ್ದರೆ ಅಲ್ಲಾಹ್ ತನ್ನ ಮತ್ತು ತನ್ನ ಸಂದೇಶವಾಹಕರ ಅನುಸರಣೆಯನ ನಿರಾಕರಿಸುವವರನ್ನು ಪ್ರೀತಿಸುವುದು ಖಂಡಿತವಾಗಿಯೂ ಅಸಂಭವ.''

(ಪವಿತ್ರ ಕುರ್‌ಆನ್, 3:31,32)

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್, 4:62,80, 8:20-22, 28:50, 33:36) ಇಂತಹ ಇನ್ನೂ ಅನೇಕ ಸೂಕ್ತಗಳಲ್ಲಿ ಪ್ರವಾದಿಗಳ ಅನುಸರಣೆ ಮತ್ತು ಅನು ಕರಣೆಗೆ ಒತ್ತು ಕೊಟ್ಟು ಆದೇಶಿಸಲಾಗಿದೆ. ಇನ್ನು ಅಲ್ಲಾಹನ ಕ್ಷಮೆ ಮತ್ತು ಪರಲೋಕದ ಯಶಸ್ಸು ಬಯಸುವ ಪ್ರತಿಯೊಬ್ಬನಿಗೂ ಪ್ರವಾದಿಯವರ ಜೀವನದಲ್ಲಿ ಯಶಸ್ಸು ಇದೆಯೆಂದು ಹೇಳಲಾಗಿದೆ. (ಪವಿತ್ರ ಕುರ್‌ಆನ್, 33: 21)

## ಪ್ರವಾದಿತ್ವದ ವಿಶ್ವಾಸದ ಮಹತ್ವ

ಅನುಸರಣೆಯ ಈ ಆದೇಶಗಳ ಜೊತೆಗೆ ಪ್ರವಾದಿತ್ವದ ವಿಶ್ವಾಸವು ಇಸ್ಲಾಮ್ ಸ್ಥಾಪಿಸಿದ ನಾಗರಿಕತೆಯ ಜೀವ, ಅದರ ಆತ್ಮ, ಅದರ ಅನಂತ ಶಕ್ತಿ ಮತ್ತು ಅದರ ಗುಣ ವೈಶಿಷ್ಟ್ಯಗಳ ಮೂಲಾಧಾರವಾಗಿದೆ.

ಪ್ರತಿಯೊಂದು ಸಂಸ್ಕೃತಿ ಮತ್ತು ನಾಗರಿಕ ವ್ಯವಸ್ಥೆಯ ಬುನಾದಿ ಮೂರು ವಿಷಯಗಳಾಗಿವೆ. ಒಂದು ವೈಚಾರಿಕ ರೀತಿ, ನೈತಿಕ ನಿಯಮಗಳು ಮತ್ತು ನಾಗರಿಕ

ಕಾನೂನುಗಳು. ಲೋಕದ ಎಲ್ಲ ಸಂಸ್ಕೃತಿಗಳಲ್ಲೂ ಇವು ವಿವಿಧ ಮೂಲಗಳಿಂದ ಬರುತ್ತವೆ. ವೈಚಾರಿಕ ರೀತಿಯನ್ನು ಮಾನವ ಸಮಾಜಗಳ ಮನೋಭಾವಗಳ ಮೇಲೆ ಪ್ರಭಾವ ಬೀರಿದ ದಾರ್ಶನಿಕರು ಮತ್ತು ಚಿಂತಕರ ಶಿಕ್ಷಣಗಳಿಂದ ಪಡೆಯಲಾಗುತ್ತದೆ. ನೈತಿಕ ನಿಯಮಗಳನ್ನು ವಿವಿಧ ಕಾಲ ಘಟ್ಟಗಳಲ್ಲಿ ವಿಶಿಷ್ಟ ಜನಾಂಗಗಳ ಮೇಲೆ ಅಧಿಕಾರ ಹೊಂದಿದ್ದ ನಾಯಕರು,ಸುಧಾರಕರು ಮತ್ತು ಗುರುಗಳಿಂದ ಪಡೆಯಲಾಗುತ್ತದೆ. ನಾಗರಿಕ ಕಾನೂನುಗಳನ್ನು ರಚಿಸುವವರು, ಜೀವನದ ವಿವಿಧ ರಂಗಗಳಲ್ಲಿ ವಿಶ್ವಾಸ ತಾಳಬಹುದಾದಂತಹ ಪ್ರತಿಭಾವಂತರಾಗಿರುತ್ತಾರೆ. ಈ ರೀತಿ ನಾಗರಿಕ ವ್ಯವಸ್ಥೆ ಅಸ್ತಿತ್ವಕ್ಕೆ ಬರುತ್ತದೆ. ಆದರೆ ಅದರಲ್ಲಿ ಮೂರು ಮೂಲಭೂತ ದೋಷಗಳಿವೆ.

ಒಂದನೆಯದಾಗಿ, ದಾರ್ಶನಿಕರು ಮತ್ತು ಚಿಂತಕರೆಲ್ಲ ಒಂದೇ ರೀತಿಯಾಗಿರುವುದಿಲ್ಲ, ಅವರಲ್ಲಿರುವ ಭಿನ್ನತೆಗಳಿಂದಾಗಿ, ಜೀವನ ವಿಧಾನಗಳೂ ವಿಭಿನ್ನವಾಗಿರುತ್ತದೆ. ಅವರ ಪೈಕಿ ಹೆಚ್ಚಿನವರಿಗೆ ಮಾನವ ಜೀವನದ ಸಮಸ್ಯೆಗಳ ಅರಿವೇ ಇರುವುದಿಲ್ಲ, ಇಂತಹವರಿಂದ ಜನರು ವೈಚಾರಿಕ ರೀತಿ-ನೀತಿಗಳನ್ನು ಪಡೆಯುತ್ತಾರೆ. ಇಂತಹ ವಿಭಿನ್ನ ವರ್ಗಗಳಿಂದಾಗಿ ನೈಜ ಹಾಗೂ ಸಂತುಲಿತ ಹೊಂದಾಣಿಕೆ ಸಾಧ್ಯವಿಲ್ಲ, ಈ ವೈರುಧ್ಯಗಳು ತಮ್ಮ ನಿಜರೂಪವನ್ನು ಬಹಿರಂಗಗೊಳಿಸದೆ ಇರುವುದಿಲ್ಲ, ಎರಡನೆಯದಾಗಿ, ಅವುಗಳು ಕಾಲಾತೀತವಾಗಿರುವುದಿಲ್ಲ, ಅದರಲ್ಲಿ ವಿಸ್ತಾರಗೊಳ್ಳುವ ಶಕ್ತಿಯೂ ಇರುವುದಿಲ್ಲ, ವಿವಿಧ ಜನಾಂಗಗಳ ಮೇಲೆ ವಿವಿಧ ಚಿಂತಕರ ಮತ್ತು ದಾರ್ಶನಿಕರ ಪ್ರಭಾವವಿರುತ್ತದೆ. ಆದರಿಂದಾಗಿ ವೈಚಾರಿಕ ರೀತಿ, ನೈತಿಕ ನಿಯಮಗಳು ಮತ್ತು ನಾಗರಿಕ ಕಾನೂನುಗಳಲ್ಲೂ ವೈವಿಧ್ಯತೆಯುಂಟಾಗುತ್ತದೆ. ಇನ್ನು ಒಂದು ಜನಾಂಗದ ಮೇಲೆ ವಿಶಿಷ್ಟ ಚಿಂತಕರ, ಮುಖಂಡರ ಮತ್ತು ಕಾನೂನು ತಜ್ಞರ ಪ್ರಭಾವ ಎಲ್ಲ ಕಾಲಗಳಿಗೂ ಇರುವುದಿಲ್ಲ, ಕಾಲ ಕಳೆದಂತೆ ಅವರು ಸ್ಥಾಪಿಸಿದ ಜೀವನ ಶೈಲಿಯ ಪ್ರಭಾವ ಅಳಿದು ಹೋಗುತ್ತದೆ. ಈ ರೀತಿ ಸಂಸ್ಕೃತಿಗಳು ಜನಾಂಗೀಯ ರೂಪ ತಾಳುತ್ತದೆ. ಆದರಿಂದ ಶಾಂತಿಗೆ ಮಾರಕವಾಗಬಲ್ಲ ಭಿನ್ನಾಭಿಪ್ರಾಯಗಳುಂಟಾಗಿ ಬಿಡುತ್ತದೆ. ಇದರಲ್ಲಿ ಯಾವಾಗಲೂ ಏರುಪೇರುಂಟಾಗುತ್ತದೆ. ಕ್ರಮೇಣ ಈ ಮೂಲಭೂತ ಬದಲಾವಣೆಯು ವಿಕಾಸದಲ್ಲೋ ಕ್ರಾಂತಿಯಲ್ಲೋ ಕೊನೆಗೊಳ್ಳುತ್ತದೆ. ಮೂರನೆಯದಾಗಿ, ಪ್ರಸ್ತುತ ಮೂರೂ ವಿಷಯಗಳಲ್ಲಿ ಪಾವಿತ್ರ್ಯತೆ ಇರುವುದಿಲ್ಲ, ಅದೆಲ್ಲವೂ ಮಾನವ ನಿರ್ಮಿತವಾಗಿರುವುದರಿಂದ ಅವುಗಳ ಸಂಪೂರ್ಣ ಅನುಸರಣೆ ಸಾಧ್ಯವಿಲ್ಲ, ಅಲ್ಲದೆ ಅವುಗಳಲ್ಲಿ ತಪ್ಪುಗಳಿರಲು ಸಾಧ್ಯವಿದೆ. ಅದು ಕ್ರಮೇಣ ಬಯಲುಗೊಳ್ಳುತ್ತದೆ. ಆದರಿಂದಾಗಿ ಸಂದೇಹಗಳು ಉದ್ಭವಿಸುತ್ತದೆ. ಈ ರೀತಿ ವಿಚಾರ ಮತ್ತು ಕಾನೂನಿನ ಹಿಡಿತವು ಜನಾಂಗದ ಮೇಲಿರುವುದಿಲ್ಲ, ನಾಗರಿಕ ವ್ಯವಸ್ಥೆಯೂ ಭದ್ರವಾಗಲು ಅವಕಾಶವಿರುವುದಿಲ್ಲ.

ಪ್ರವಾದಿಗಳ ಮೇಲಿನ ವಿಶ್ವಾಸದ ಆಧಾರದಲ್ಲಿ ನಿರ್ಮಾಣಗೊಂಡ ಸಂಸ್ಕೃತಿಯು ಈ ಎಲ್ಲ ದೋಷಗಳಿಂದ ವಿರಹಿತವಾಗಿರುತ್ತದೆ.

ಒಂದನೆಯದಾಗಿ, ಪ್ರಸ್ತುತ ಮೂರೂ ವಿಷಯಗಳು ಒಂದೇ ಮೂಲದಿಂದ ಬಂದಿರುತ್ತದೆ. ಅಂದರೆ ವೈಚಾರಿಕ ರೀತಿ, ನೈತಿಕ ನಿಯಮಗಳು ಹಾಗೂ ನಾಗರಿಕ ಕಾನೂನು ಇವುಗಳನ್ನು ಒಬ್ಬನೇ ಮುಂದಿಡುತ್ತಾನೆ. ಮೂರೂ ವಿಷಯದಲ್ಲಿ ಏಕರೂಪತೆ ಮತ್ತು ಸಂತುಲಿತತೆ ಕಂಡು ಬರುತ್ತದೆ. ಅದರಲ್ಲೆಂದೂ ಹೆಚ್ಚು ಕಡಿಮೆಯಾಗುವುದಿಲ್ಲ, ಮೂರರ ನಡುವೆಯೂ ಪ್ರಬಲ ಸಂಬಂಧವಿರುತ್ತದೆ. ವಾಸ್ತವದಲ್ಲಿ ಇದು ಮಾನವ ಸಾಮರ್ಥ್ಯಕ್ಕೆ ಅತೀತವಾಗಿದ್ದು ಸೃಷ್ಟಿಕರ್ತನ ಹೊರತು ಇನ್ನಾರಿಂದಲೂ ಇದನ್ನು ಮಾಡಲು ಸಾಧ್ಯವಿಲ್ಲ.

ಎರಡನೆಯದಾಗಿ, ಇದರಲ್ಲಿ ಯಾವುದೂ ಜನಾಂಗೀಯ ಅಥವಾ ಕಾಲ ಬಾಧಿತವಲ್ಲ. ಇದು ಸಂಪೂರ್ಣ ಸತ್ಯವನ್ನು ಆಧರಿಸಿದೆ. ಸತ್ಯವು ಪೂರ್ವ-ಪಶ್ಚಿಮ, ಬಿಳಿಯ-ಕರಿಯ, ಆರ್ಯ-ಅನಾರ್ಯ, ಪ್ರಾಚೀನ-ಆಧುನಿಕ ಇತ್ಯಾದಿ ಎಲ್ಲ ನಿರ್ಬಂಧಗಳಿಂದಲೂ ಮುಕ್ತವಾಗಿರುತ್ತದೆ. ಸತ್ಯವು ಲೋಕದ ಎಲ್ಲೆಡೆಯೂ ಎಲ್ಲ ಕಾಲಗಳಲ್ಲೂ ಒಂದೇ ಆಗಿರುತ್ತದೆ. ಆದ್ದರಿಂದ ಒಂದು ಸಂಸ್ಕೃತಿಯು ಜಾಗತಿಕ, ಮಾನವೀಯ ಹಾಗೂ ಶಾಶ್ವತವಾಗುವುದಾದರೆ ಅದು ಪ್ರವಾದಿಗಳು ಮಂಡಿಸಿದ ಸಂಸ್ಕೃತಿ ಮಾತ್ರ ಆಗಬಹುದು. ಅದಕ್ಕೆ ಮಾತ್ರ ಬುನಾದಿಯನ್ನು ಬದಲಾಯಿಸದೆ ಎಲ್ಲ ದೇಶ, ಜನಾಂಗ ಮತ್ತು ಕಾಲಗಳಿಗೆ ಅನ್ವಯವಾಗುವ ಸಾಮರ್ಥ್ಯವಿರುವುದು.

ಮೂರನೆಯದಾಗಿ, ಇದರಲ್ಲಿ ಪೂರ್ಣ ಪಾವಿತ್ರ್ಯತೆಯಿದೆ. ಅದನ್ನು ಅನುಸರಿಸುವವನಿಗೆ ಇದು ಅಲ್ಲಾಹನ ಪ್ರವಾದಿ ನೀಡಿದ ಸಂಸ್ಕೃತಿಯೆಂಬ ಬಗ್ಗೆ ದೃಢವಾದ ವಿಶ್ವಾಸವಿರುತ್ತದೆ. ಪ್ರವಾದಿಯವರಿಗೆ ಇರುವ ಜ್ಞಾನವು ಅಲ್ಲಾಹನ ವತಿಯಿಂದಾಗಿದ್ದು ಅವರಲ್ಲಿ ಯಾವುದೇ ಸಂದೇಹ, ಆಶಂಕೆಯಿರಲು ಸಾಧ್ಯವಿಲ್ಲವೆಂದು ಅವನು ಪೂರ್ಣವಾಗಿ ನಂಬಿರುತ್ತಾನೆ. ಅವರು ಅದಾಜಿನಲ್ಲಿ ಮತ್ತು ಸ್ವಯಂ ಬುದ್ಧಿಯಿಂದ ನೀಡುವುದಿಲ್ಲ, ಬದಲಾಗಿ ಅಲ್ಲಾಹನ ವತಿಯಿಂದ ನೀಡುತ್ತಾರೆ. ಆದ್ದರಿಂದ ಇದರಲ್ಲಿ ದಾರಿ ತಪ್ಪಿ, ವಕ್ರ ಮಾರ್ಗಗಳಲ್ಲಿ ಸಾಗುವ ಭಯವಿಲ್ಲ, **(ಪವಿತ್ರ ಕುರ್‌ಆನ್, 53:2-5)** ಈ ನಂಬಿಕೆಯು ಅದನ್ನು ಅನುಸರಿಸುವವನಲ್ಲಿ ರೂಢಮೂಲವಾಗಿದ್ದರೆ ಅವನು ಸಂಪೂರ್ಣ ಸಮಾಧಾನದೊಂದಿಗೆ ಪ್ರವಾದಿಯವರನ್ನು ಅನುಸರಿಸುವನು. ಅವನಲ್ಲಿ ಯಾವುದೇ ಸಂಶಯಗಳಿರುವುದಿಲ್ಲ, ಈ ಮಾರ್ಗ ಸರಿ ಯಾದುದೋ ಅಲ್ಲವೋ ಎಂಬ ಚಿಂತೆ ಅವನನ್ನು ಎಂದೂ ಕಾಡುವುದಿಲ್ಲ, ಇದಕ್ಕಿಂತ ಉತ್ತಮ ಮಾರ್ಗವಿರಬಹುದೆಂದೂ ಅವನಿಗೆ ಅನಿಸಲಾರದು. ಇಂತಹ ಸಂಸ್ಕೃತಿಯು ಅತ್ಯಂತ ಶಾಶ್ವತವೂ ದೃಢವೂ ಆಗಿರುವುದು. ಇದರಲ್ಲಿ ಇತರ ಸಂಸ್ಕೃತಿಗಳಿಗಿಂತ ಹೆಚ್ಚು ಶಿಸ್ತು ಇರುವುದು.

ಅಲ್ಲಾಹನ ಪ್ರವಾದಿಗಳು ಇದೇ ಸಂಸ್ಕೃತಿಯನ್ನು ಸ್ಥಾಪಿಸಲು ನೇಮಿಸಲ್ಪಟ್ಟಿದ್ದರು. ಲೋಕದ ನಾನಾ ಭಾಗಗಳಲ್ಲಿ ವಿವಿಧ ಕಾಲ ಘಟ್ಟಗಳಲ್ಲಿ ಅದನ್ನು ಸ್ಥಾಪಿಸಲು ದಾರಿ ಸುಗಮಗೊಳಿಸುತ್ತಿದ್ದರು. ಅದಕ್ಕಾಗಿ ಭೂಮಿ ಪೂರ್ಣವಾಗಿ ತಯಾರಾದಾಗ, ಮುಹಮ್ಮದ್(ಸ) ಬಂದು ಅದರ ಕಟ್ಟಡವನ್ನು ಪೂರ್ಣಗೊಳಿಸಿದರು.

## ಮುಹಮ್ಮದ್(ಸ) ಅವರ ಪ್ರವಾದಿತ್ವದ ವಿಶಿಷ್ಟತೆಗಳು

ಪ್ರವಾದಿತ್ವಕ್ಕೆ ಸಂಬಂಧಿಸಿದ ಸಾಮಾನ್ಯ ನಿಯಮಗಳನ್ನು ಈ ವರೆಗೆ ವಿವರಿಸಲಾಯಿತು. ಆದರೆ ಕೆಲವು ವಿಶಿಷ್ಟತೆಗಳು ಪ್ರವಾದಿ ಮುಹಮ್ಮದ್‌ರಿಗೆ(ಸ) ಮಾತ್ರ ಇವೆ. ಪ್ರವಾದಿತ್ವಕ್ಕೆ ಸಂಬಂಧಿಸಿದಂತೆ ಮುಹಮ್ಮದ್(ಸ) ಮತ್ತು ಇತರೆಲ್ಲ ಪ್ರವಾದಿಗಳ ನಡುವೆ ಯಾವುದೇ ವ್ಯತ್ಯಾಸವಿಲ್ಲ, ಅವರ ಮಧ್ಯೆ ತಾರತಮ್ಯ ಕಲ್ಪಿಸಬಾರದೆಂದು ಕುರ್‌ಆನ್ ಸ್ಪಷ್ಟವಾಗಿಸಾರಿದೆ. **''ಸಂದೇಶವಾಹಕರು ತನ್ನ ಪ್ರಭುವಿನ ವತಿಯಿಂದ ಅವತೀರ್ಣಗೊಂಡುದರ ಮೇಲೆ ವಿಶ್ವಾಸವಿರಿಸಿದ್ದಾರೆ ಮತ್ತು ಈ ಸಂದೇಶವಾಹಕರ ಮೇಲೆ ವಿಶ್ವಾಸವಿಡುವವರು ಸಹ ಈ ಬೋಧನೆಯನ್ನು ಹೃತ್ಪೂರ್ವಕ ಸ್ವೀಕರಿಸಿದ್ದಾರೆ. ಇವರೆಲ್ಲರೂ ಅಲ್ಲಾಹ ನಲ್ಲಿಯೂ ಅವನ ದೇವಚರರಲ್ಲಿಯೂ ಅವನ ದಿವ್ಯಗ್ರಂಥಗಳಲ್ಲಿಯೂ ಅವನ ಸಂದೇಶವಾಹಕರಲ್ಲಿಯೂ ವಿಶ್ವಾಸವಿರಿಸುತ್ತಾರೆ. ''ನಾವು ಅಲ್ಲಾಹನ ಸಂದೇಶವಾಹಕರ ನಡುವೆ ಯಾವತ್ತು ತಾರತಮ್ಯವನ್ನಿರಿಸುವುದಿಲ್ಲ, ನಾವು ಆಜ್ಞೆಯನ್ನು ಆಲಿಸಿದೆವು ಮತ್ತು ಅನುಸರಣೆಯನ್ನು ಸ್ವೀಕರಿಸಿದೆವು. ನಮ್ಮ ಪ್ರಭೂ, ನಾವು ನಿನ್ನಿಂದ ಪಾಪ ವಿಮೋಚನೆಯನ್ನು ಬಯಸುತ್ತೇವೆ ಮತ್ತು ನಮಗೆ ನಿನ್ನ ಕಡೆಗೇ ಮರಳಲಿಕ್ಕಿದೆ'' ಎಂದು ಅವರೆನ್ನುತ್ತಾರೆ.'' (ಅಲ್‌ಬಕರ: 285)** ಮೂಲಭೂತವಾಗಿ ಅವರೆಲ್ಲರೂ ಅಲ್ಲಾಹನಿಂದ ಕಳಿಸಲ್ಪಟ್ಟವರು. ಯುಕ್ತಿ ಮತ್ತು ಜ್ಞಾನವನ್ನು ಎಲ್ಲರಿಗೂ ನೀಡಲಾಗಿತ್ತು. ಎಲ್ಲರೂ 'ಸನ್ಮಾರ್ಗ'ದ ಕಡೆಗೆ ಕರೆಯುವವರೇ. ಎಲ್ಲರೂ ಮಾನವರ ಮಾರ್ಗದರ್ಶಕರು ಮತ್ತು ನಾಯಕರಾಗಿದ್ದರು. ಅವರೆಲ್ಲರ ಅನುಸರಣೆ ಕಡ್ಡಾಯವಾಗಿದೆ. ಅವರ ಜೀವನವು ಮಾನವ ಕುಲಕ್ಕೆ ಆದರ್ಶವಾಗಿದೆ. ಆದರೆ ಅಲ್ಲಾಹನು ಕೆಲವು ವಿಷಯಗಳಲ್ಲಿ ಪ್ರವಾದಿ ಮುಹಮ್ಮದರಿಗೆ ಇತರ ಪ್ರವಾದಿಗಳಿಗೆ ನೀಡಿಲ್ಲದ ವಿಶೇಷತೆಯನ್ನು ನೀಡಿದ್ದಾರೆ. ಇದು ಇಸ್ಲಾಮಿನ ವ್ಯವಸ್ಥೆಯಲ್ಲಿ ಮೂಲಭೂತ ಸ್ಥಾನವನ್ನು ಪಡೆದಿದೆ. ಇಸ್ಲಾಮಿನ ಎಲ್ಲ ವಿಶ್ವಾಸಗಳು ಮತ್ತು ಕಾನೂನುಗಳ ಬುನಾದಿಯು ಪ್ರವಾದಿ ಮುಹಮ್ಮದ್(ಸ) ಅವರ ಇದೇ ವಿಶೇಷತೆಯಿಂದಾಗಿ ನೆಲೆ ನಿಂತಿದೆ. ಆದ್ದರಿಂದ ಈ ವಿಶಿಷ್ಟತೆಯನ್ನು ಪರಿಗಣಿಸಿ ಮುಹಮ್ಮದ್(ಸ) ಅವರ ಮೇಲೆ ವಿಶ್ವಾಸವಿರಿಸದಿದ್ದರೆ ಪ್ರವಾದಿತ್ವಕ್ಕೆ ಸಂಬಂಧಿಸಿದ ಒಬ್ಬನ ವಿಶ್ವಾಸವೂ ಪೂರ್ಣವಾಗುವುದಿಲ್ಲ.

## ಹಿಂದಿನ ಪ್ರವಾದಿಗಳ ಮತ್ತು ಮುಹಮ್ಮದರ(ಸ) ಪ್ರವಾದಿತ್ವಗಳ ಮಧ್ಯೆ ಇರುವ ವ್ಯತ್ಯಾಸ

ಈ ಲೋಕಕ್ಕೆ ಸಾವಿರಾರು ಪ್ರವಾದಿಗಳು ಬಂದಿದ್ದಾರೆ **(ಪವಿತ್ರ ಕುರ್‌ಆನ್, 35:24)** ಇತಿಹಾಸದಲ್ಲಿ ಗತಿಸಿ ಹೋದ ಸಮುದಾಯಗಳ ನಿಖರ ಸಂಖ್ಯೆ ಯಾರಿಗೂ ತಿಳಿದಿಲ್ಲ, ತಿಳಿಯಲು ಸಾಧ್ಯವೂ ಇಲ್ಲ. ಹದೀಸ್‌ಗಳಲ್ಲಿ ಪ್ರವಾದಿಗಳ ಸಂಖ್ಯೆ 1 ಲಕ್ಷ 24 ಸಾವಿರಕ್ಕೂ

ಅಧಿಕವೆಂದು ಹೇಳಲಾಗಿದೆ. ಆದರೆ ಕುರ್‌ಆನ್ ಬೆರಳೆಣಿಕೆಯ ಪ್ರವಾದಿಗಳನ್ನು ಮಾತ್ರ ಪ್ರಸ್ತಾಪಿಸಿದೆ. ಉಳಿದೆಲ್ಲ ಪ್ರವಾದಿಗಳ ಹೆಸರು ಮತ್ತು ಅವರ ಶಿಕ್ಷಣ ಬೋಧನೆಗಳ ಕುರುಹೇ ಅಳಿದು ಹೋಗಿರುವುದರಿಂದ ಅವರ ನೇಮಕ ವಿಶಿಷ್ಟ ಜನಾಂಗಗಳಿಗೆ ಆಗಿತ್ತೆಂಬುದು ವ್ಯಕ್ತ. ಅವುಗಳ ಪೈಕಿ ಯಾವುದಕ್ಕೂ ಸ್ಥಿರತೆ, ಶಾಶ್ವತತೆ ಮತ್ತು ಸಾರ್ವಲೌಕಿಕತೆ ಪ್ರಾಪ್ತವಿಲ್ಲವೆಂದು ತಿಳಿಯಬಹುದು.

ಇನ್ನು ಯಾವ ಪ್ರವಾದಿಗಳ ಮತ್ತು ಜನನಾಯಕರ ಹೆಸರು ನಮಗೆ ತಿಳಿದಿದೆಯೋ ಅವರ ಸ್ಥಿತಿಗತಿಗಳು ಮತ್ತು ಶಿಕ್ಷಣವು ಕಟ್ಟುಕತೆಗಳಿಂದ ಹಾಗೂ ಕಲಬೆರಕೆಗಳಿಂದ ತುಂಬಿ ಹೋಗಿವೆ. ಅವರ ಅಳಿದುಳಿದ ಕುರುಹುಗಳನ್ನು ಕೇವಲ ಐತಿಹಾಸಿಕವಾಗಿ ಅವಲೋಕಿಸಿದರೂ ಅವುಗಳ ಪೈಕಿ ಒಂದನ್ನೂ ನಂಬುವ ಹಾಗಿಲ್ಲ. ಅವರ ನೈಜ ಕಾಲ ಹಾಗೂ ಅವರ ನೈಜ ಹೆಸರು ಕೂಡಾ ನಮಗೆ ತಿಳಿದಿಲ್ಲ. ಅವರು ಐತಿಹಾಸಿಕ ವ್ಯಕ್ತಿಗಳೋ ಪೌರಾಣಿಕ ಅಥವಾ ಕಾಲ್ಪನಿಕ ವ್ಯಕ್ತಿಗಳೋ ಎಂಬುದನ್ನು ನಿಖರವಾಗಿ ನಿಷ್ಕರ್ಷಿಸುವ ಹಾಗಿಲ್ಲ. ಬುದ್ಧ, ಝುರತುಷ್ಟ್ರ, ಏಸು ಮುಂತಾದವರು ಐತಿಹಾಸಿಕ ವ್ಯಕ್ತಿಗಳೋ ಕಾಲ್ಪನಿಕ ವಸ್ತುಗಳೋ ಎಂಬುದರ ಬಗ್ಗೆ ಇತಿಹಾಸಗಾರರು ಸಂದೇಹಿಸುತ್ತಾರೆ. ಅವರ ಜೀವನದ ಕುರಿತ ಮಾಹಿತಿಗಳೂ ಅಪೂರ್ಣ ಮತ್ತು ಅಸ್ಪಷ್ಟವಾಗಿದ್ದು, ಜೀವನದ ಯಾವುದೇ ರಂಗಕ್ಕೂ ಅವರನ್ನು ಮಾದರಿಯಾಗಿ ಮಾಡುವಂತಿಲ್ಲ. ಅವರ ಶಿಕ್ಷಣ ಗಳೂ ಹಾಗೆಯೇ. ಅವರದೆಂದು ಹೇಳಲಾಗುವ ಗ್ರಂಥಗಳೂ ತಿದ್ದುಪಡಿಗೊಳಗಾಗಿವೆಯೆಂದು ಆಂತರಿಕ ಮತ್ತು ಬಾಹ್ಯ ಸಾಕ್ಷ್ಯಗಳಿಂದ ತಿಳಿದು ಬರುತ್ತದೆ. ಈ ಎಲ್ಲ ವಿಷಯಗಳಿಂದ ಪ್ರವಾದಿ ಮುಹಮ್ಮದ್‌ರಿಗಿಂತ(ಸ) ಮುಂಚಿನ ಪ್ರವಾದಿಗಳ ಮತ್ತು ಜನನಾಯಕರ ಪ್ರವಾದಿತ್ವ ಮತ್ತು ನಾಯಕತ್ವದ ಕಾಲ ಕೊನೆಗೊಂಡಿದೆಯೆಂದು ಖಂಡಿತವಾಗಿಯೂ ಹೇಳಬಹುದು.

ಸಾಮಾನ್ಯ ಎಲ್ಲ ಪ್ರವಾದಿಗಳು ಮತ್ತು ಜನನಾಯಕರು ತಂತಮ್ಮ ಜನತೆಯ ಕಡೆಗೆ ಆಗಮಿಸಿದ್ದರು. ಅವರ ಶಿಕ್ಷಣವು ಅದೇ ಜನಾಂಗಕ್ಕೆ ಸೀಮಿತವಾಗಿತ್ತು. ಇಬ್ರಾಹೀಮ್ ಮತ್ತು ಮೂಸಾ(ಅ) ಕನ್ಫ್ಯೂಶಿಯಸ್, ಝುರತುಷ್ಟ್ರ ಮತ್ತು ಶ್ರೀಕೃಷ್ಣನ ಶಿಕ್ಷಣಗಳು. ಅದೇ ರೀತಿ ಸಾಮಿ ಮತ್ತು ಆರ್ಯನ್ ಜನಾಂಗದ ಪ್ರವಾದಿಗಳು ಮತ್ತು ಜನನಾಯಕರದ್ದು. ಆದರೆ ಬುದ್ಧ ಮತ್ತು ಏಸು ಅವರ ಶಿಕ್ಷಣಗಳನ್ನು ಅವರ ಅನುಯಾಯಿಗಳು ಇತರ ಜನಾಂಗಗಳಿಗೆ ತಲಪಿಸಿದರು. ಆದರೆ ಅವರಾರೂ ಇದನ್ನು ಜಾಗತಿಕವೆಂದು ಸಾರಲು ಪ್ರಯತ್ನಿಸಲಿಲ್ಲ. ಏಸುರವರಂತೂ ಕೇವಲ ಇಸ್ರಾಈಲ್ ಜನಾಂಗಕ್ಕೆ ಕಳಿಸಲ್ಪಟ್ಟಿದ್ದೇನೆಂದು ಹೇಳಿದ್ದು ಬೈಬಲ್‌ನಲ್ಲೇ ಇದೆ.

ಎಲ್ಲ ಪ್ರವಾದಿಗಳು ಮತ್ತು ಜನನಾಯಕರ ಪೈಕಿ ಪ್ರವಾದಿ ಮುಹಮ್ಮದ್(ಸ) ಅವರ ಜೀವನ ಮತ್ತು ಶಿಕ್ಷಣದ ಕುರಿತು ಸಂದೇಹಕ್ಕೆಡೆಯಿಲ್ಲದಷ್ಟು ಖಾತ್ರಿಯಾದ, ಅಧಿಕೃತ ಮತ್ತು ಸರಿಯಾದ ಮಾಹಿತಿ ನಮ್ಮ ಬಳಿಯಿದೆ. ಲೋಕದ ಇತರ ಯಾವುದೇ ಇತಿಹಾಸ ಪುರುಷನ

ಕುರಿತು ಇಷ್ಟೊಂದು ಸರಿಯಾದ ಮತ್ತು ವಿಶ್ವಾಸಾರ್ಹ ಮಾಹಿತಿ ಲಭ್ಯವಿಲ್ಲ. ಇದರ ಸತ್ಯತೆಯ ಕುರಿತು ಸಂದೇಹ ತಾಳುವುದಾದರೆ ಇತಿಹಾಸ ಶಾಸ್ತ್ರವೇ ಸುಳ್ಳೆಂದು ಒಪ್ಪಿಕೊಳ್ಳಬೇಕಾದೀತು. ಎಲ್ಲ ಪ್ರವಾದಿಗಳು ಮತ್ತು ಜನ ನಾಯಕರ ಪೈಕಿ ಕೇವಲ ಪ್ರವಾದಿ ಮುಹಮ್ಮದ್(ಸ) ಅವರ ಜೀವನದ ಸಂಪೂರ್ಣ ಮಾಹಿತಿ, ಅದರ ಎಲ್ಲ ವಿವರಗಳೊಂದಿಗೆ ಸುರಕ್ಷಿತವಾಗಿ ಉಳಿದಿದೆ. ಪ್ರವಾದಿಯವರ ಕಾಲಕ್ಕೆ ಮತ್ತು ಈಗಿನ ಕಾಲಕ್ಕೆ ಒಂದು ವ್ಯತ್ಯಾಸ ಮಾತ್ರ ಇದೆ. ಅಂದು ಪ್ರವಾದಿ(ಸ) ಜೀವಂತವಾಗಿ ಜನರ ಮಧ್ಯೆ ಇದ್ದರು. ಇಂದು ಅವರು ಇಲ್ಲವೆಂದು ಮಾತ್ರ. ಆದರೆ ಅವರ ಜೀವನದ ಕುರಿತು ನಿಖರವಾದ ಮಾಹಿತಿ ಅಂದು ಇರುವಷ್ಟೇ ಇಂದಿಗೂ ಇದೆ. ಅವರ ಜೀವನವನ್ನು ಅತ್ಯಂತ ಹತ್ತಿರದಿಂದ ಅಂದು ನೋಡುತ್ತಿದ್ದಂತೆಯೇ ಇಂದೂ ನೋಡಬಹುದಾಗಿದೆ. ಒಬ್ಬ ವ್ಯಕ್ತಿಯ ಸಂಪೂರ್ಣ ಜೀವನವನ್ನು ಮಾದರಿಯಾಗಿಸುವುದಾದರೆ ಅದು ಕೇವಲ ಮುಹಮ್ಮದ್‌ರವರ(ಸ) ಜೀವನವನ್ನು ಮಾತ್ರ. ಏಕೆಂದರೆ ಬೇರೆ ಯಾರ ಜೀವನದ ಕುರಿತೂ ಲೋಕದಲ್ಲಿ ಇಷ್ಟು ಸಮಗ್ರ ಮಾಹಿತಿಯಿಲ್ಲ.

ಪ್ರವಾದಿ ಮುಹಮ್ಮದ್‌ರ(ಸ) ಹೊರತು ಇತರ ಪ್ರವಾದಿಗಳು ಮತ್ತು ಜನನಾಯಕರ ಶಿಕ್ಷಣಗಳ ಪೈಕಿ ಯಾರ ಶಿಕ್ಷಣವೂ ಅದರ ನಿಜರೂಪದಲ್ಲಿ ಉಳಿದಿಲ್ಲ. ಅವರು ತಂದಿದ್ದ ಗ್ರಂಥ ಪವಿತ್ರ ಕುರ್‌ಆನ್ ತನ್ನ ಮೂಲ ರೂಪದಲ್ಲೇ ಇಂದಿಗೂ ಸುರಕ್ಷಿತವಾಗಿದೆ. ಅದೇ ರೀತಿ ಆ ಗ್ರಂಥದ ಶಿಕ್ಷಣಗಳನ್ನು ಅವರು ತಮ್ಮ ಪ್ರಾಯೋಗಿಕ ಜೀವನದಲ್ಲಿ ಅಳವಡಿಸಿದ್ದು, ಅದರ ವಿವರಣೆ ವ್ಯಾಖ್ಯಾನಗಳೆಲ್ಲವೂ ಸಂಪೂರ್ಣವಾಗಿ ಅದೇ ರೀತಿಯಲ್ಲಿ ಇಂದಿಗೂ ಸುರಕ್ಷಿತವಾಗಿ ಉಳಿದಿದೆ. ಇನ್ನು ಮುಂದೆಯೂ ಹಾಗೆಯೇ ಉಳಿಯುವುದು. ಆದ್ದರಿಂದ ಜೀವನಕ್ಕೆ ಮಾದರಿಯಾಗಿ ಯಾರನ್ನಾದರೂ ಅನುಕರಣಾರ್ಹವಾಗಿ ಮಾಡುವುದಾದರೆ ಅದು ಪ್ರವಾದಿ ಮುಹಮ್ಮದ್(ಸ) ಅವರ ಜೀವನವನ್ನು ಮಾತ್ರ ಮಾಡಲು ಸಾಧ್ಯ.

ಹಿಂದಿನ ಪ್ರವಾದಿಗಳು ಮತ್ತು ಜನನಾಯಕರ ಜೀವನ ಮತ್ತು ಶಿಕ್ಷಣಗಳಲ್ಲಿ ಇಂದು ಲಭ್ಯವಿರುವ ಮಾಹಿತಿಗಳನ್ನು ಕಲೆ ಹಾಕಿದರೆ, ಅವುಗಳಲ್ಲಿ ಕಂಡು ಬರುವ ಸತ್ಯ, ನ್ಯಾಯ, ಒಳಿತು, ಸಚ್ಚಾರಿತ್ರ್ಯ ಮತ್ತು ಸತ್ಕರ್ಮಗಳೆಲ್ಲವೂ ಪ್ರವಾದಿ ಮುಹಮ್ಮದ್(ಸ) ಅವರ ಜೀವನ ಮತ್ತು ಶಿಕ್ಷಣದಲ್ಲಿವೆ. ಅದೇ ರೀತಿ ಮಾನವ ಲೋಕದಲ್ಲಿ ಎಷ್ಟೆಲ್ಲ ಜನನಾಯಕರು ಹುಟ್ಟಿದ್ದರೋ ಅವರ ಜೀವನ ಮತ್ತು ಶಿಕ್ಷಣಗಳಲ್ಲೂ ಪ್ರವಾದಿಯವರು ಕಲಿಸಿರದಂತಹ ಯಾವ ಒಳಿತೂ ಸತ್ಕರ್ಮವೂ ಕಾಣಸಿಗದು. ಇನ್ನು, ಪ್ರವಾದಿಯವರ(ಸ) ಜೀವನ ಮತ್ತು ಶಿಕ್ಷಣದಲ್ಲಿ ಹಿಂದಿನ ಮತ್ತು ಇಂದಿನ ಜನನಾಯಕರಲ್ಲಿಲ್ಲದಂತಹ ಸತ್ಯಜ್ಞಾನ, ಸತ್ಕರ್ಮಗಳು ಮತ್ತು ನೈತಿಕ ತತ್ವಗಳನ್ನೊಳಗೊಂಡ ಒಂದು ಭಂಡಾರವೇ ಸಿಗಬಹುದು. ಅದೇ ರೀತಿ ಇಸ್ಲಾಮಿನಿಂದ ಹೊರಗೆ ಯಾವುದೇ ದೈವಿಕ ಜ್ಞಾನ ಹಾಗೂ ನೀತಿ-ಚಾರಿತ್ರ್ಯ ಮತ್ತು ವ್ಯವಹಾರಗಳಿಗೆ ಸಂಬಂಧಿಸಿದ ಸರಿಯಾದ ಮಾಹಿತಿಯನ್ನು ಮಾನವನಿಂದ ಊಹಿಸುವುದೂ ಸಾಧ್ಯವಿಲ್ಲ. ಒಟ್ಟಿನಲ್ಲಿ ಪ್ರವಾದಿ ಮುಹಮ್ಮದ್(ಸ) ಅವರ ಜೀವನ ಮತ್ತು ಶಿಕ್ಷಣವು ಎಲ್ಲ

ಒಳಿತುಗಳ ಭಂಡಾರವಾಗಿದೆಯೆಂಬುದನ್ನು ಯಾರಿಂದಲೂ ನಿರಾಕರಿಸಲಾಗದು. ಸತ್ಯ ಯಾವುದಿತ್ತೋ ಅದನ್ನು ಮುಹಮ್ಮದ್(ಸ) ಪ್ರಸ್ತುತಪಡಿಸಿದ್ದಾರೆ. ಸನ್ಮಾರ್ಗ ಯಾವುದಾಗಿತ್ತೋ ಅದನ್ನು ಅವರು ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದಾರೆ. ವೈಯಕ್ತಿಕ ಮತ್ತು ಸಾಮೂಹಿಕ ನೆಲೆಯಲ್ಲಿ ಮಾನವನ ನೀತಿ ಮತ್ತು ವ್ಯವಹಾರಗಳ ಸುಧಾರಣೆಗೆ ಹಾಗೂ ಲೋಕದಲ್ಲಿ ಸರಿಯಾದ ಜೀವನ ಸಾಗಿಸಲಿಕ್ಕಾಗಿ ಅಗತ್ಯವಿರುವ ಎಲ್ಲ ತತ್ವಗಳನ್ನು ಅವರು ಮಾನವ ಕುಲದ ಮುಂದಿಟ್ಟಿದ್ದಾರೆ. ಇನ್ನು ಅದರಲ್ಲಿ ಯಾವುದೇ ಹೆಚ್ಚಳಕ್ಕೆ ಅವಕಾಶವೇ ಇಲ್ಲ.

ಲೋಕದಲ್ಲಿ ಗತಿಸಿದ ಪ್ರವಾದಿಗಳು ಮತ್ತು ಜನನಾಯಕರ ಪೈಕಿ ಪ್ರವಾದಿ ಮುಹಮ್ಮದ್(ಸ) ಮಾತ್ರ ತಮ್ಮ ಸಂದೇಶವು ಜಾಗತಿಕವೆಂದು ಸಾರಿದವರು. ಕಾರ್ಯತಃ ಅದು ಹಾಗೆಯೇ ಆಗಿದೆ. ಪ್ರವಾದಿ(ಸ) ತಮ್ಮ ಜೀವನದಲ್ಲಿ ವಿವಿಧ ದೇಶಗಳ ರಾಜಂದಿರಿಗೆ ಇಸ್ಲಾಮಿನ ಸಂದೇಶವನ್ನು ಪತ್ರಗಳ ಮೂಲಕ ಕಳಿಸಿದರು. ಅವರ ಸಂದೇಶವು ಲೋಕದ ನಾನಾ ಭಾಗಗಳಿಗೆ ನಾನಾ ದೇಶಗಳಿಗೆ ತಲುಪಿತು. ಈ ವಿಶೇಷತೆಯು ಪ್ರವಾದಿ ಮುಹಮ್ಮದ್‌ರಿಗಲ್ಲದೆ ಇನ್ನಾರಿಗೂ ಲಭಿಸಿಲ್ಲ.

ಪ್ರವಾದಿಗಳ ಆಗಮನದ ಮೂರು ಉದ್ದೇಶಗಳಿರುತ್ತವೆ. ಒಂದನೆಯದಾಗಿ, ಯಾವುದಾದರೂ ಜನಾಂಗಕ್ಕೆ ಈ ಮುಂಚೆ ಪ್ರವಾದಿ ಬಂದಿಲ್ಲವಾದ್ದರಿಂದ ಓರ್ವ ಅಥವಾ ಹೆಚ್ಚು ಪ್ರವಾದಿಗಳನ್ನು ಕಳಿಸುವ ಅಗತ್ಯ ತಲೆದೋರಿರುವುದು. ಎರಡನೆಯದಾಗಿ, ಮೊದಲು ಒಬ್ಬ ಪ್ರವಾದಿ ಬಂದಿದ್ದು ಅವರ ಶಿಕ್ಷಣ ಬೋಧನೆಗಳು ಅಳಿದು ಹೋಗಿರುವುದು, ಅವರು ತಂದ ಗ್ರಂಥದಲ್ಲಿ ತಿದ್ದುಪಡಿಯಾಗಿರುವುದು, ಅವರ ಜೀವನವನ್ನು ಅನುಸರಿಸೋಣವೆಂದರೆ ಅದರ ಕುರುಹುಗಳೂ ಮಾಯವಾಗಿರುವುದು. ಮೂರನೆಯದಾಗಿ, ಮೊದಲು ಬಂದ ಓರ್ವ ಅಥವಾ ಹೆಚ್ಚಿನ ಪ್ರವಾದಿಗಳ ಶಿಕ್ಷಣ ಮತ್ತು ಮಾರ್ಗದರ್ಶನವು ಅಪೂರ್ಣವಾಗಿದ್ದು ಅದರಲ್ಲಿ ಇನ್ನಷ್ಟು ಬೋಧನೆಗಳನ್ನು ಸೇರಿಸಲಿಕ್ಕಾಗಿರುವುದು. ಇನ್ನು ಒಬ್ಬ ಪ್ರವಾದಿಯ ಜತೆಗೆ ಇನ್ನೊಬ್ಬರನ್ನು ಸಹಾಯಕನಾಗಿ ಕಳಿಸುವುದೂ ಇನ್ನೊಂದು ಉದ್ದೇಶವಾಗಿದೆ. ಆದರೆ ಅವರ ಸ್ಥಾನವು ಅನುಬಂಧದ್ದಾಗಿರುತ್ತದೆ. ಪ್ರಸ್ತುತ ಮೂರು ಕಾರಣಗಳನ್ನು ಬಿಟ್ಟರೆ ಪ್ರವಾದಿಗಳ ನೇಮಕಕ್ಕೆ ಬೇರಾವ ಕಾರಣವೂ ಇಲ್ಲ.

ಪ್ರವಾದಿ ಮುಹಮ್ಮದ್(ಸ) ಅವರ ಶಿಕ್ಷಣವು ಪರಿಪೂರ್ಣವಾಗಿದೆ. ಅದು ಯಥಾ ರೂಪದಲ್ಲಿ ಸುರಕ್ಷಿತವಾಗಿದೆ. ಇನ್ನು ಅದಕ್ಕೆ ಸೇರ್ಪಡೆಗೊಳಿಸುವ ಯಾವ ಅಗತ್ಯವೂ ಇಲ್ಲ. ಆದ್ದರಿಂದ ಅವರ ನಂತರ ಯಾವುದೇ ಪ್ರವಾದಿಯ ಆಗಮನದ ಅಗತ್ಯವಿಲ್ಲ. ಅವರ ಬೋಧನೆಗಳ ಪ್ರಚಾರಕ್ಕಾಗಿ ವಿದ್ವಾಂಸರು ಮತ್ತು ಸುಧಾರಕರು ಧಾರಾಳ ಇದ್ದಾರೆ. ಪ್ರವಾದಿ ಮುಹಮ್ಮದ್(ಸ) ಅವರು ಸಕಲ ಲೋಕದವರಿಗಾಗಿದ್ದಾರೆ. ಆದ್ದರಿಂದ ಬೇರೆ ಬೇರೆ ಜನಾಂಗಗಳಿಗೆ ಪ್ರವಾದಿಗಳು ಬರುವ ಅಗತ್ಯವಿಲ್ಲ. ಅವರ ಶಿಕ್ಷಣ-ಬೋಧನೆಗಳು, ಅವರು ತಂದ ಗ್ರಂಥ ಮತ್ತು ಜೀವನದ ಚಿತ್ರಣ ಸಂಪೂರ್ಣ ಸುರಕ್ಷಿತವಾಗಿರುವುದರಿಂದ

ಇನ್ನೊಂದು ಗ್ರಂಥ ಮತ್ತು ಮಾರ್ಗದರ್ಶನದ ಅಗತ್ಯವಿಲ್ಲ. ಪ್ರವಾದಿತ್ವದ ಬಾಗಿಲು ಮುಹಮ್ಮದ್(ಸ) ಅವರೊಂದಿಗೆ ಮುಚ್ಚಲ್ಪಟ್ಟಿದೆ. ಇನ್ನು ಅದನ್ನು ತೆರೆಯುವುದೆಂದರೆ ಅದೊಂದು ವ್ಯರ್ಥ ಕೆಲಸವಾಗಿದೆ. ಅಲ್ಲಾಹನಿಂದ ಅಂತಹ ಕೆಲಸ ಆಗಲು ಸಾಧ್ಯವಿಲ್ಲ. ಆತನು ಪರಮ ಪಾವನನು. ಪ್ರವಾದಿಯವರ(ಸ) ಈ ವಿಶೇಷತೆಯನ್ನು ಪವಿತ್ರ ಕುರ್‌ಆನ್ ಬಹಳ ವಿವರವಾಗಿ ಮುಂದಿಡುತ್ತದೆ.

## ಸಾರ್ವತ್ರಿಕ ಸಂದೇಶ

**''ಓ ಜನರೇ, ಈ ಸಂದೇಶವಾಹಕರು ನಿಮ್ಮ ಬಳಿಗೆ ನಿಮ್ಮ ಪಾಲಕ ಪ್ರಭುವಿನ ಕಡೆಯಿಂದ ಸತ್ಯವನ್ನು ತಂದಿದ್ದಾರೆ. ವಿಶ್ವಾಸವಿರಿಸಿರಿ. ಅದು ನಿಮಗೇ ಒಳಿತು. ನೀವು ನಿರಾಕರಿಸುತ್ತೀರೆಂದಾದರೆ ಭೂಮಿಆಕಾಶಗಳಲ್ಲಿ ಇರುವುದೆಲ್ಲವೂ ಅಲ್ಲಾಹನದ್ದೆಂಬುದನ್ನು ತಿಳಿದುಕೊಳ್ಳಿರಿ ಮತ್ತು ಅಲ್ಲಾಹ್ ಸರ್ವಜ್ಞನೂ, ಯುಕ್ತಿಪೂರ್ಣನೂ ಆಗಿರುತ್ತಾನೆ.''**

**(ಪವಿತ್ರ ಕುರ್‌ಆನ್, 4:170)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್, 7:158, 21:107, 25:1, 34:28) ಇದರಿಂದ ತಿಳಿದು ಬರುವುದೇನೆಂದರೆ, ಪ್ರವಾದಿ ಮುಹಮ್ಮದ್(ಸ) ಅವರ ಸಂದೇಶವು ಯಾವುದೇ ನಿರ್ದಿಷ್ಟ ಕಾಲ, ದೇಶ ಅಥವಾ ಜನಾಂಗಕ್ಕಾಗಿರದೆ ಸಕಲ ಮಾನವ ಕುಲಕ್ಕಾಗಿದೆ. ಅವರು ಸದಾ ಕಾಲಕ್ಕೆ ಮಾರ್ಗದರ್ಶಕರೂ ನೇತಾರರೂ ಆಗಿದ್ದಾರೆ. ಎರಡನೆಯದಾಗಿ, ಅವರ ಮೇಲೆ ವಿಶ್ವಾಸವಿರಿಸುವುದು ಮತ್ತು ಅವರನ್ನು ಅನುಸರಿಸುವುದು ಇಡೀ ಮಾನವ ಕುಲಕ್ಕೆ ಕಡ್ಡಾಯವಾಗಿದೆ. ಮೂರನೆಯದಾಗಿ, ಅವರ ಮೇಲೆ ವಿಶ್ವಾಸವಿರಿಸದೆ ಹಾಗೂ ಅವರನ್ನು ಅನುಸರಿಸದೆ ಇದ್ದರೆ ಸನ್ಮಾರ್ಗ ದೊರೆಯಲಾರದು. ಈ ಮೂರೂ ವಿಷಯಗಳು ಮೂಲಭೂತ ವಿಶ್ವಾಸ(ಈಮಾನ್)ದಲ್ಲಿ ಸೇರಿದ್ದು ಇಸ್ಲಾಮೀ ಸಂಸ್ಕೃತಿ ಮತ್ತು ನಾಗರಿಕತೆಯ ಸಾರ್ವಲೌಕಿಕತೆಯು ಈ ವಿಶ್ವಾಸವನ್ನೇ ಅವಲಂಬಿಸಿದೆ.

## ಧರ್ಮದ ಪರಿಪೂರ್ಣತೆ

ಪ್ರವಾದಿ ಮುಹಮ್ಮದ್(ಸ) ಅವರ ಇನ್ನೊಂದು ವಿಶೇಷತೆಯನ್ನು ಕುರ್‌ಆನ್ ಈ ರೀತಿ ಮುಂದಿಡುತ್ತದೆ.

**''ತನ್ನ ರಸೂಲರನ್ನು ಸನ್ಮಾರ್ಗ ಮತ್ತು ಸತ್ಯಧರ್ಮದೊಂದಿಗೆ ಕಳುಹಿಸಿದಾತನು ಅಲ್ಲಾಹನೇ. (ಇದು) ಅದನ್ನು ಸಕಲ ಧರ್ಮಗಳ ಮೇಲೆ ಉತ್ಥಾನಗೊಳಿಸಲಿಕ್ಕಾಗಿ. 'ಬಹುದೇವವಿಶ್ವಾಸಿ'ಗಳಿಗೆ ಇದು ಎಷ್ಟೇ ಅಪ್ರಿಯವಾಗಿರಲಿ.''**

**(ಪವಿತ್ರ ಕುರ್‌ಆನ್, 9:33)**

"ತಮಗೆ ಏನೇನೆಲ್ಲ ಧರ್ಮಸಮ್ಮತಗೊಳಿಸಲ್ಪಟ್ಟಿದೆ ಎಂದು ಜನರು ಕೇಳುತ್ತಾರೆ. ಹೇಳಿರಿ;- ನಿಮಗೆ ಎಲ್ಲಾ ಶುದ್ಧ ವಸ್ತುಗಳು ಧರ್ಮಸಮ್ಮತಗೊಳಿಸಲ್ಪಟ್ಟಿವೆ. ನೀವು ಪಳಗಿಸಿದ ಪ್ರಾಣಿಗಳು-ದೇವದತ್ತವಾದ ಜ್ಞಾನದ ಆಧಾರದಲ್ಲಿ ನೀವು ಬೇಟೆಯಾಡಲು ಕಲಿಸಿಕೊಟ್ಟ ಪ್ರಾಣಿಗಳು. ನಿಮಗಾಗಿ ಹಿಡಿದಿಟ್ಟ ಪ್ರಾಣಿಗಳನ್ನೂ ನೀವು ತಿನ್ನಬಹುದು. ಆದರೆ ಅದರ ಮೇಲೆ ಅಲ್ಲಾಹನ ನಾಮವನ್ನುಚ್ಚರಿಸಿಕೊಳ್ಳಿರಿ. ಅಲ್ಲಾಹನ ನಿಯಮೋಲ್ಲಂಘನೆ ಮಾಡುವ ಕುರಿತು ಭಯಪಡಿರಿ. ಲೆಕ್ಕ ಪರಿಶೋಧಿಸಲು ಅಲ್ಲಾಹನಿಗೆ ವಿಳಂಬವಾಗುವುದಿಲ್ಲ." (ಪವಿತ್ರ ಕುರ್‌ಆನ್, 5:4)

ಸನ್ಮಾರ್ಗ ಮತ್ತು ಸದ್ಧರ್ಮವನ್ನು ಪರಿಪೂರ್ಣವಾಗಿ ಪ್ರವಾದಿ ಮುಹಮ್ಮದ್(ಸ) ಅವರ ಮೂಲಕ ಕಳಿಸಲಾಗಿದೆ. ಅದು ಹಿಂದಿನ ಪ್ರವಾದಿಗಳ ಮೂಲಕ ಹಂತಹಂತವಾಗಿ ಬರುತ್ತಿದ್ದುದು ಆ ಮೂಲಕ ಪೂರ್ಣತೆಗೆ ಮುಟ್ಟಿತು. ಇನ್ನು ಅದರಂತಹ ಯಾವುದನ್ನೂ ಕಲಿಸಲು, ಬೋಧಿಸಲು ಪ್ರವಾದಿಗಳ, ಸಂದೇಶವಾಹಕರ ಅಗತ್ಯ ಉಳಿದಿಲ್ಲ. ಈ ರೀತಿ ಪೂರ್ಣಗೊಳಿಸಿರುವುದರ ಅರ್ಥ ಇನ್ನು ಹಿಂದಿನ ಪ್ರವಾದಿಗಳ ಅನುಸರಣೆ ಮತ್ತು ಅನುಕರಣೆ ಅರ್ಥಹೀನವಾಯಿತು. ಹಿಂದಿನ ಮತ-ಧರ್ಮಗಳು ಅನೂರ್ಜಿತಗೊಂಡಿತು ಎಂದಾಗಿದೆ. ಪ್ರವಾದಿ ಮುಹಮ್ಮದ್‌ರವರ(ಸ) ಅಂತ್ಯ ಪ್ರವಾದಿತ್ವ ಹಾಗೂ ನಾಯಕತ್ವ ಇವು ಅವರ ವಿಶೇಷತೆಗಳಾಗಿವೆ. ಈ ಎರಡೂ ವಿಷಯಗಳನ್ನು ಕುರ್‌ಆನ್ ಸ್ಪಷ್ಟವಾಗಿ ನಮ್ಮ ಮುಂದಿಡುತ್ತದೆ.

## ಹಿಂದಿನ ಮತ-ಧರ್ಮಗಳು ಅನೂರ್ಜಿತಗೊಂಡಿದೆ

ಹಿಂದಿನ ಪ್ರವಾದಿಗಳು ತಂದಿದ್ದ ಶಿಕ್ಷಣಗಳು ಅನೂರ್ಜಿತಗೊಂಡಿದೆ [1]. ಅವರ ಪ್ರವಾದಿತ್ವ ಮತ್ತು ಸತ್ಯಸಂಧತೆಯ ಮೇಲೆ ವಿಶ್ವಾಸವಿರಿಸುವುದು ಕಡ್ಡಾಯವಾಗಿದೆ. ಏಕೆಂದರೆ ಅವರೆಲ್ಲರೂ ಒಂದೇ ಧರ್ಮ(ಇಸ್ಲಾಮ್)ದ ಕಡೆಗೆ ಕರೆ ನೀಡುವವರಾಗಿದ್ದರು. ಅವರನ್ನು ಅಂಗೀಕರಿಸುವುದು ಇಸ್ಲಾಮನ್ನೇ ಸಮರ್ಥಿಸುವುದಾಗಿದೆ. ಆದರೆ ಕಾರ್ಯತಃ ಅವರ ಅನುಸರಣೆ ಮತ್ತು ಅನುಕರಣೆಯ ಸಂಬಂಧ ಕಡಿದು ಹೋಗಿದ್ದು, ಮುಹಮ್ಮದ್(ಸ) ಅವರ ಶಿಕ್ಷಣ ಮತ್ತು ಜೀವನದೊಂದಿಗೆ ಜೋಡಿಸಲ್ಪಟ್ಟಿದೆ. ಏಕೆಂದರೆ ಮೂಲಭೂತವಾಗಿ, ಪೂರ್ಣತೆಯ ನಂತರ ಆಂಶಿಕದ ಅಗತ್ಯವಿರುವುದಿಲ್ಲ. ಇತರ ಪ್ರವಾದಿಗಳ ಶಿಕ್ಷಣ ಬೋಧನೆಗಳು ತಿದ್ದುಪಡಿಗೊಳಪಟ್ಟಿವೆ ಅಥವಾ ಅಳಿದು ಹೋಗಿವೆ. ಅದರಿಂದಾಗಿ ಅವರನ್ನು ಸರಿಯಾಗಿ ಅನುಕರಿಸುವುದು ಸಾಧ್ಯವಿಲ್ಲ. ಆದ್ದರಿಂದಲೇ 'ಸಂದೇಶ ವಾಹಕರ ಅನುಸರಣೆ' ಎಂದು ಹೇಳಿದಲ್ಲೆಲ್ಲಾ ಅರ್ರಸೂಲ್ ಅಥವಾ ಅನ್ನಬೀ ಎಂಬ ಪದ ಬಳಸಿದೆ. ಇದು ವಿಶೇಷವಾಗಿ ಪ್ರವಾದಿ ಮುಹಮ್ಮದ್(ಸ) ಅವರ ಕುರಿತಾಗಿದೆ. ಉದಾ: ಪವಿತ್ರ ಕುರ್‌ಆನ್, 3:132, 4:59,80

ಇಷ್ಟಕ್ಕೇ ನಿಲ್ಲಿಸದೆ ಹಿಂದಿನ ಪ್ರವಾದಿಗಳನ್ನು ಅನುಸರಿಸುತ್ತಿದ್ದ ಜನಾಂಗಗಳಿಗೂ ಪ್ರವಾದಿ ಮುಹಮ್ಮದ್(ಸ) ಅವರ ಮೇಲೆ ವಿಶ್ವಾಸವಿರಿಸಿ ಅವರನ್ನು ಅನುಸರಿಸುವಂತೆ ಆದೇಶಿಸಲಾಗಿದೆ. **ಪವಿತ್ರ ಕುರ್‌ಆನ್, 5:15-16, 7:157-158.**

ಈ ಸುವ್ಯಕ್ತ ವಚನಗಳ ಮೂಲಕ ಹಿಂದಿನ ಮತ-ಧರ್ಮಗಳ ಅನೂರ್ಜಿತ ತೆಗೊಂಡಿರುವುದಾಗಿ ಸ್ಪಷ್ಟಪಡಿಸಲಾಗಿದೆ. ಅದರ ಅರ್ಥವನ್ನೂ ಕಾರಣವನ್ನೂ ತಿಳಿಸಲಾಗಿದೆ. ಇನ್ನು ಸನ್ಮಾರ್ಗ ಮತ್ತು ಯಶಸ್ಸು ಪ್ರವಾದಿ ಮುಹಮ್ಮದ್(ಸ) ಅವರ ಅನುಕರಣೆಯಿಂದ ಮಾತ್ರ ಲಭ್ಯವೆಂದು ಮನವರಿಕೆ ಮಾಡಲಾಗಿದೆ. ಅಷ್ಟೇ ಅಲ್ಲ, ಅವರು ತಂದ ಧರ್ಮವೂ ಹಿಂದಿನ ಗ್ರಂಥಗಳಾದ ತೌರಾತ್ ಮತ್ತು ಇಂಜೀಲ್ ಹಾಗೂ ಇನ್ನಿತರ ಜನಾಂಗಗಳ ಮೇಲೆ ಅವತೀರ್ಣಗೊಂಡಿದ್ದ ಗ್ರಂಥಗಳನ್ನು ನಂಬುವವರ ಧರ್ಮಗಳ ಪರಿ ಪೂರ್ಣತೆಯಾಗಿದೆಯೆಂದೂ ತಿಳಿಸಲಾಗಿದೆ.

## ಪ್ರವಾದಿತ್ವ ಸಮಾಪ್ತಿ

ಪ್ರವಾದಿತ್ವವನ್ನು ಕೊನೆಗೊಳಿಸಿರುವುದೂ ಧರ್ಮವು ಪರಿಪೂರ್ಣಗೊಂಡ ಕಾರಣದಿಂದಾಗಿದೆ. ಅದನ್ನು ಕುರ್‌ಆನ್ ಈ ರೀತಿ ಸ್ಪಷ್ಟಪಡಿಸಿದೆ.

**"(ಜನರೇ) ಮುಹಮ್ಮದ್‌ರು ನಿಮ್ಮ ಪುರುಷರ ಪೈಕಿ ಯಾರದೇ ತಂದೆಯಲ್ಲ. ವಾಸ್ತವದಲ್ಲಿ ಅವರು ಅಲ್ಲಾಹನ ಸಂದೇಶವಾಹಕರು ಮತ್ತು ಪ್ರವಾದಿಗಳಲ್ಲಿ ಕೊನೆಯವರಾಗಿರುತ್ತಾರೆ. ಅಲ್ಲಾಹನು ಸಕಲ ವಸ್ತುಗಳ ಪರಿಜ್ಞಾನವುಳ್ಳವನು."** (ಪವಿತ್ರ **ಕುರ್‌ಆನ್, 33:40)**

ಧರ್ಮದ ಪರಿಪೂರ್ಣತೆ, ಹಿಂದಿನ ಮತ-ಧರ್ಮಗಳು ಊರ್ಜಿತಗೊಂಡಿರುವುದು ಹಾಗೂ ಪ್ರವಾದಿತ್ವದ ಸಮಾಪ್ತಿಯು ಇಸ್ಲಾಮಿನ ಮೂಲಭೂತ ವಿಶ್ವಾಸಗಳಲ್ಲಿ ಸೇರಿದ್ದು, ಮುಹಮ್ಮದ್(ಸ) ಅವರ ಪ್ರವಾದಿತ್ವದ ಮೇಲಿನ ವಿಶ್ವಾಸದ ಅನಿವಾರ್ಯ ಅಂಗಗಳಾಗಿವೆ. ಪೂರ್ಣ ಮಾನವ ಕುಲವು ಒಂದಾಗಿರಲು ಮತ್ತು ಒಂದೇ ಸಂಸ್ಕೃತಿಯವರಾಗಿರಲು ಪ್ರಸ್ತುತ ಮೂಲಭೂತ ವಿಶ್ವಾಸಗಳು ಅಗತ್ಯವಾಗಿದೆ.

# ದೇವ ಗ್ರಂಥಗಳ ಮೇಲೆ ವಿಶ್ವಾಸ

ಇಸ್ಲಾಮೀ ಸಂಸ್ಕೃತಿಯ ಸ್ಥಾಪನೆಯಲ್ಲಿ ಗ್ರಂಥದ ಮೇಲಿನ ವಿಶ್ವಾಸಕ್ಕೆ ಯಾವ ಪಾತ್ರವಿದೆ? ಜನರಿಗೆ ದೇವನ ಕಡೆಯಿಂದ ನೀಡಲಾಗುವ ಶಿಕ್ಷಣ-ಮಾರ್ಗದರ್ಶನಗಳು ಪ್ರವಾದಿಗಳ ಮೂಲಕ ಬರುತ್ತದೆ. ಅದು ಪ್ರವಾದಿಗಳ ಸ್ವಂತ ಸೃಷ್ಟಿಯಲ್ಲ, ಪ್ರವಾದಿಗಳು ಅದನ್ನು ಒಂದು ಅಮಾನತ್ ಎಂಬಂತೆ ಜನರಿಗೆ ತಲಪಿಸುತ್ತಾರೆ. ಅಲ್ಲಾಹನು ನೀಡಿದ ವಿವೇಕದಿಂದ ಅದರ ಅರ್ಥ ತಾತ್ಪರ್ಯವನ್ನು ಅವರು ತಿಳಿಸುತ್ತಾರೆ. ಅದೇ ತತ್ವಗಳ ಆಧಾರದಲ್ಲಿ ನೈತಿಕ, ಸಾಮಾಜಿಕ, ಸಾಂಸ್ಕೃತಿಕ ಮತ್ತು ನಾಗರಿಕ ವ್ಯವಸ್ಥೆ ಸ್ಥಾಪನೆಗೊಳ್ಳುತ್ತದೆ. ತಮ್ಮ ಶಿಕ್ಷಣ- ಬೋಧನೆ ಮತ್ತು ಪಾವನ ಜೀವನದ ಮೂಲಕ ಜನರ ವಿಚಾರ, ಒಲವು ಮತ್ತು ಚಿಂತನೆ ಗಳಲ್ಲಿ ಕ್ರಾಂತಿಯುಂಟು ಮಾಡುತ್ತಾರೆ. ದೇವಭಯ, ಪರಿಶುದ್ಧತೆ, ಆತ್ಮಸಂಸ್ಕರಣೆ ಮತ್ತು ಸತ್ಕರ್ಮಗಳನ್ನು ಅವರಲ್ಲಿ ಮೂಡಿಸುತ್ತಾರೆ. ತಮ್ಮ ತರಬೇತಿ ಮತ್ತು ಪ್ರಾಯೋಗಿಕ ಮಾರ್ಗದರ್ಶನದ ಮೂಲಕ ಒಂದು ಹೊಸ ಸಮಾಜ, ಹೊಸ ಮನೋವೃತ್ತಿ, ಹೊಸ ವಿಚಾರ, ಹೊಸ ನಡವಳಿಕೆಗಳು, ಹೊಸ ಕಾನೂನು ಮತ್ತು ಸಂವಿಧಾನವನ್ನು ಅಸ್ತಿತ್ವಕ್ಕೆ ತರುತ್ತಾರೆ. ಈ ಸಂಘಟನೆಯು ಮುಂದಿನ ಪೀಳಿಗೆಗೆ ಮಾರ್ಗದರ್ಶಿಯಾಗುತ್ತದೆ.

## ಪ್ರವಾದಿತ್ವ ಮತ್ತು ಗ್ರಂಥದ ಸಂಬಂಧ

ಪ್ರವಾದಿತ್ವ ಮತ್ತು ಗ್ರಂಥವು ಒಬ್ಬನೇ ದೇವನಿಂದ ಬಂದಿರುತ್ತದೆ. ಎರಡೂ ಒಂದೇ ಮಾರ್ಗದರ್ಶನದ ಘಟಕಗಳು, ಒಂದೇ ಉದ್ದೇಶ ಮತ್ತು ಒಂದೇ ಸಂದೇಶದ ಪೂರ್ತೀಕರಣದ ಮೂಲಗಳಾಗಿವೆ. ಅಲ್ಲಾಹನ ಜ್ಞಾನ ಮತ್ತು ಅವನ ಯುಕ್ತಿಯು ಪ್ರವಾದಿಯ ಹೃದಯದಲ್ಲೂ ಇದೆ. ಗ್ರಂಥದ ಪುಟಗಳಲ್ಲೂ ಇರುತ್ತವೆ. ಆ ಶಿಕ್ಷಣವು ಲಿಖಿತ ರೂಪದಲ್ಲಿ ಗ್ರಂಥದಲ್ಲಿದ್ದರೆ, ಪ್ರಾಯೋಗಿಕ ರೂಪವು ಪ್ರವಾದಿಯ ಬದುಕಿನಲ್ಲಿದೆ.

ಮಾನವನು ಕೇವಲ ಗ್ರಂಥದ ಶಿಕ್ಷಣದಿಂದ ಹೆಚ್ಚಿನ ಪ್ರಯೋಜನ ಪಡೆಯಲಾರ. ಅದನ್ನು ವಿವರಿಸುವ ಓರ್ವ ಶಿಕ್ಷಕ ಮತ್ತು ಮಾರ್ಗದರ್ಶಕನ ಅಗತ್ಯವಿದೆ. ಇತಿಹಾಸದಲ್ಲಿ ಕೇವಲ ಗ್ರಂಥವೊಂದು ಶಿಕ್ಷಕನಿಲ್ಲದೆ ಎಂದೂ ಬದಲಾವಣೆ ತಂದಿಲ್ಲ, ಜನರ ಆಚಾರ-

ವಿಚಾರಗಳಲ್ಲಿ ಕ್ರಾಂತಿಯುಂಟು ಮಾಡಿದ ನಾಯಕರು ಆ ಶಿಕ್ಷಣವನ್ನು ತಮ್ಮ ಬದುಕಿನಲ್ಲಿ ಅಳವಡಿಸದೆ ಇದ್ದರೆ, ಕೇವಲ ಗ್ರಂಥದಿಂದ ಕ್ರಾಂತಿಯುಂಟಾಗಿದೆಯೆಂದು ವಾದಿಸಲು ಯಾರಿಗೂ ಸಾಧ್ಯವಿಲ್ಲ.

ಮಾನವರ ಮಾರ್ಗದರ್ಶಕನು ತನ್ನಲ್ಲಿರುವ ಶಿಕ್ಷಣದ ಒಂದು ಅಧಿಕೃತ ವಿವರಣೆಯನ್ನೂ ಹೊಂದಿರಬೇಕಾಗುತ್ತದೆ. ಅದು ಬರೆಹದ ಮೂಲಕವಾಗಿರಬಹುದು ಅಥವಾ ಕಂಠಪಾಠವಾಗಿರಬಹುದು. ಅವನ ಶಿಕ್ಷಣವು ಅದರ ನಿಜರೂಪದಲ್ಲಿ ಸುರಕ್ಷಿತವಾಗಿರದಿದ್ದರೆ ಆ ಶಿಕ್ಷಣವೇ ಮಂದವಾಗಿ ಕೊನೆಗೊಮ್ಮೆ ಅಳಿದೇ ಹೋಗುವುದು. ಅದರಿಂದ ವೈಯಕ್ತಿಕ ನಡವಳಿಕೆ ಮತ್ತು ಸಾಮೂಹಿಕ ವ್ಯವಸ್ಥೆಯ ಆಧಾರವೇ ದುರ್ಬಲವಾಗುವುದು. ಕೊನೆಗೆ ಆ ಜನತೆಯ ಬಳಿ ಕಟ್ಟುಕತೆಗಳು ಮಾತ್ರ ಉಳಿದಿರುವುದು. ಅದಕ್ಕೆ ಒಂದು ಪ್ರಬಲ ನಾಗರಿಕ ವ್ಯವಸ್ಥೆಯನ್ನು ನಡೆಸುವ ಶಕ್ತಿ ಇರಲಾರದು. ಅದರಿಂದ ರೂಪುಗೊಳ್ಳುವ ಸಮುದಾಯದಲ್ಲಿ ವಿಶ್ವಾಸಪರ, ವೈಚಾರಿಕ, ಪ್ರಾಯೋಗಿಕ, ನೈತಿಕ ಮತ್ತು ನಾಗರಿಕ ಕೆಡುಕುಗಳು ಹುಟ್ಟಿಕೊಳ್ಳುತ್ತವೆ. ಸರಿಯಾದ ಮತ್ತು ನೈಜ ತತ್ವಾದರ್ಶಗಳನ್ನು ಪಡೆಯುವ ಯಾವುದೇ ವಸ್ತು ಅದರ ಹಿಂದೆ ಇರಲಾರದು. ಸೃಷ್ಟಿ ಕರ್ತನು ಮಾನವರ ಈ ಪ್ರಕೃತಿಯನ್ನು ಅರಿತಿದ್ದ ಕಾರಣ ಮಾನವರ ಮಾರ್ಗದರ್ಶನಕ್ಕಾಗಿ ಪ್ರವಾದಿತ್ವ ಮತ್ತು ಗ್ರಂಥದ ಅವತರಣವನ್ನು ಒಟ್ಟೊಟ್ಟಿಗೆ ಮಾಡಿದನು. ಮಾರ್ಗದರ್ಶಕನಿಲ್ಲದೆ ಗ್ರಂಥ, ಗ್ರಂಥವಿಲ್ಲದೆ ಮಾರ್ಗದರ್ಶಕನಿರುತ್ತಿದ್ದರೆ ಅವನ ಉದ್ದೇಶ ಪೂರ್ತಿಯಾಗುತ್ತಿರಲಿಲ್ಲ.

## ದೀಪ ಮತ್ತು ಮಾರ್ಗದರ್ಶಿ

ಪ್ರವಾದಿತ್ವ ಮತ್ತು ಗ್ರಂಥವನ್ನು ಒಂದು ಉದಾಹರಣೆಯ ಮೂಲಕ ಕುರ್‌ಆನ್ ವಿವರಿಸುತ್ತದೆ. ಅದು ಪ್ರವಾದಿಯನ್ನು ಮಾರ್ಗದರ್ಶಿಯೆಂದು ಅಲ್ಲಲ್ಲಿ ವಿವರಿಸುತ್ತದೆ. ದಾರಿತಪ್ಪಿದವರಿಗೆ ನೇರಮಾರ್ಗ ತೋರಿಸುವುದೇ ಅವರ ಕೆಲಸ. ''ನಿಮ್ಮನ್ನು ನಿಷೇಧಿಸಿದವರು **''ಈ ವ್ಯಕ್ತಿಯ ಮೇಲೆ ಇವನ ಪ್ರಭುವಿನ ಕಡೆಯಿಂದ ಯಾವುದಾದರೊಂದು ನಿದರ್ಶನವೇಕೆ ಇಳಿದಿಲ್ಲ?'' ಎಂದು ಕೇಳುತ್ತಾರೆ. ನೀವಂತು ಕೇವಲ ಎಚ್ಚರಿಕೆ ಕೊಡುವವರಾಗಿರುತ್ತೀರಿ ಮತ್ತು ಪ್ರತಿಯೊಂದು ಜನಾಂಗಕ್ಕೂ ಓರ್ವ ಮಾರ್ಗದರ್ಶಕನಿದ್ದಾನೆ.''**

**(ಪವಿತ್ರ ಕುರ್‌ಆನ್, 13:7)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್,9:43, 21:73, 79:19) ಇನ್ನೊಂದೆಡೆ ಅದು ಗ್ರಂಥವನ್ನು ನೂರ್(ಪ್ರಕಾಶ), ದಿಯಾ(ಬೆಳಕು), ಬುರ್ಹಾನ್(ಪ್ರಮಾಣ), ಫುರ್ಕಾನ್(ಸತ್ಯಾಸತ್ಯಗಳ ಮಾನದಂಡ), ಮುನೀರ್(ಪ್ರಕಾಶ), ಮುಬೀನ್(ಸುಸ್ಪಷ್ಟ) ಎಂಬಿತ್ಯಾದಿ ಪದಗಳಿಂದ ಕರೆಯುತ್ತದೆ.

ಉದಾ: **ಪವಿತ್ರ ಕುರ್‌ಆನ್, 4:174, 5:15, 7:157, 21:48,**

ಈ ಉದಾಹರಣೆಗಳಿಂದ ಒಂದು ವಾಸ್ತವಿಕತೆಯತ್ತ ಸೂಚನೆ ನೀಡಲಾಗಿದೆ. ಸತ್ಯದ ನೇರ ಮಾರ್ಗದಲ್ಲಿ ನಡೆಯಬಲ್ಲಷ್ಟು ಪ್ರಕಾಶ ಮತ್ತು ಮಾರ್ಗದರ್ಶನ ಮಾನವನಿಗೆ ಕೇವಲ ಬುದ್ಧಿ ಮತ್ತು ಗಳಿಸಿದ ಜ್ಞಾನದಿಂದ ಲಭಿಸಲಾರದು ಎಂದು ತಿಳಿಸುವುದೇ ಉದ್ದೇಶವಾಗಿದೆ. ಈ ಅಪರಿಚಿತ ಮತ್ತು ಕತ್ತಲ ಗುರಿಯಲ್ಲಿ ಅದರ ಏರು-ತಗ್ಗುಗಳನ್ನು ಚೆನ್ನಾಗಿ ಬಲ್ಲ ಓರ್ವ ಮಾರ್ಗದರ್ಶಕನ ಅಗತ್ಯವಿದೆ. ಜೊತೆಗೆ, ಇಲ್ಲಿ ಹೊಂಡವಿದೆ. ಇಲ್ಲಿ ಕಾಲು ಜಾರುತ್ತದೆ. ಇಲ್ಲಿ ಮುಳ್ಳು ಕಂಟಿಯಿದೆ, ಇಲ್ಲಿಂದ ವಕ್ರ ಮತ್ತು ತಪ್ಪು ದಾರಿ ಹೊರಡುತ್ತದೆ ಎಂಬುದನ್ನು ತೋರಿಸುತ್ತಾ ಸಾಗುವ ಒಂದು ದೀಪವೂ ಇರಬೇಕು. ರಾತ್ರಿಯ ಅಂಧಕಾರದಲ್ಲಿ ಮಾರ್ಗದರ್ಶಕ ಮತ್ತು ದೀಪದ ನಡುವೆ ಇರುವ ಸಂಬಂಧವೇ ಪ್ರವಾದಿ ಮತ್ತು ಗ್ರಂಥದ ನಡುವೆ ಇದೆ. ಮಾರ್ಗದರ್ಶಕನ ಕೈಯಿಂದ ದೀಪವನ್ನು ಕಸಿದು ನಾವೇ ನಡೆಯ ಹೊರಟರೆ ಮುಂದೆ ಸಿಗಬಹುದಾದ ವಕ್ರ ಮಾರ್ಗಗಳಲ್ಲಿ ನಾವು ಸರಿಯಾದ ಮಾರ್ಗ ಕಾಣದೆ ನಿಂತು ಬಿಡಬಹುದು ಅಥವಾ ಆ ದೀಪದ ಬೆಳಕಿನಲ್ಲೇ ಯಾವುದಾದರೊಂದು ತಪ್ಪು ದಾರಿಯಲ್ಲಿ ನಡೆಯಬಹುದು. ಏಕೆಂದರೆ ಮಾರ್ಗದರ್ಶಕನಿಲ್ಲದೆ ಕೇವಲ ದೀಪವು ಸರಿದಾರಿ ತೋರಿಸಲಾರದು. ಅದೇ ರೀತಿ ದೀಪವಿಲ್ಲದೆ ಮಾರ್ಗದರ್ಶಕ ಮಾತ್ರ ಇದ್ದರೆ ಆತನ ಹಿಂದೆ ಅವನ ಅಂಗಿ ಹಿಡಿದು ಕುರುಡರಂತೆ ನಡೆಯಬೇಕಾದೀತು. ಏಕೆಂದರೆ ದೀಪವಿಲ್ಲದಿದ್ದರೆ ವಕ್ರ ಮಾರ್ಗಗಳನ್ನು ಗುರುತಿಸುವಷ್ಟು ದೃಷ್ಟಿ ನಮ್ಮಲ್ಲಿರಲಾರದು. ಒಟ್ಟಿನಲ್ಲಿ ಈ ಎರಡರಿಂದಲೂ ನಾವು ನಿರಪೇಕ್ಷರಾಗಲಾರೆವು. ಅದೇ ರೀತಿ ಸತ್ಯದ ಅಪರಿಚಿತ ಮಾರ್ಗವನ್ನು ಕೇವಲ ಬುದ್ಧಿಯಿಂದ ಹುಡುಕಲು ಸಾಧ್ಯವಿಲ್ಲ, ಅದಕ್ಕೆ ಪ್ರವಾದಿ ಮತ್ತು ಗ್ರಂಥ-ಎರಡೂ ಅಗತ್ಯವಿದೆ. ಅವುಗಳ ಪೈಕಿ ಯಾವುದಾದರೂ ಒಂದನ್ನು ಬಿಟ್ಟರೆ ನಾವು ಸನ್ಮಾರ್ಗ ಪಡೆಯಲಾರೆವು.

ಪ್ರವಾದಿಯು ನುರಿತ ಮಾರ್ಗದರ್ಶಕನಾಗಿದ್ದು ದೇವನು ನೀಡಿದ ಅಂತಃಚಕ್ಷುವಿನಿಂದ ಸನ್ಮಾರ್ಗವನ್ನು ಬಲ್ಲವನಾಗಿರುತ್ತಾರೆ. ಅವರಿಗೆ ಅವರು ಕ್ರಮಿಸುವ ಮಾರ್ಗ ಸುಪರಿಚಿತ ವಾಗಿರುತ್ತದೆ. ಅದೇ ಅಂತಃಚಕ್ಷುವನ್ನು ಯುಕ್ತಿ, ಜ್ಞಾನ, ತೆರೆದ ಹೃದಯ, ದೇವಶಿಕ್ಷಣ, ದೈವಿಕ ಸನ್ಮಾರ್ಗ ಎಂಬಿತ್ಯಾದಿಯಾಗಿ ಕುರ್‌ಆನಿನಲ್ಲಿ ಪದೇ ಪದೇ ಪ್ರಸ್ತಾಪಿಸಲಾಗಿದೆ. ಉದಾ:

**''ಓ ಪೈಗಂಬರರೇ, ಅಲ್ಲಾಹನ ಅನುಗ್ರಹವೂ, ಕೃಪೆಯೂ ನಿಮ್ಮ ಮೇಲೆ ಇಲ್ಲದಿರುತ್ತಿದ್ದರೆ, ಅವರಲ್ಲೊಂದು ಪಂಗಡವು ನಿಮ್ಮನ್ನು ಅಪಗ್ರಹಿಕೆಗೆ ಹಚ್ಚಲು ನಿರ್ಧರಿಸಿಯೇ ಬಿಟ್ಟಿತ್ತು. ವಸ್ತುತಃ ಅವರು ತಮ್ಮನ್ನೇ ಹೊರತು ಇನ್ನಾರನ್ನೂ ಅಪಗ್ರಹಿಕೆಗೆ ಹಚ್ಚುತ್ತಿರಲಿಲ್ಲ, ಅವರು ನಿಮಗೆ ಯಾವ ನಷ್ಟವನ್ನೂ ಮಾಡುವಂತಿರಲಿಲ್ಲ, ಅಲ್ಲಾಹನು ನಿಮಗೆ ಗ್ರಂಥ ಹಾಗೂ ಯುಕ್ತಿಯನ್ನು ಅವತೀರ್ಣಗೊಳಿಸಿರುತ್ತಾನೆ ಮತ್ತು ನಿಮಗೆ ತಿಳಿಯದಿದ್ದುದನ್ನು ಕಲಿಸಿರುತ್ತಾನೆ. ಅಲ್ಲಾಹನ ಅನುಗ್ರಹ ನಿಮ್ಮ ಮೇಲೆ ಧಾರಾಳವಿದೆ.''  (ಪವಿತ್ರ ಕುರ್‌ಆನ್, 4:113)**

**(21:79, 36:21, 92:1)** ಗ್ರಂಥವು ಪ್ರಕಾಶಮಯ ದೀಪವಾಗಿದ್ದು ಅದರ ಸಹಾಯದಿಂದ ಪ್ರವಾದಿಗಳು ತಮ್ಮ ಅನುಯಾಯಿಗಳನ್ನು ನೇರಮಾರ್ಗದಲ್ಲಿ ನಡೆಸುತ್ತಾರೆ. ತನ್ನ ಶಿಕ್ಷಣ-ತರಬೇತಿಗಳಿಂದ ಅವರನ್ನು ಅನುಸರಿಸಿ ನಡೆಯುವಂತೆ ಮಾಡುತ್ತಾರೆ. ಆ ದೀಪವನ್ನು ಕೈಯಲ್ಲಿಟ್ಟರೆ ಅವರು ಸ್ವಯಂ ಸನ್ಮಾರ್ಗ ಪಡೆಯುವುದರ ಜೊತೆಗೆ ಇತರರಿಗೂ ಮಾರ್ಗದರ್ಶಕರಾಗುತ್ತಾರೆ. **ಪವಿತ್ರ ಕುರ್‌ಆನ್, 14:1, 16:44**

ಗ್ರಂಥ ಮತ್ತು ಪ್ರವಾದಿಯ ನಡುವೆ ಅಭೇದ್ಯ ಸಂಬಂಧವಿದೆ. ಮಾನವನ ಮಾರ್ಗದರ್ಶನಕ್ಕೆ ಅವೆರಡೂ ಒಂದೇ ಪ್ರಕಾರ ಅಗತ್ಯವಾಗಿವೆ. ಮಾನವನು ಬಯಸುವ ಆಚಾರ-ವಿಚಾರಗಳ ವ್ಯವಸ್ಥೆ ಮತ್ತು ಸಂಸ್ಕೃತಿ-ನಾಗರಿಕತೆಯ ಸ್ಥಾಪನೆ ಮತ್ತು ಉಳಿವಿಗೆ ಹಾಗೂ ಅದು ನೈಜ ರೂಪದಲ್ಲಿ ಇರಲಿಕ್ಕೆ ಪ್ರವಾದಿತ್ವ ಮತ್ತು ಗ್ರಂಥಗಳೆರಡರೊಂದಿಗೂ ಅದರ ಸಂಬಂಧ ಉಳಿದಿರಬೇಕಾದುದು ಅಗತ್ಯ. ಈ ಅಗತ್ಯವನ್ನು ಮುಂದಿರಿಸಿಯೇ ಪ್ರವಾದಿತ್ವ ಮತ್ತು ಗ್ರಂಥವನ್ನು ಪ್ರತ್ಯಪ್ರತ್ಯೇಕವಾಗಿ ಈಮಾನಿನ ಅಂಶವೆಂದು ಸಾರುತ್ತಾ ಪ್ರತಿಯೊಂದರ ಮೇಲೂ ವಿಶ್ವಾಸವಿರಿಸಬೇಕೆಂದು ಒತ್ತಿ ಹೇಳಲಾಗಿದೆ.

## ಎಲ್ಲ ದೈವಿಕ ಗ್ರಂಥಗಳ ಮೇಲೆ ವಿಶ್ವಾಸ

ಒಬ್ಬನು ಮುಸ್ಲಿಮನಾಗಬೇಕಾದರೆ, ಎಲ್ಲ ಸಂದೇಶವಾಹಕರು ಮತ್ತು ಪ್ರವಾದಿಗಳ ಮೇಲೆ ವಿಶ್ವಾಸವಿರಿಸುವುದು ಅಗತ್ಯವಾಗಿರುವಂತೆ ಅಲ್ಲಾಹನ ಎಲ್ಲಾ ಗ್ರಂಥಗಳ ಮೇಲೆ ವಿಶ್ವಾಸವಿರಿಸುವುದೂ ಅಗತ್ಯವಾಗಿದೆ ಎಂದು ಇಸ್ಲಾಮ್ ನಮಗೆ ಕಲಿಸಿ ಕೊಟ್ಟಿದೆ. ಇದನ್ನು ಕುರ್‌ಆನ್ ಅಲ್ಲಲ್ಲಿ ತಿಳಿಸಿದೆ. ನೋಡಿರಿ,

**''ನಿಮಗೆ ಅವತೀರ್ಣಗೊಳಿಸಿದ ಗ್ರಂಥದ (ಅರ್ಥಾತ್ ಕುರ್‌ಆನ್) ಮತ್ತು ನಿಮಗಿಂತ ಮೊದಲು ಅವತೀರ್ಣಗೊಳಿಸಿದ್ದ ಎಲ್ಲಾ ಗ್ರಂಥಗಳ ಮೇಲೆ ವಿಶ್ವಾಸವಿಡುವವರಿಗೆ ಮತ್ತು ಪರಲೋಕದ ಮೇಲೆ ದೃಢ ವಿಶ್ವಾಸವಿಡುವವರಿಗೆ (ಇದು ಮಾರ್ಗದರ್ಶಿ). ಸಂದೇಶವಾಹಕರು ತನ್ನ ಪ್ರಭುವಿನ ವತಿಯಿಂದ ಅವತೀರ್ಣಗೊಂಡುದರ ಮೇಲೆ ವಿಶ್ವಾಸವಿರಿಸಿದ್ದಾರೆ ಮತ್ತು ಈ ಸಂದೇಶವಾಹಕರ ಮೇಲೆ ವಿಶ್ವಾಸವಿಡುವವರು ಸಹ ಈ ಬೋಧನೆಯನ್ನು ಹೃತ್ಪೂರ್ವಕ ಸ್ವೀಕರಿಸಿದ್ದಾರೆ. ಇವರೆಲ್ಲರೂ ಅಲ್ಲಾಹ ನಲ್ಲಿಯೂ ಅವನ ದೇವಚರರಲ್ಲಿಯೂ ಅವನ ದಿವ್ಯಗ್ರಂಥಗಳಲ್ಲಿಯೂ ಅವನ ಸಂದೇಶವಾಹಕರಲ್ಲಿಯೂ ವಿಶ್ವಾಸವಿರಿಸುತ್ತಾರೆ. ''ನಾವು ಅಲ್ಲಾಹನ ಸಂದೇಶವಾಹಕರ ನಡುವೆ ಯಾವತ್ತು ತಾರತಮ್ಯವನ್ನಿರಿಸುವುದಿಲ್ಲ, ನಾವು ಆಜ್ಞೆಯನ್ನು ಆಲಿಸಿದೆವು ಮತ್ತು ಅನುಸರಣೆಯನ್ನು ಸ್ವೀಕರಿಸಿದೆವು. ನಮ್ಮ ಪ್ರಭೂ, ನಾವು ನಿನ್ನಿಂದ ಪಾಪ ವಿಮೋಚನೆಯನ್ನು ಬಯಸುತ್ತೇವೆ ಮತ್ತು ನಮಗೆ ನಿನ್ನ ಕಡೆಗೇ ಮರಳಲಿಕ್ಕಿದೆ ಎಂದು ಅವರೆನ್ನುತ್ತಾರೆ.''''**

**(ಪವಿತ್ರ ಕುರ್‌ಆನ್, 2:4,285)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್, 3:3,184, 40:70, 57:25)
ಈ ನಿಟ್ಟಿನಲ್ಲಿ ಕೆಲವು ಗ್ರಂಥಗಳ ಹೆಸರೆತ್ತಿ ಕುರ್‌ಆನಿನಲ್ಲಿ ಪ್ರಸ್ತಾಪಿಸಲಾಗಿದೆ. ಅವುಗಳ ಮೇಲೆ ಅವಶ್ಯವಾಗಿ ವಿಶ್ವಾಸವಿರಿಸಬೇಕು. ಹೆಸರೆತ್ತದೆ ಪ್ರಸ್ತಾಪಿಸಿದ ಗ್ರಂಥಗಳ ಮೇಲೂ ವಿಶ್ವಾಸ ಕಡ್ಡಾಯ. ಏಕೆಂದರೆ ಅವೆಲ್ಲವೂ ಒಂದೇ ಮೂಲದಿಂದ ಬಂದಿವೆ. ಈ ಪೈಕಿ ತೌರಾತನ್ನು ಮಾರ್ಗದರ್ಶಕ, ಪ್ರಕಾಶ, ಒರೆಗಲ್ಲು, ಬೆಳಕು, ಅನುಗ್ರಹವೆನ್ನಲಾಗಿದೆ.

‘‘ನಾವು ‘ತೌರಾತ’ನ್ನು ಅವತೀರ್ಣಗೊಳಿಸಿದ್ದೆವು. ಅದರಲ್ಲಿ ಮಾರ್ಗದರ್ಶನ ಮತ್ತು ಪ್ರಕಾಶವಿತ್ತು. ಮುಸ್ಲಿಮರಾಗಿದ್ದ (ಅಲ್ಲಾಹನ ಆಜ್ಞಾನುಸಾರಿಗಳಾಗಿದ್ದ) ಎಲ್ಲ ಪ್ರವಾದಿಗಳೂ ಅದರ ಪ್ರಕಾರವೇ ಈ ಯಹೂದಿಗಳ ವ್ಯಾಜ್ಯಗಳನ್ನು ಇತ್ಯರ್ಥ ಗೊಳಿಸುತ್ತಿದ್ದರು ಮತ್ತು ಇದೇ ರೀತಿಯಲ್ಲಿ ರಬ್ಬಾನಿಗಳೂ ಅಹ್‌ಬಾರರೂ ಇದರ ಆಧಾರ ಪ್ರಕಾರವೇ ತೀರ್ಪು ನೀಡುತ್ತಿದ್ದರು ಏಕೆಂದರೆ ಅವರನ್ನು ದೇವಗ್ರಂಥದ ರಕ್ಷಣೆಯ ಹೊಣೆಗಾರರನ್ನಾಗಿ ಮಾಡಲಾಗಿತ್ತು. (ಅವರು ಅದಕ್ಕೆ ಸಾಕ್ಷಿಗಳಾಗಿದ್ದರು). ಆದುದರಿಂದ (ಓ ಯಹೂದಿ ವರ್ಗದವರೇ) ನೀವು ಜನರನ್ನು ಭಯಪಡಬೇಡಿರಿ, ನನ್ನನ್ನು ಭಯಪಡಿರಿ ಮತ್ತು ನನ್ನ ಸೂಕ್ತಗಳನ್ನು ಅಲ್ಪ ಪ್ರತಿಫಲ ಪಡೆದು ಮಾರಾಟ ಮಾಡುವುದನ್ನು ಬಿಟ್ಟುಬಿಡಿರಿ. ಅಲ್ಲಾಹನು ಅವತೀರ್ಣಗೊಳಿಸಿದ ಕಾನೂನಿನ ಪ್ರಕಾರ ತೀರ್ಮಾನ ಮಾಡದವರೇ ಕಾಫಿರರು(ಸತ್ಯನಿಷೇಧಿಗಳು).’’ (ಪವಿತ್ರ ಕುರ್‌ಆನ್, 5:44)

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್, 21:48, 28:43, 46:12)
ಇಂಜೀಲನ್ನೂ ಮಾರ್ಗದರ್ಶಕ, ಪ್ರಕಾಶ ಮತ್ತು ಉಪದೇಶವೆಂದು ಕರೆಯಲಾಗಿದೆ.

(ಪವಿತ್ರ ಕುರ್‌ಆನ್, 5:46)

ಇಸ್ಲಾಮೀ ನಂಬಿಕೆಯ ಪ್ರಕಾರ, ಪ್ರವಾದಿಗಳು(ಅಲ್ಲಾಹನ ಗ್ರಂಥವನ್ನು) ಅವನ ವತಿಯಿಂದ ತಂದು ತಲುಪಿಸದ ಯಾವ ಜನಾಂಗವೂ ಚರಿತ್ರೆಯಲ್ಲಿಲ್ಲ. ಎಷ್ಟೆಲ್ಲ ಗ್ರಂಥಗಳು ಲೋಕದ ನಾನಾ ಭಾಗಗಳಿಗೆ ಮತ್ತು ನಾನಾ ಜನಾಂಗಗಳಿಗೆ ಬಂದಿದ್ದುವೋ ಅವೆಲ್ಲವೂ ಒಂದೇ ಮೂಲದಿಂದ ಬಂದವುಗಳಾಗಿವೆ. ಎಲ್ಲವೂ ಒಂದೇ ಸತ್ಯ, ಒಂದೇ ಸನ್ಮಾರ್ಗ ಮತ್ತು ಒಂದೇ ಪ್ರಕಾಶದೊಂದಿಗೆ ಬಂದಿವೆ. ಅದರ ಹೆಸರೇ 'ಇಸ್ಲಾಮ್'. ಆದ್ದರಿಂದ 'ಮುಸ್ಲಿಮನು' ಆ ಎಲ್ಲ ಗ್ರಂಥಗಳ ಮೇಲೆ ವಿಶ್ವಾಸವಿರಿಸುತ್ತಾನೆ. ಅವುಗಳ ಪೈಕಿ ಒಂದನ್ನಾದರೂ ನಿರಾಕರಿಸಿದವನು ಸಕಲ ಗ್ರಂಥಗಳನ್ನೂ ನಿರಾಕರಿಸುತ್ತಾನೆ. ಅದರ ಮೂಲವನ್ನೇ ಸುಳ್ಳಾಗಿಸುತ್ತಾನೆ.

## ಕೇವಲ ಕುರ್‌ಆನಿನ ಅನುಸರಣೆ

ಈಮಾನಿನ ಬಳಿಕ ಅನುಸರಣೆಯ ಪ್ರಶ್ನೆ ಬರುವಾಗ, ಇತರೆಲ್ಲ ಗ್ರಂಥಗಳನ್ನು ಬಿಟ್ಟು ಕೇವಲ ಕುರ್‌ಆನನ್ನು ಅನುಸರಿಸಬೇಕಾಗಿದೆ. ಅದಕ್ಕೆ ಅನೇಕ ಕಾರಣಗಳಿವೆ.

1) ಈ ಹಿಂದಿನ ಗ್ರಂಥಗಳ ಪೈಕಿ ಯಾವುದೂ ಸುರಕ್ಷಿತವಾಗಿ ಉಳಿದಿಲ್ಲ, ಕೆಲವೊಂದರ ಅಸ್ತಿತ್ವವೇ ಇಲ್ಲ, ಎಲ್ಲದರಲ್ಲೂ ದೇವ ವಾಕ್ಯಗಳ ಜೊತೆಗೆ ಮಾನವ ವಚನಗಳು ಸೇರಿಕೊಂಡು ಕಲುಷಿತವಾಗಿವೆ. ಅದರಲ್ಲಿ ಎಷ್ಟು ಸತ್ಯವಿದೆ, ಎಷ್ಟಂಶ ಅಸತ್ಯವಿದೆಯೆಂದು ಕಂಡು ಹಿಡಿಯುವುದು ಕಷ್ಟ, ಕೆಲವು ಗ್ರಂಥಗಳ ಬಗ್ಗೆ ಅವು ದೇವನ ವತಿಯಿಂದ ಬಂದಿದೆಯೆಂಬ ಕಲ್ಪನೆಯೇ ಇಲ್ಲ, ಕೆಲವದರ ಕುರಿತು, ಅವು ದೇವ ಗ್ರಂಥವಾಗಿದ್ದರೆ ಯಾವ ಕಾಲದಲ್ಲಿ ಯಾವ ಪ್ರವಾದಿಯ ಮೇಲೆ ಇಳಿದಿತ್ತು ಎಂಬುದು ತಿಳಿದಿಲ್ಲ, ಕೆಲವು ಗ್ರಂಥಗಳ ಭಾಷೆಯೇ ಸತ್ತು ಹೋಗಿವೆ. ಅವುಗಳ ನಿಜವಾದ ಅರ್ಥ ನಿರ್ಣಯಿಸುವುದು ಕಷ್ಟ, ಕೆಲವದರಲ್ಲಿ ಮಾನವನ ಭಾವನೆಗಳು, ತಪ್ಪು ವಿಚಾರಗಳು, ಮೂಢನಂಬಿಕೆಗಳು ಸೇರಿಕೊಂಡಿವೆ. ಇನ್ನು ಕೆಲವದರಲ್ಲಿ ಬಹುದೇವತ್ವ, ಇತರರ ಆರಾಧನೆ ಮತ್ತಿತರ ಇಂತಹದೇ ತಪ್ಪು ನಂಬಿಕೆಗಳೂ ಕರ್ಮಗಳೂ ತುಂಬಿಕೊಂಡಿವೆ. ಅದು ಸತ್ಯವಾಗಲು ಸಾಧ್ಯವಿಲ್ಲ, ಹಾಗಿರುವಾಗ ಮಾನವನಿಗೆ ಸರಿಯಾದ ಜ್ಞಾನ ಮತ್ತು ಬೆಳಕು ಸಿಗಲಾರದು. ಅವುಗಳನ್ನು ಅನುಸರಿಸಿದರೆ ಮಾನವ ಪಥಭ್ರಷ್ಟತೆಯಿಂದ ಸುರಕ್ಷಿತನಾಗಲಾರ.

2) ಕುರ್‌ಆನಿನ ಹೊರತು ಈಗ ಇರುವ ಗ್ರಂಥಗಳು-ಅವು ದೈವಿಕವಾಗಿರಲಿ, ದೈವಿಕವೆಂಬ ಶಂಕೆಯಿರಲಿ- ಅವುಗಳ ಶಿಕ್ಷಣ ಬೋಧನೆಗಳಲ್ಲಿ ಸೀಮಿತ ಜನಾಂಗೀಯತೆಯ ಪ್ರಭಾವ ಕಂಡು ಬರುತ್ತದೆ. ಅವುಗಳಲ್ಲಿ ಆಯಾ ಕಾಲದ ಪ್ರಭಾವ ಹೆಚ್ಚಿದೆ. ಅದು ಎಲ್ಲ ಕಾಲದ ಮನುಷ್ಯರಿಗೆ ಮಾರ್ಗದರ್ಶನವಾಗಲಾರದು.

3) ಆ ಎಲ್ಲ ಗ್ರಂಥದಲ್ಲಿ ಸತ್ಯದ ಶಿಕ್ಷಣ, ಮಾನವರ ಚಾರಿತ್ರ್ಯ ಮತ್ತು ವ್ಯವಹಾರಗಳ ಸುಧಾರಣೆಯ ಕೆಲವು ಅಂಶಗಳು ಮತ್ತು ಕಾನೂನು ಖಂಡಿತ ಇವೆ. ಆದರೆ ಅವುಗಳ ಪೈಕಿ ಯಾವುದರಲ್ಲೂ ಎಲ್ಲ ಒಳಿತುಗಳಿಲ್ಲ, ಮಾನವ ಜೀವನದ ಎಲ್ಲ ರಂಗಗಳಿಗೂ ಅದರಿಂದ ಸರಿಯಾದ ಮಾರ್ಗದರ್ಶನ ದೊರೆಯುವುದಿಲ್ಲ.

ಪವಿತ್ರ ಕುರ್‌ಆನ್ ಈ ಎಲ್ಲ ನ್ಯೂನತೆಗಳಿಂದಲೂ ಮುಕ್ತವಾಗಿದೆ.

(ಅ) ಅದು ಪ್ರವಾದಿ ಮುಹಮ್ಮದ್(ಸ) ಅವರಿಗೆ ಅವತೀರ್ಣವಾದಾಗ ಇದ್ದ ಹಾಗೆಯೇ ಇಂದಿಗೂ ಇದೆ. ಪ್ರಥಮ ದಿನದಿಂದಲೇ ಲಕ್ಷಗಟ್ಟಳೆ ಜನರು ಅದನ್ನು ಅಲ್ಪವೂ ವ್ಯತ್ಯಾಸವಿಲ್ಲದೆ ಕಂಠಪಾಠ ಮಾಡಿದ್ದಾರೆ. ಪ್ರತಿದಿನ ಕೋಟಿಗಟ್ಟಳೆ ಜನರು ಅದನ್ನು ಪಠಿಸುತ್ತಿದ್ದಾರೆ. ಎಲ್ಲ ಕಾಲಗಳಲ್ಲೂ ಅದನ್ನು ಲಿಖಿತ ರೂಪದಲ್ಲಿ ಯಾವುದೇ ಪದ ವ್ಯತ್ಯಾಸವಿಲ್ಲದೆ ಇರಿಸಲಾಗಿದೆ. ಆದ್ದರಿಂದ ಇಂದು ಲಭ್ಯವಿರುವ ಕುರ್‌ಆನ್ ಪ್ರವಾದಿವರ್ಯರಿಗೆ(ಸ) ಅವತೀರ್ಣಗೊಂಡ ಅದೇ ಕುರ್‌ಆನ್ ಎಂಬುದರಲ್ಲಿ ಎಳ್ಳಷ್ಟೂ ಸಂಶಯಕ್ಕೆಡೆಯಿಲ್ಲ.

(ಆ) ಕುರ್‌ಆನ್ ಅರಬಿ ಭಾಷೆಯಲ್ಲಿ ಅವತೀರ್ಣಗೊಂಡಿದೆ. ಅದೊಂದು ಜೀವಂತ ಭಾಷೆಯಾಗಿದ್ದು ಅದನ್ನು ಬಲ್ಲ ಮತ್ತು ಓದುವ ಜನರು ಕೋಟಿಗಟ್ಟಲೆ ಸಂಖ್ಯೆಯಲ್ಲಿದ್ದಾರೆ. ಅದರ ಸಾಹಿತ್ಯ ಮತ್ತು ಸೌಂದರ್ಯ ಅಂದಿದ್ದಂತೆಯೇ ಇಂದೂ ಇದೆ.

(ಇ) ಅದು ಸಂಪೂರ್ಣ ಸತ್ಯವಾಗಿದೆ. ಅದರ ಶಿಕ್ಷಣಗಳು ಆರಂಭದಿಂದ ಕೊನೆಯವರೆಗೂ ದೇವನದ್ದಾಗಿವೆ. ಅದರಲ್ಲೆಲ್ಲೂ ಮಾನವನ ಭಾವನೆ, ಸ್ವಾರ್ಥ, ಜನಾಂಗೀಯ ಪಕ್ಷಪಾತ ಮತ್ತು ಪಥಭ್ರಷ್ಟತೆಯು ಎಳ್ಳಷ್ಟೂ ಕಾಣಸಿಗದು. ಅದರಲ್ಲಿ ದೇವವಚನದೊಂದಿಗೆ ಮಾನವ ವಚನಗಳು ಸ್ವಲ್ಪವೂ ಸೇರಿಲ್ಲ.

(ಈ) ಅದರಲ್ಲಿ ಮಾನವ ಕುಲವನ್ನು ಅಭಿಸಂಬೋಧಿಸಲಾಗಿದೆ. ವಿಶ್ವಾಸ, ನೈತಿಕ ನಿಯಮಗಳು ಮತ್ತು ಕರ್ಮ ವಿಧಾನಗಳು ಯಾವುದೇ ದೇಶ, ಜನಾಂಗ ಮತ್ತು ನಿರ್ದಿಷ್ಟ ಕಾಲಕ್ಕೆ ಸೀಮಿತವಾಗಿಲ್ಲ. ಅದರ ಶಿಕ್ಷಣವು ಸಾರ್ವತ್ರಿಕವೂ ಶಾಶ್ವತವೂ ಆಗಿದೆ.

(ಉ) ಅದರಲ್ಲಿ ಈ ಹಿಂದಿನ ಗ್ರಂಥಗಳಲ್ಲಿರುವ ಎಲ್ಲ ವಾಸ್ತವಿಕತೆಗಳು ಹಾಗೂ ಒಳಿತುಗಳನ್ನು ಸೇರಿಸಲಾಗಿದೆ. ಯಾವುದೇ ಧರ್ಮ ಗ್ರಂಥದಿಂದ ಸತ್ಯ ಮತ್ತು ಒಳಿತಿನ ಯಾವುದಾದರೊಂದು ವಿಷಯವನ್ನು ತೆಗೆದು ಇದು ಕುರ್‌ಆನಿನಲ್ಲಿಲ್ಲ ಎಂದು ತೋರಿಸಿ ಕೊಡಲು ಸಾಧ್ಯವಿಲ್ಲ. ಇಂತಹ ಸಮಗ್ರ ಗ್ರಂಥ ಇರುವಾಗ ಮನುಷ್ಯನಿಗೆ ಇತರ ಗ್ರಂಥಗಳನ್ನು ಅವಲಂಬಿಸುವ ಅಗತ್ಯವೇ ಇರುವುದಿಲ್ಲ.

(ಊ) ಅದು ದೈವಿಕ ಮಾರ್ಗದರ್ಶನ ಮತ್ತು ಶಿಕ್ಷಣಗಳ ಅತ್ಯಾಧುನಿಕ ಆವೃತ್ತಿ (Latest Edition)ಯಾಗಿದೆ. ಹಿಂದಿನ ಗ್ರಂಥಗಳಲ್ಲಿ ಕೆಲವು ವಿಶೇಷ ಪರಿಸ್ಥಿತಿಗಳಿಗಾಗಿ ನೀಡಲಾಗಿದ್ದ ಆದೇಶಗಳನ್ನು ಈ ಗ್ರಂಥದಿಂದ ತೆಗೆದು ಹಾಕಲಾಗಿದೆ. ಆ ಗ್ರಂಥಗಳಲ್ಲಿಲ್ಲದ ಅನೇಕ ಹೊಸ ವಿಷಯಗಳನ್ನು ಇದರಲ್ಲಿ ಸೇರ್ಪಡೆಗೊಳಿಸಲಾಗಿದೆ. ಆದ್ದರಿಂದ ನಿಜವಾಗಿಯೂ ಒಬ್ಬನು ದೈವಿಕ ಸನ್ಮಾರ್ಗದಲ್ಲಿ ನಡೆಯುವವನಾಗಿದ್ದರೆ, ಅವನು ಹಿಂದಿನ ಎಲ್ಲ ಆವೃತ್ತಿಗಳನ್ನು ಬಿಟ್ಟು ಈ ಅಂತಿಮ ಮತ್ತು ಆಧುನಿಕ ಆವೃತ್ತಿಯನ್ನು ಅನುಸರಿಸುವುದು ಕಡ್ಡಾಯವಾಗಿದೆ.

ಈ ಕಾರಣಗಳಿಂದಾಗಿಯೇ ಇತರೆಲ್ಲ ಗ್ರಂಥಗಳನ್ನು ಬಿಟ್ಟು ಕೇವಲ ಕುರ್‌ಆನನ್ನು ಅನುಸರಿಸಲು ಮತ್ತು ಅದನ್ನೇ ತಮ್ಮ ಜೀವನದ ಸಂವಿಧಾನವಾಗಿ ಅಂಗೀಕರಿಸಲು ಎಲ್ಲ ಮಾನವರಿಗೆ ಕರೆ ನೀಡಲಾಗಿದೆ.

''ಓ ಪೈಗಂಬರರೇ, ಅಲ್ಲಾಹ್ ನಿಮಗೆ ತೋರಿಸಿಕೊಟ್ಟ ಪ್ರಕಾರ ಜನರ ನಡುವೆ ತೀರ್ಪು ನೀಡಲಿಕ್ಕಾಗಿ ನಾವು ನಿಮ್ಮ ಮೇಲೆ ಈ ಗ್ರಂಥವನ್ನು ಸತ್ಯಸಹಿತ ಅವತೀರ್ಣಗೊಳಿಸಿದ್ದೇವೆ. ನೀವು ಅಪ್ರಾಮಾಣಿಕರ ಪರವಾಗಿ ವಾದಿಸುವವರಾಗಬೇಡಿರಿ.''

**(ಪವಿತ್ರ ಕುರ್‌ಆನ್, 4:105)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್, 7:157) ಈ ಕಾರಣದಿಂದಲೇ ಹಿಂದಿನ ಗ್ರಂಥಗಳನ್ನು ಹೊಂದಿರುವ ಮತ ಧರ್ಮದವರೊಂದಿಗೂ ಕುರ್‌ಆನಿನ ಮೇಲೆ ವಿಶ್ವಾಸವಿರಿಸಲು ಮತ್ತು ಅದನ್ನು ಮಾತ್ರ ಅನುಸರಿಸಲು ಕರೆ ನೀಡಲಾಗಿದೆ. ಪವಿತ್ರ **ಕುರ್‌ಆನ್, 2:99, 4:47, 5:15-16,**

## ಕುರ್‌ಆನಿನ ಕುರಿತು ವಿವರವಾದ ನಂಬಿಕೆ

ಮಾನವನ ವಿಚಾರ-ವಿಶ್ವಾಸಗಳ ನೈಜ ಮಾರ್ಗದರ್ಶಿ, ಜೀವನದಲ್ಲಿ ಕಡ್ಡಾಯವಾಗಿ ಅನುಸರಿಸಬೇಕಾದ ಕಾನೂನಾಗಿರುವ ಗ್ರಂಥದ ಬಗ್ಗೆ ಅದು ಪೂರ್ಣ ಸತ್ಯವಾಗಿದ್ದು ತಪ್ಪುಗಳಿಂದ ಪೂರ್ಣಮುಕ್ತವಾಗಿದೆಯೆಂಬ ದೃಢವಾದ ನಂಬಿಕೆಯಿಲ್ಲದಿದ್ದರೆ ಅದನ್ನು ಅನುಸರಿಸುವುದು ಸಾಧ್ಯವಿಲ್ಲ, ಅದರ ಸತ್ಯತೆ ಮತ್ತು ಪರಿಪೂರ್ಣತೆಯ ಬಗ್ಗೆ ಸ್ವಲ್ಪವಾದರೂ ಸಂದೇಹ ಮೂಡಿದರೆ ಅದರ ಮೇಲಿರುವ ವಿಶ್ವಾಸವು ಹೊರಟು ಹೋದೀತು. ಕೇವಲ ಸಾಂಪ್ರದಾಯಿಕವಾಗಿ ಅದರ ಅನುಸರಣೆ ಸಾಧ್ಯವಿಲ್ಲ, ಆದ್ದರಿಂದ ಕುರ್‌ಆನಿನ ಕುರಿತು ಈ ಕೆಳಗಿನ ಅಂಶಗಳ ಮೇಲೆ ವಿಶ್ವಾಸ ಅಗತ್ಯವಾಗಿದೆ.

1) ಅದು ಅವತೀರ್ಣಗೊಂಡ ರೂಪದಲ್ಲೇ ಉಳಿದುಕೊಂಡಿದೆ. ಅದರಲ್ಲಿ ಯಾವುದೇ ಹೆಚ್ಚು ಕಡಿಮೆ ಆಗಿಲ್ಲ, **(ಪವಿತ್ರ ಕುರ್‌ಆನ್, 15:9, 18:27, 75:17-19, 87:6-7)**

2) ಕುರ್‌ಆನಿನ ಅವತೀರ್ಣದಲ್ಲಿ ಯಾವುದೇ ಪೈಶಾಚಿಕ ಹಸ್ತಕ್ಷೇಪ ನಡೆದಿಲ್ಲ, **(ಪವಿತ್ರ ಕುರ್‌ಆನ್, 26:210-212)**

3) ಕುರ್‌ಆನಿನಲ್ಲಿ ಸ್ವಯಂ ಪ್ರವಾದಿಯವರ(ಸ) ಆಗ್ರಹಕ್ಕೂ ಯಾವುದೇ ಸ್ಥಾನವಿಲ್ಲ, **(ಪವಿತ್ರ ಕುರ್‌ಆನ್, 53:3-4)**

4) ಕುರ್‌ಆನಿನಲ್ಲಿ ಅಸತ್ಯದ ಲವಲೇಶಕ್ಕೂ ಎಡೆಯಿಲ್ಲ, **(ಪವಿತ್ರ ಕುರ್‌ಆನ್, 41: 41-42)**

5) ಕುರ್‌ಆನ್ ಸಂಪೂರ್ಣ ಸತ್ಯವಾಗಿದೆ. ಅದು ಜ್ಞಾನದ ಆಧಾರದಲ್ಲಿ ಅವತೀರ್ಣಗೊಂಡಿದೆಯೇ ಹೊರತು ಯಾವುದೇ ಸಂದೇಹ, ಗುಮಾನಿಗಳ ಆಧಾರದಲ್ಲಲ್ಲ, ಅದರಲ್ಲಿ ಯಾವುದೇ ವಕ್ರತೆಯಿಲ್ಲ, ಸರಿಯಾದ, ನೇರವಾದ ಮಾರ್ಗವನ್ನು ಅದು ತೋರಿಸುತ್ತದೆ. **(ಪವಿತ್ರ ಕುರ್‌ಆನ್, 2:2, 7:52, 17:9, 18:1-2, 25:6, 34:6, 69:51)**

6) ಕುರ್‌ಆನಿನ ಆದೇಶಗಳು ಮತ್ತು ಶಿಕ್ಷಣಗಳಲ್ಲಿ ಯಾವುದೇ ತಿದ್ದುಪಡಿ, ಬದಲಾವಣೆ ಮಾಡುವ ಅಧಿಕಾರ ಯಾರಿಗೂ-ಸ್ವಯಂ ಪ್ರವಾದಿಗೂ-ಇಲ್ಲ, **(ಪವಿತ್ರ ಕುರ್‌ಆನ್, 10:15)**

7) ಕುರ್‌ಆನಿನ ವಿರುದ್ಧವಾದುದು ಅನುಸರಣಾರ್ಹವೇ ಅಲ್ಲ, **(ಪವಿತ್ರ ಕುರ್‌ಆನ್, 7:3)**

ಇದು ಕುರ್‌ಆನಿನ ಕುರಿತು ವಿವರವಾದ ನಂಬಿಕೆಯಾಗಿದೆ. ಅದರ ಎಲ್ಲ ಅಂಶಗಳ ಮೇಲೂ ವಿಶ್ವಾಸವಿರಿಸುವುದು ಕಡ್ಡಾಯವಾಗಿದೆ. ಇದರ ಯಾವುದಾದರೂ ಒಂದಂಶದ ಮೇಲಿನ ಒಬ್ಬನ ವಿಶ್ವಾಸದಲ್ಲಿ ಕೊರತೆಯುಂಟಾದರೆ ಅವನು ಕುರ್‌ಆನನ್ನು ಸರಿಯಾಗಿ ಪೂರ್ಣವಾಗಿ ಅನುಸರಿಸಲಾರ. 'ಇಸ್ಲಾಮ್' ಎಂಬ ನೇರ ಮಾರ್ಗದಿಂದ ಅವನು ಸರಿದು ಬಿಡುವನು.

## ಇಸ್ಲಾಮೀ ಸೌಧದ ಅಡಿಗಲ್ಲು

ಒಂದು ಗ್ರಂಥ ಮತ್ತು ಓರ್ವ ಪ್ರವಾದಿಯ ಮೇಲೆ ವಿಶ್ವಾಸ, ಅದರ ಅನುಸರಣೆ, ಅದರ ಅಚ್ಚಿನಲ್ಲೇ ವಿಚಾರ ರೂಪಿಸುವುದು, ಅದೇ ಮೂಲದಿಂದ ಎಲ್ಲ ವಿಶ್ವಾಸ, ಆಚಾರಗಳು, ವ್ಯವಹಾರ ಮತ್ತು ನೀತಿ ಹಾಗೂ ಎಲ್ಲ ನಾಗರಿಕ ಕಾನೂನು ಹೊರಡುವುದು, ಇಸ್ಲಾಮಿನ ಎಲ್ಲ ಅನುಯಾಯಿಗಳೂ ಅದೇ ವಿಶ್ವಾಸ, ಅನುಸರಣೆಯ ಬಂಧನದಲ್ಲಿ ಪೋಣಿಸಲ್ಪಡುವುದು. ಎಲ್ಲವೂ ಇಸ್ಲಾಮನ್ನು ಒಂದು ಸಂಸ್ಕೃತಿಯಾಗಿಯೂ, ಎಲ್ಲ ರೀತಿಯ ವಂಶೀಯ, ಭಾಷೀಯ, ವರ್ಣೀಯ ಮತ್ತು ಪ್ರಾದೇಶಿಕ ಭಿನ್ನತೆಗಳ ಹೊರತಾಗಿಯೂ ಮುಸ್ಲಿಮರನ್ನು ಒಂದು ಸಮುದಾಯವಾಗಿ ಮಾಡಿದೆ.

ಜ್ಞಾನ, ಬುದ್ಧಿ ಸಂಶೋಧನೆ, ದೃಷ್ಟಿಕೋನ ಮತ್ತು ಒಲವುಗಳಿಂದಾಗಿ, ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯಿಂದ ಹೊರಡುವ ವಿಧಿಗಳಲ್ಲಿ, ಅದನ್ನು ಗ್ರಹಿಸುವಲ್ಲಿ ಭಿನ್ನತೆಗಳಿರಬಹುದಾದರೂ ಅದು ಆಂಶಿಕವಾಗಿವೆ. ಈ ಭಿನ್ನತೆಗಳು ಬೇರೆ ಬೇರೆ ಧರ್ಮ ಮತ್ತು ಅದರ ಅನುಯಾಯಿಗಳನ್ನು ಬೇರೆ ಬೇರೆ ಸಮುದಾಯಗಳಾಗಿ ಮಾಡುವುದಿಲ್ಲ. ವಾಸ್ತವದಲ್ಲಿ ಇಸ್ಲಾಮೀ ಸೌಧದ ಅಡಿಗಲ್ಲು ಮುಹಮ್ಮದ್(ಸ) ಅವರನ್ನು ಅಲ್ಲಾಹನ ಸಂದೇಶವಾಹಕರೆಂದೂ ಕುರ್‌ಆನನ್ನು ಏಕ ಸಂವಿಧಾನವೆಂದೂ ಒಪ್ಪಿಕೊಳ್ಳುವುದಾಗಿದೆ. ಇದರಲ್ಲಿ ಒಮ್ಮತವಿರುವವರು ಒಂದು ಸಮುದಾಯವಾಗಿಯೂ ಅದಕ್ಕೆ ವಿರುದ್ಧವಾಗಿರುವವರು ಎಷ್ಟೇ ಗುಂಪುಗಳಾಗಿದ್ದರೂ ಇಸ್ಲಾಮಿನ ದೃಷ್ಟಿಯಲ್ಲಿ ಭಿನ್ನ ಸಮುದಾಯವಾಗಿಯೂ ಪರಿಗಣಿಸಲ್ಪಡುತ್ತಾರೆ.

ಇಸ್ಲಾಮೀ ಸೌಧ ನೆಲೆ ನಿಂತಿರುವ ಎಲ್ಲ ವಿಷಯಗಳನ್ನು ಕುರ್‌ಆನ್ ಒಳಗೊಂಡಿದೆ. ಕುರ್‌ಆನಿನ ಮೇಲೆ ವಿಶ್ವಾಸವಿರಿಸಿದವನು ಅಲ್ಲಾಹನನ್ನು, ಅವನ ದೂತರನ್ನು, ಅವನ ಗ್ರಂಥಗಳನ್ನು, ಅವನ ಪ್ರವಾದಿಗಳನ್ನು ಹಾಗೂ ಅಂತ್ಯದಿನವನ್ನು ನಂಬಿದನು. ಏಕೆಂದರೆ ಈ ಎಲ್ಲ ವಿಷಯಗಳು ವಿವರಣೆಗಳ ಸಹಿತ ಕುರ್‌ಆನಿನಲ್ಲಿವೆ. ಅದೇ ರೀತಿ ಕುರ್‌ಆನಿನಲ್ಲಿ ಇಸ್ಲಾಮೀ ಶರೀಅತ್‌ನ ಎಲ್ಲ ಮೂಲಭೂತ ನಿಯಮಗಳು ಮತ್ತು ಕಾನೂನುಗಳೂ ಇವೆ. ಅದರಂತೆ ಪ್ರವಾದಿ(ಸ) ತಮ್ಮ ಮಾತು-ಕೃತಿಗಳ ಮೂಲಕ ಅದನ್ನು ಸ್ಪಷ್ಟವಾಗಿ ತೋರಿಸಿಕೊಟ್ಟಿದ್ದಾರೆ. ಆದ್ದರಿಂದ ಸರಿಯಾದ ವಿಶ್ವಾಸದೊಂದಿಗೆ ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯನ್ನು ತನ್ನ ಜೀವನದ ಎಲ್ಲ ವಿಷಯಗಳಲ್ಲೂ ಕಾನೂನಾಗಿ ಅಂಗೀಕರಿಸಿದವನು ಖಂಡಿತವಾಗಿಯೂ ವಿಶ್ವಾಸ ಮತ್ತು ಕರ್ಮದ ದೃಷ್ಟಿಯಿಂದ ಮುಸ್ಲಿಮನಾಗಿದ್ದಾನೆ. ಅದರ ಹೆಸರೇ ಇಸ್ಲಾಮ್ ಆಗಿದೆ. ಅದಿಲ್ಲದಿದ್ದರೆ ಇಸ್ಲಾಮ್ ಕೂಡಾ ಇಲ್ಲ.

# ಅಂತ್ಯ ದಿನದ ಮೇಲೆ ವಿಶ್ವಾಸ

ಅಂತ್ಯ ದಿನವೆಂದರೆ ಮರಣಾನಂತರದ ಜೀವನವಾಗಿದೆ. ಕುರ್‌ಆನಿನ ಪುಟಪುಟಗಳಲ್ಲಿ ಅದರ ಪ್ರಸ್ತಾಪವಿದೆ. ತರತರವಾಗಿ ಅದನ್ನು ಮನವರಿಕೆ ಮಾಡಿಕೊಡಲಾಗಿದೆ. ಅದರ ಸತ್ಯತೆಯನ್ನು ಪ್ರತಿಪಾದಿಸುವ ಪುರಾವೆಗಳನ್ನು ನೀಡಲಾಗಿದೆ. ಅದರ ಮಹತ್ವವನ್ನು ವಿವರಿಸಿ ಅದರ ಮೇಲೆ ವಿಶ್ವಾಸವಿರಿಸುವಂತೆ ಕರೆ ನೀಡಲಾಗಿದೆ. ಈ ಪರಲೋಕ ಜೀವನವನ್ನು ನಂಬದವನ ಎಲ್ಲ ಕರ್ಮಗಳೂ ವ್ಯರ್ಥವಾಗಿ ಹೋಗುವುವು ಎಂದು ಸ್ಪಷ್ಟವಾಗಿ ಸಾರಲಾಗಿದೆ.

**(ಪವಿತ್ರ ಕುರ್‌ಆನ್, 6:4, 7:17)**

ವಾಸ್ತವದಲ್ಲಿ ಪರಲೋಕದ ಬಗೆಗಿನ ನಂಬಿಕೆಯು ಮಾನವನಲ್ಲಿ ಸಹಜವಾಗಿ ಮೂಡುವ ಕೆಲವು ಪ್ರಶ್ನೆಗಳ ಉತ್ತರವಾಗಿದೆ.

ಮಾನವ ಸಂತೋಷಕ್ಕಿಂತ ಹೆಚ್ಚು ದುಃಖ, ಸುಖಕ್ಕಿಂತ ಹೆಚ್ಚು ಸಂಕಷ್ಟವನ್ನು ಗ್ರಹಿಸುತ್ತಾನೆ. ಸುಖ-ಸಂತೋಷದಲ್ಲಿರುವಾಗ ಗಮನ ಕೊಡದ ವಿಷಯಗಳ ಬಗ್ಗೆ ದುಃಖ, ಸಂಕಷ್ಟಗಳ ವೇಳೆ ಯೋಚನೆಗೀಡಾಗುತ್ತಾನೆ. ಪ್ರತಿಯೊಬ್ಬನಿಗೂ ಸಾಯಬೇಕಾಗಿದೆ. ಅದರ ಕಹಿಯನ್ನು ಅನುಭವಿಸಬೇಕಾಗುತ್ತದೆ. ಮನುಷ್ಯ ತನ್ನ ಕಣ್ಣಮುಂದೆಯೇ ತನ್ನ ಆಪ್ತೇಷ್ಟರು ಸಾಯುವುದನ್ನು ನೋಡುತ್ತಾನೆ. ಸಾಯುವವರಲ್ಲಿ ದುರ್ಬಲರೂ ಬಲಶಾಲಿಗಳೂ ಇದ್ದಾರೆ. ಅಸಹಾಯಕರೂ ಪ್ರತಾಪವಂತರೂ ಇರುತ್ತಾರೆ. ಕೆಲವು ಮರಣಗಳು ದುಃಖದಾಯಕವಾಗಿದ್ದರೆ, ಇನ್ನು ಕೆಲವು ಪಾಠದಾಯಕವಾಗಿರುತ್ತವೆ. ಆಗ ತಾನೂ ಒಂದು ದಿನ ಸಾಯಲಿದ್ದೇನೆ ಎಂಬ ಸತ್ಯವನ್ನು ಅವನು ಮನಗಾಣುತ್ತಾನೆ. ಆದರೆ ಈ ಮರಣವೆಂದರೇನು? ಇದರ ನಂತರ ಮನುಷ್ಯ ಎಲ್ಲಿಗೆ ಹೋಗುತ್ತಾನೆ. ಮರಣದ ಹಿಂದೆ ಏನಿದೆ? ಏನಾದರೂ ಇದೆಯೋ ಅಥವಾ ಇಲ್ಲವೋ ಎಂಬ ಪ್ರಶ್ನೆಗಳು ಅವನನ್ನು ಕಾಡದೆ ಇರುವುದಿಲ್ಲ.

ಈ ಲೋಕದಲ್ಲಿ ನಮಗೆ ದೊರಕುವ ಕೆಲವು ವರ್ಷಗಳಲ್ಲಿ ಪ್ರತಿಕ್ಷಣ ನಾವು ಯಾವುದಾದರೊಂದು ಕೆಲಸದಲ್ಲಿ ನಿರತರಾಗುತ್ತೇವೆ. ಶಾಂತಿ ಸಮಾಧಾನವೆಂದು ನಾವು ಭಾವಿಸುವುದೂ ಒಂದು ಕೆಲಸವಾಗಿದೆ. ನಿರುದ್ಯೋಗವೂ ಒಂದು ಕೆಲಸವಾಗಿದೆ. ಅವುಗಳ ಪೈಕಿ ಪ್ರತಿಯೊಂದು ಚಲನವಲನದ ಪ್ರತಿಕ್ರಿಯೆ, ಪರಿಣಾಮ ಮತ್ತು ಪ್ರತಿಫಲ

ಸಿಗಲೇಬೇಕಾಗಿದೆ. ಒಳ್ಳೆಯ ಕೆಲಸಗಳಿಗೆ ಉತ್ತಮ ಪ್ರತಿಫಲ, ಕೆಟ್ಟ ಕೆಲಸಗಳಿಗೆ ಕೆಟ್ಟ ಪರಿಣಾಮ ಖಂಡಿತ ಪ್ರಕಟವಾಗಬೇಕಾಗಿದೆ. ಆದರೆ ನಮ್ಮ ಎಲ್ಲ ಪ್ರಯತ್ನಗಳಿಗೆ, ಎಲ್ಲ ಕೆಲಸಗಳಿಗೆ ಅದರದೇ ಆದ ಪ್ರತಿಫಲ ನಮಗೆ ಸಿಗುತ್ತದೆಯೇ? ಒಬ್ಬ ದುಷ್ಟನು ತನ್ನ ಜೀವಮಾನವಿಡೀ ದುಷ್ಕೃತ್ಯಗಳಲ್ಲಿ ಕಳೆಯುತ್ತಾನೆ. ಕೆಲವು ಕೃತ್ಯಗಳ ಪರಿಣಾಮವನ್ನು ಇಲ್ಲಿ ಅನುಭವಿಸುತ್ತಾನೆ. ಅವನ ದುಷ್ಕೃತ್ಯಗಳ ಕಾರಣ ಅವನು ಮಾರಕ ರೋಗಕ್ಕೆ ತುತ್ತಾಗಬಹುದು, ಅವನಿಗೆ ಸಂಕಷ್ಟಗಳುಂಟಾಗಬಹುದು ಅವನ ಮೇಲೆ ಆಪತ್ತುಗಳೆರಗಬಹುದು. ಆದರೆ ಅನೇಕ ದುಷ್ಕೃತ್ಯಗಳ ಪ್ರತಿಫಲ ಅವನಿಗೆ ಇಲ್ಲಿ ಸಿಗದೆಯೂ ಇರಬಹುದು. ಕೆಲವು ದುಷ್ಕೃತ್ಯಗಳು ಗುಪ್ತವಾಗಿ ನಡೆದಿದ್ದು ಯಾರ ಗಮನಕ್ಕೂ ಬಾರದೆ ಇರಬಹುದು. ಅವನು ಅಪಮಾನದಿಂದ ಪಾರಾಗಿರಬಹುದು. ಒಂದು ವೇಳೆ ಅವನು ಸಾರ್ವಜನಿಕರೆದುರು ಬೆತ್ತಲೆಯಾದರೂ ಅವನಿಂದ ಅನ್ಯಾಯಕ್ಕೊಳಗಾದವನಿಗೆ ಏನು ಸಿಕ್ಕಿತು? ಆ ದುಷ್ಟನ ಅಕ್ರಮ ಮತ್ತು ಮರ್ದಿತನ ಸಹನೆ ವ್ಯರ್ಥವಾಗಿ ಹೋಯಿತೋ? ಉಭಯತ್ರರ ಪರಿಣಾಮ ಎಂದೂ ಪ್ರಕಟಗೊಳ್ಳುವುದಿಲ್ಲವೇ? ಒಳಿತಿನ ಸ್ಥಿತಿಯೂ ಅಷ್ಟೇ. ಅನೇಕ ಮಂದಿ ಸಜ್ಜನರು ಜೀವಮಾನವಿಡೀ ಒಳ್ಳೆಯ ಕಾರ್ಯಗಳನ್ನು ಮಾಡಿದ್ದಾರೆ. ಆದರೆ ಅವರಿಗೆ ಅದರ ಪೂರ್ಣ ಪ್ರತಿಫಲ ಇಲ್ಲಿ ಸಿಕ್ಕಿಯೇ ಇಲ್ಲ, ಕೆಲವು ಒಳಿತುಗಳಿಗಾಗಿ ಅವರಿಗೆ ಅಪಮಾನ, ಹಿಂಸೆ ಇತ್ಯಾದಿ ಅನುಭವಿಸಬೇಕಾಯಿತು. ಕೆಲವು ಒಳಿತುಗಳಿಗಾಗಿ ಅವರಿಗೆ ಶಿಕ್ಷೆಯೂ ದೊರೆಯಿತು. ಅವರ ಒಳಿತುಗಳು ಎಂದೂ ಅನಾವರಣಗೊಳ್ಳಲಿಲ್ಲ, ಜನರ ಗಮನಕ್ಕೆ ಬರಲಿಲ್ಲ, ಇವರ ಒಳಿತುಗಳೆಲ್ಲ ಹೀಗೆಯೇ ವ್ಯರ್ಥವಾಗಿ ಹೋದುವೇ? ಅವರ ಮನಸ್ಸಿಗೆ ಸಮಾಧಾನವಾಯಿತೆಂಬುದು ಅವರ ಕಠಿಣ ಪ್ರಯತ್ನಗಳಿಗೆ ಸೂಕ್ತ ಸಂಭಾವನೆಯೆ?

ಇದು ವ್ಯಕ್ತಿಗಳಿಗೆ ಸಂಬಂಧಿಸಿದ ಪ್ರಶ್ನೆಯಾದರೆ, ಮಾನವಕುಲ, ಸಸ್ಯಸಂಕುಲ, ಪ್ರಾಣಿವರ್ಗಗಳು ಹಾಗೂ ಇಡೀ ಪ್ರಪಂಚಕ್ಕೂ ಅನ್ವಯವಾಗುತ್ತದೆ. ಜನರು ಸಾಯುವುದನ್ನೂ ಅವರ ಸ್ಥಾನದಲ್ಲಿ ಇತರರು ಹುಟ್ಟುವುದನ್ನೂ ನಾವು ನೋಡುತ್ತೇವೆ. ಅದೇ ರೀತಿ ಮರಗಿಡಗಳೂ ಪ್ರಾಣಿಗಳೂ ಅಳಿದು ಹೋಗಿ, ಹೊಸ ವೃಕ್ಷಗಳೂ ಪ್ರಾಣಿಗಳೂ ಜನ್ಮತಾಳುತ್ತವೆ. ಈ ಸಾಯುವ ಮತ್ತು ಹುಟ್ಟುವ ಪ್ರಕ್ರಿಯೆಗೆ ಅಂತ್ಯವಿಲ್ಲವೇ? ಗಾಳಿ, ನೀರು, ಭೂಮಿ, ಬೆಳಕು, ತಾಪ ಹಾಗೂ ನಿಸರ್ಗ ಶಕ್ತಿಗಳೊಂದಿಗೆ ಚಲಿಸುತ್ತಿರುವ ಈ ಪ್ರಪಂಚಕ್ಕೆ ಅಳಿವಿಲ್ಲವೇ? ಅವೆಲ್ಲವೂ ಶಾಶ್ವತವೇ? ಅದರ ವ್ಯವಸ್ಥೆ ಮತ್ತು ರಚನೆಯಲ್ಲಿ ಎಂದೂ ಬದಲಾವಣೆಯಾಗಲಾರದೆ?

ಈ ಎಲ್ಲ ಸಮಸ್ಯೆಯನ್ನು ಇಸ್ಲಾಮ್ ಬಗೆಹರಿಸಿದೆ. ಪರಲೋಕ ವಿಶ್ವಾಸವು ಈ ಪ್ರಶ್ನೆಗಳಿಗಾಗಿರುವ ಉತ್ತರವಾಗಿದೆ. ಆದರೆ ಇದರ ಸತ್ಯತೆ ಹಾಗೂ ನೈತಿಕ ಮತ್ತು ನಾಗರಿಕ ಪರಿಣಾಮಗಳ ಕುರಿತು ಚರ್ಚಿಸುವ ಮುಂಚೆ ಮಾನವ ಈ ನಿಟ್ಟಿನಲ್ಲಿ ಯಾವ ಪ್ರಯತ್ನಗಳನ್ನು ಮಾಡಿದ್ದಾನೆಂದು ನೋಡೋಣ.

## ಪರಲೋಕದ ನಿರಾಕರಣೆ

ಈ ಲೋಕದ ಜೀವನವೇ ಎಲ್ಲವೂ. ಸತ್ತಬಳಿಕ ಎಲ್ಲವೂ ನಾಸ್ತಿಯಾಗುತ್ತವೆ. ಅದರ ನಂತರ ಜೀವನವಾಗಲೀ ಪ್ರಜ್ಞೆ, ಭಾವನೆ, ಫಲ ಅಥವಾ ಪರಿಣಾಮಗಳಾಗಲೀ ಯಾವುದೂ ಇಲ್ಲವೆಂದು ಕೆಲವರು ಹೇಳುತ್ತಾರೆ.

**''ನಮ್ಮ ಪ್ರಥಮ ಬಾರಿಯ ಮೃತ್ಯುವಿನ ಹೊರತು ಬೇರೇನೂ ಇಲ್ಲ. ಆ ಬಳಿಕ ನಾವು ಪುನಃ ಎಬ್ಬಿಸಲ್ಪಡಲಾರೆವು. ನೀವು ಸತ್ಯವಾದಿಯಾಗಿದ್ದರೆ ನಮ್ಮ ಪೂರ್ವಜರನ್ನು ಎಬ್ಬಿಸಿ ತನ್ನಿರಿ.'' (ಪವಿತ್ರ ಕುರ್‌ಆನ್, 44:35-36)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್,45:24)

ಈ ಪ್ರಪಂಚವು ಹೀಗೆಯೇ ನಡೆಯುತ್ತಿದ್ದು ಇದೆಂದೂ ಅಸ್ತವ್ಯಸ್ತವಾಗದು ಎಂದವರು ಹೇಳುತ್ತಾರೆ. ಈ ರೀತಿ ಹೇಳುವವರು ಯಾವುದೇ ಜ್ಞಾನ ಮೂಲದಿಂದ ಪಡೆದ ಮಾಹಿತಿಯಿಂದ ಹೇಳುತ್ತಿಲ್ಲ, ವಾಸ್ತವದಲ್ಲಿ ಅವರು ಮೃತ್ಯುವಿನ ನಂತರ ಏನಾಗುತ್ತದೆಂಬುದನ್ನು ಕಂಡಿಲ್ಲ. ಈ ಪ್ರಪಂಚ ವ್ಯವಸ್ಥೆಯು ಅಲ್ಲೋಲ ಕಲ್ಲೋಲವಾಗುವ ಯಾವುದೇ ಕುರುಹನ್ನು ಅವರು ಕಂಡಿಲ್ಲ, ಆದರೆ ಯಾವುದೇ ವಸ್ತು ನಮ್ಮ ಅರಿವಿಗೆ ಬರುವುದಿಲ್ಲವೆಂಬುದು ಅದರ ನಿರಾಕರಣೆಗೆ ಪುರಾವೆ ಹೇಗಾಗುತ್ತದೆ? ಒಂದು ವಸ್ತುವಿನ ಇರುವಿಕೆ ಮತ್ತು ಇಲ್ಲದಿರುವಿಕೆಯು ನಮ್ಮ ಭಾವನೆಯನ್ನು ಅವಲಂಬಿಸಿದೆಯೇ? ಇದು ಸರಿಯೆಂದಾದರೆ ಮರಣದ ನಂತರದ ಸ್ಥಿತಿಯು ನಮ್ಮ ಇಂದ್ರಿಯಾನುಭವಕ್ಕೆ ಬಂದಿಲ್ಲವೆಂಬ ಕಾರಣ ಮರಣಾನಂತರ ಜೀವನವೇ ಇಲ್ಲವೆಂದು ನಂಬಬಹುದೆ?

ಈ ಲೋಕಕ್ಕೆ ಅಳಿವಿದೆಯೆಂಬುದನ್ನು ಈಗ ವಿಜ್ಞಾನಿಗಳೂ ಒಪ್ಪುತ್ತಾರೆ. ಆದರೆ ಮರಣದ ಬಳಿಕ ಯಾವುದೇ ಜೀವನವಿಲ್ಲವೆಂಬ ಅವರ ಮಾತು ಅರ್ಥಹೀನವಾಗಿದೆ. ಮರಣಾನಂತರ ಜೀವನದ ವಿಶ್ವಾಸ ಮನುಷ್ಯನಲ್ಲಿಲ್ಲದಿದ್ದರೆ, ಅದು ಅವನ ನೀತಿ ಚಾರಿತ್ರ್ಯಗಳ ಮೇಲೆ ಪ್ರತಿಕೂಲ ಪರಿಣಾಮ ಬೀರುತ್ತದೆ. ಅವನಲ್ಲಿ ಹತಾಶಭಾವನೆ ಮತ್ತು ಕೀಳರಿಮೆಯುಂಟಾಗುತ್ತದೆ. ಅವನ ಯಾವುದೇ ಕರ್ಮದ ಪರಿಣಾಮ ಇಲ್ಲಿ ಗೋಚರಿಸದಿರುವಾಗ ಅವನ ಕರ್ಮಶಕ್ತಿ ತಣ್ಣಗಾಗುತ್ತದೆ. ತನ್ನ ಮರ್ದಿತಾವಸ್ಥೆಯನ್ನು ಕೇಳುವವರಿಲ್ಲವೆಂದು ಅವನಿಗೆ ಅನಿಸಿದಾಗ ಅವನು ಸುಸ್ತಾಗಿ ಬಿಡುತ್ತಾನೆ. ಲೋಕದಲ್ಲಿ ದುಷ್ಟರು, ಅಪರಾಧಿಗಳು ಮತ್ತು ಅಕ್ರಮಿಗಳು ಮೆರೆಯುವುದನ್ನು ಕಂಡಾಗ, ಇಲ್ಲಿ ಕೆಡುಕೇ ಇರುವುದು, ಒಳಿತಿಗೆ ಸ್ಥಾನವೇ ಇಲ್ಲವೆಂದು ಅವನು ಭಾವಿಸುತ್ತಾನೆ. ಇನ್ನು ಅನುಕೂಲಕರ ಪರಿಸ್ಥಿತಿಯಲ್ಲಿದ್ದರೆ, ಮನುಷ್ಯನಲ್ಲಿ ಸ್ವಾರ್ಥವುಂಟಾಗುತ್ತದೆ. ಇಲ್ಲಿನ ಸುಖ-ಸಂತೋಷಗಳನ್ನು ಭೋಗಿಸಲು ಸಿಕ್ಕಿದ ಅವಕಾಶವನ್ನು ಬಿಡಬಾರದು. ಅದನ್ನು ಕೈಬಿಟ್ಟರೆ ಪುನಃ ಗಳಿಸಲು ಸಾಧ್ಯವಿಲ್ಲವೆಂದು ಭಾವಿಸುತ್ತಾನೆ. ಇದರಿಂದಾಗಿ ಅವನು ಜನರ ಮೇಲೆ

ಅಕ್ರಮ-ಹಿಂಸೆಗಳನ್ನು ಎಸಗುವನು, ಅವರ ಹಕ್ಕುಗಳನ್ನು ಕಬಳಿಸುವನು, ತನ್ನ ಸ್ವಾರ್ಥ ಸಾಧನೆಗಾಗಿ ಎಂತಹ ನೀಚಕಾರ್ಯ ಮಾಡಲೂ ಅವನು ಹಿಂಜರಿಯಲಾರನು. ಅವನ ದೃಷ್ಟಿಯಲ್ಲಿ ಖ್ಯಾತಿ, ಗೌರವ ಹಾಗೂ ಲೌಕಿಕ ಪ್ರಯೋಜನಗಳೇ ಒಳಿತುಗಳಾಗಿವೆ. ಈ ಲೋಕದಲ್ಲಿ ಏನಾದರೂ ಶಿಕ್ಷೆ, ದೈಹಿಕ ದಂಡನೆ ಅಥವಾ ಭೌತಿಕ ನಷ್ಟವಾಗುವ ವಿಷಯಗಳನ್ನು ಮಾತ್ರ ಅವನು ಅಪರಾಧವೆಂದು ಭಾವಿಸುವನು. ಯಾವುದೇ ಫಲ ನೀಡದ ಸತ್ಕರ್ಮಗಳು ಅವನ ಮಟ್ಟಿಗೆ ಮೌಢ್ಯವಾಗಿವೆ. ಯಾವುದೇ ನಷ್ಟವುಂಟು ಮಾಡದ ಕೆಡುಕುಗಳು ಅವನಿಗೆ ಪುಣ್ಯಕಾರ್ಯಗಳಾಗಿವೆ.

ಇಡೀ ಸಮಾಜದ ನಂಬಿಕೆ ಇದೇ ಆಗಿ ಬಿಟ್ಟರೆ ಮತ್ತೆ ನೀತಿ-ಚಾರಿತ್ರ್ಯದ ಸ್ಥಿತಿಯನ್ನು ಕೇಳುವುದೇ ಬೇಡ. ಮಾನವ ಪ್ರಾಣಿಗಳಿಗಿಂತ ಕೀಳಾಗಿ ಬಿಡುವನು. ಅವನ ಮಟ್ಟಿಗೆ ಒಳಿತು ಕೇವಲ ಲೌಕಿಕ ಲಾಭ ಮತ್ತು ಕೆಡುಕೆಂದರೆ ಕೇವಲ ಲೌಕಿಕ ನಷ್ಟವಾಗಿ ಮಾರ್ಪಡುವುದು. ಸುಳ್ಳು ಲೋಕದಲ್ಲಿ ನಷ್ಟದಾಯಕವಾಗಿದ್ದರೆ ಪಾಪ, ಲಾಭದಾಯಕವಾಗಿದ್ದರೆ ಪುಣ್ಯವಾಗಿಬಿಡುವುದು, ಸತ್ಯಸಂಧತೆಯು ಲಾಭದಾಯಕವಾಗಿದ್ದರೆ ಪುಣ್ಯ, ಅನ್ಯಥಾ ಪಾಪವಾಗಿರುವುದು. ವ್ಯಭಿಚಾರವು ವೈಭೋಗ ಮತ್ತು ಸುಖಕ್ಕೆ ಅಗತ್ಯವೆನಿಸುವುದು, ಅದು ಆರೋಗ್ಯಕ್ಕೆ ಹಾನಿಕಾರಕವಾದರೆ ಅದು ಕೆಟ್ಟದಾಗಿರುವುದು. ಒಟ್ಟಿನಲ್ಲಿ ಈ ಲೌಕಿಕ ಜೀವನಕ್ಕಿಂತ ಆಚೆ ಉತ್ತಮ ಅಥವಾ ಕೆಟ್ಟ ಪರಿಣಾಮವುಂಟಾಗುವ ಆಶೆ ಅಥವಾ ಭಯವಿಲ್ಲದಿದ್ದರೆ, ಅವನು ಇಲ್ಲಿ ಗೋಚರಿಸುವ ಪರಿಣಾಮಗಳನ್ನು ಮಾತ್ರ ನೋಡುವನು. ಯಾವುದೇ ಸಭ್ಯ ಸಮಾಜಕ್ಕೆ ಭೂಷಣವಲ್ಲದಂತಹ ನೈತಿಕ ಕೆಡುಕುಗಳು ಅವನಿಂದ ಪ್ರಕಟವಾಗುವುದು. ಅಂತಹ ನೈತಿಕ ಮಟ್ಟಗಳೊಂದಿಗೆ ಯಾವುದೇ ಮಾನವ ಸಮೂಹವು ಪ್ರಾಣಿಗಳಿಗಿಂತ ಕೀಳಾಗದಿರಲು ಸಾಧ್ಯವಿಲ್ಲ.

## ಪುನರ್ಜನ್ಮ ಸಿದ್ಧಾಂತ

ಇನ್ನೊಂದು ವರ್ಗವು ಪುನರ್ಜನ್ಮ ಸಿದ್ಧಾಂತವನ್ನು ಪ್ರತಿಪಾದಿಸುತ್ತದೆ. ಈ ಸಿದ್ಧಾಂತದ ಪ್ರಕಾರ ಮರಣವೆಂಬುದು ಕೊನೆಯಲ್ಲ, ಕೇವಲ ದೇಹ ಬದಲಾವಣೆಯಾಗಿದೆ. ಅಂದರೆ ಆತ್ಮವು ಒಂದು ಶರೀರದಿಂದ ಬೇರ್ಪಟ್ಟ ನಂತರ ಇನ್ನೊಂದು ಶರೀರವನ್ನು ಪ್ರವೇಶಿಸುತ್ತದೆ. ಒಬ್ಬನು ಮೊದಲ ಜೀವನದಲ್ಲಿ ಕೆಟ್ಟ ಕರ್ಮಗಳನ್ನು ಮಾಡಿದ್ದರೆ, ಮರಣವಾದ ಕೂಡಲೇ ಅವನ ಆತ್ಮವು ನಿಕೃಷ್ಟ ಜೀವಿಗಳಾದ ಪ್ರಾಣಿ ಅಥವಾ ಮರಗಿಡಗಳನ್ನು ಪ್ರವೇಶಿಸುತ್ತದೆ. ಅವನು ಉತ್ತಮ ಕರ್ಮಗಳನ್ನು ಮಾಡಿದ್ದರೆ, ಉನ್ನತ ವರ್ಗದ ಕಡೆಗೆ ಪ್ರಗತಿ ಹೊಂದುತ್ತಾನೆ. ಒಟ್ಟಿನಲ್ಲಿ ಶಿಕ್ಷೆ-ಪುರಸ್ಕಾರಗಳೆಲ್ಲ ಈ ಲೋಕ ಮತ್ತು ಈ ಶರೀರಗಳಲ್ಲೇ ಇರುತ್ತವೆ. ತಮ್ಮ ಕರ್ಮಗಳ ಫಲವನ್ನು ಅನುಭವಿಸಲು ಈ ಆತ್ಮಗಳು ಪದೇ ಪದೇ ಶರೀರ ಬದಲಾವಣೆ ಮಾಡುತ್ತಿರುತ್ತವೆ.

ಇದೊಂದು ತರ್ಕಹೀನ ಸಿದ್ಧಾಂತವಾಗಿದೆ. ಈ ಸಿದ್ಧಾಂತದ ವಕ್ತಾರರ ಪ್ರಕಾರ ಮಾನವನು ಈ ಲೋಕದಲ್ಲಿ ಕೆಟ್ಟ ಕರ್ಮ ಮಾಡಿದ್ದರೆ ಅವನು ಪ್ರಾಣಿ ಅಥವಾ ಸಸ್ಯಗಳಾಗಿ ಕುಸಿಯುತ್ತಾನೆ. ಅವುಗಳು ಒಳ್ಳೆಯ ಕರ್ಮ ಮಾಡಿದ್ದರೆ ಉನ್ನತ ಮಾನವ ವರ್ಗಕ್ಕೇರುತ್ತವೆ. ಇದರ ಇನ್ನೊಂದರ್ಥವೇನೆಂದರೆ, ಮಾನವನ ದುಷ್ಕರ್ಮಗಳ ಪರಿಣಾಮ ಪ್ರಾಣಿ ಮತ್ತು ಸಸ್ಯರೂಪದಲ್ಲೂ ಪ್ರಾಣಿ ಮತ್ತು ಸಸ್ಯಗಳ ಸತ್ಕಾರ್ಯಗಳ ಪರಿಣಾಮ ಮಾನವ ರೂಪದಲ್ಲೂ ಪ್ರಕಟವಾಗುತ್ತದೆ. ಇದೊಂದು ಅಸಂಬದ್ಧ ವಿಚಾರವಾಗಿದೆ ಏಕೆಂದರೆ:

1) ಜೀವನದ ಈ ಉರುಳಾಟಕ್ಕೆ ಆರಂಭವೆಂಬುದಿಲ್ಲ, ಮಾನವನಾಗಬೇಕಾದರೆ ಅವನು ಮೊದಲು ಪ್ರಾಣಿ ಅಥವಾ ಸಸ್ಯವಾಗಿರಬೇಕು. ಪ್ರಾಣಿ ಮತ್ತು ಸಸ್ಯವಾಗಬೇಕಾದರೆ ಅವು ಮೊದಲು ಮಾನವರಾಗಿರಬೇಕು. ಇದನ್ನು ಬುದ್ಧಿ ಒಪ್ಪಲಾರದು.

2) ಈ ಉರುಳಾಟವು ಸನಾತನವೂ ಶಾಶ್ವತವೂ ಆಗಿದ್ದರೆ, ಪದೇ ಪದೇ ಬದಲಾಗುತ್ತಿರುವ ಶರೀರಗಳೂ ಆತ್ಮಗಳೂ ಶಾಶ್ವತವೆಂದು ಒಪ್ಪಬೇಕಾದೀತು. ಭೂಮ್ಯಾಕಾಶಗಳೂ ಅದರಲ್ಲಿ ಕೆಲಸ ಮಾಡುತ್ತಿರುವ ಶಕ್ತಿಗಳೂ ಹಾಗೆಯೇ. ಆದರೆ ಅವೆಲ್ಲ ಶಾಶ್ವತವಲ್ಲವೆಂದು ಬುದ್ಧಿ ಹೇಳುತ್ತದೆ. ವೈಜ್ಞಾನಿಕ ಸಂಶೋಧನೆಗಳಿಂದಲೂ ಇದು ವ್ಯಕ್ತವಾಗಿದೆ.

3) ಮಾನವರು, ಪ್ರಾಣಿಗಳು ಮತ್ತು ಸಸ್ಯಗಳಿಗೆ ಇರುವ ವೈಶಿಷ್ಟ್ಯಗಳು ಕೇವಲ ಶಾರೀರಿಕವಾಗಿದ್ದು ಆತ್ಮದ್ದಲ್ಲವೆಂದು ಒಪ್ಪಬೇಕಾದೀತು. ಏಕೆಂದರೆ ಮಾನವನಲ್ಲಿರುವ ಬುದ್ಧಿಶಕ್ತಿಯು ಶರೀರ ಬದಲಾವಣೆ (ಪ್ರಾಣಿ)ಯೊಂದಿಗೆ ತನ್ನ ಶಕ್ತಿಯನ್ನು ಕಳೆದುಕೊಳ್ಳುತ್ತದೆ. ಸಸ್ಯಗಳಿಗೆ ಹೋಗಿ ಅದು ತನ್ನ ಚಲನ ಶಕ್ತಿಯನ್ನು ಕಳೆದುಕೊಳ್ಳುತ್ತದೆ.

4) ಆಲೋಚಿಸಿ ಮಾಡುವ ಕರ್ಮಗಳು ಒಳ್ಳೆಯದು ಅಥವಾ ಕೆಟ್ಟದಾಗಿರುತ್ತವೆ. ಈ ನಿಟ್ಟಿನಲ್ಲಿ ಸತ್ಕರ್ಮ ಮತ್ತು ದುಷ್ಕರ್ಮಗಳು ಮಾನವನಿಂದ ಮಾತ್ರ ಆಗಲು ಸಾಧ್ಯ. ಅದಕ್ಕೆ ಸತ್ಫಲ ಅಥವಾ ದುಷ್ಫಲ ಲಭಿಸಬಹುದು. ಆದರೆ ಪ್ರಾಣಿ ಮತ್ತು ಸಸ್ಯಗಳು ಹೀಗಿರಲು ಸಾಧ್ಯವಿಲ್ಲ, ಅವುಗಳಿಗೆ ಪ್ರತಿಫಲ ಲಭಿಸುವುದಕ್ಕೂ ಯಾವುದೇ ಕಾರಣವಿಲ್ಲ. ಹಾಗೇನಾದರೂ ಒಪ್ಪುವುದಾದರೆ ಪ್ರಾಣಿ-ಸಸ್ಯಗಳಿಗೂ ಬುದ್ಧಿ ಉಪಯೋಗಿಸಿ ಕೆಲಸ ಮಾಡುವ ಶಕ್ತಿಯಿದೆ ಯೆಂದು ಒಪ್ಪಬೇಕಾದೀತು.

5) ಮುಂದಿನ ಜೀವನವು ನಮ್ಮ ಕರ್ಮಗಳ ಫಲವಾಗಿದ್ದರೆ, ಕೆಟ್ಟ ಕರ್ಮಗಳ ಫಲವೂ ಕೆಟ್ಟದಾಗಿಯೇ ಇರಬೇಕಷ್ಟೆ. ಆ ಜನ್ಮದಲ್ಲಿ ಕೆಟ್ಟ ಫಲ ಸಿಕ್ಕಿದರೆ, ಅದರಿಂದ ಸತ್ಕರ್ಮಗಳುಂಟಾಗುವುದು ಹೇಗೆ? ಅವನಿಂದ ದುಷ್ಕರ್ಮಗಳೇ ಪ್ರಕಟವಾಗುವುದು ಅನಿವಾರ್ಯ. ಆ ದುಷ್ಟ ಕರ್ಮಗಳ ಫಲ ಮೂರನೆಯ ಜನ್ಮದಲ್ಲಿ ಅದಕ್ಕಿಂತಲೂ ಕೆಟ್ಟದಾಗಿರಬೇಕಷ್ಟೆ. ಈ ರೀತಿ ಕೆಟ್ಟ ಮನುಷ್ಯನ ದುರಾತ್ಮವು ಈ ಪುನರ್ಜನ್ಮದ ಉರುಳಾಟವಲ್ಲಿ ನಿಕೃಷ್ಟತೆಯಿಂದ ಇನ್ನಷ್ಟು ನಿಕೃಷ್ಟತೆಯೆಡೆಗೆ ಸಾಗುತ್ತಲೇ ಇರುತ್ತದೆ. ಅದು ಪುನಃ ಒಳ್ಳೆಯದಾಗಿ

ಎದ್ದು ಬರಬಹುದೆಂದು ನಿರೀಕ್ಷಿಸುವುದೇ ಮೂರ್ಖತನವಾದೀತು. ಇದರ ಇನ್ನೊಂದರ್ಥ- ಮನುಷ್ಯನಿಂದ ಪ್ರಾಣಿಯಾಗಬಹುದು. ಪ್ರಾಣಿಯಿಂದ ಮನುಷ್ಯನಾಗುವುದು ಸಾಧ್ಯವಿಲ್ಲ ಎಂದಾಗಿದೆ. ಈಗ ಕಂಡು ಬರುವ ಮನುಷ್ಯರೆಲ್ಲ ಯಾವ ಸತ್ಕರ್ಮಗಳಿಂದ ಮನುಷ್ಯರಾದರು. ಅವರು ಎಲ್ಲಿಂದ ಬಂದರು ಎಂಬುದೇ ಮುಖ್ಯ ಪ್ರಶ್ನೆ.

## ನಾಗರಿಕತೆಯ ಮೇಲೆ ಪುನರ್ಜನ್ಮ ನಂಬಿಕೆಯ ಪ್ರಭಾವ

ಪುನರ್ಜನ್ಮ ಸಿದ್ಧಾಂತವು ಬುದ್ಧಿಗೆ ನಿಲುಕದ ವಿಚಾರವಾಗಿದೆ. ಮನುಷ್ಯನ ಬುದ್ಧಿ ಮತ್ತು ಜ್ಞಾನ ಪ್ರಗತಿ ಸಾಧಿಸಿದಂತೆ ಈ ಸಿದ್ಧಾಂತವೂ ಮಿಥ್ಯವಾಗುತ್ತಾ ಹೋಯಿತು. ಇಂದು ಅದು ಅತ್ಯಂತ ಹಿಂದುಳಿದ ಜನಾಂಗಗಳಲ್ಲಿ ಮಾತ್ರ ಉಳಿದಿದೆ. ಈ ನಂಬಿಕೆಯು ಪುಕ್ಕಲುತನವನ್ನುಂಟು ಮಾಡುತ್ತದೆ. ಪ್ರಗತಿಯ ಸ್ಫೂರ್ತಿಯನ್ನೇ ಇಲ್ಲವಾಗಿಸುತ್ತದೆ. ಇದರಿಂದಲೇ ಮಾನವನಿಗೆ ಮಾರಕವಾದ ಅಹಿಂಸಾವಾದ ಹುಟ್ಟಿಕೊಂಡಿದೆ. ಇದನ್ನು ಹೊಂದಿದ ಜನಾಂಗಗಳಲ್ಲಿ ಹೋರಾಟದ ಸ್ಫೂರ್ತಿಯೇ ಸತ್ತು ಹೋಗುತ್ತದೆ. ಅವರು ಉತ್ತಮ ಆಹಾರವನ್ನು ಸೇವಿಸುವುದಿಲ್ಲ, ಅವರ ದೈಹಿಕ ಮತ್ತು ಮಾನಸಿಕ ಶಕ್ತಿ ದುರ್ಬಲವಾಗುತ್ತದೆ. ಇದರ ಪರಿಣಾಮವಾಗಿ ಆ ಜನಾಂಗಗಳು ದಮನಿಸಲ್ಪಟ್ಟು ಕೊನೆಗೆ ಅಳಿದೇ ಹೋಗುತ್ತವೆ ಅಥವಾ ಇತರ ಜನಾಂಗಗಳಲ್ಲಿ ಲೀನವಾಗಿ ಬಿಡುತ್ತವೆ.

ಈ ನಂಬಿಕೆಯು ಸಂಸ್ಕೃತಿ-ನಾಗರಿಕತೆಯ ಶತ್ರುವಾಗಿದ್ದು ಮಾನವನನ್ನು ವೈರಾಗ್ಯ ಮತ್ತು ಸನ್ಯಾಸತ್ವದ ಕಡೆಗೊಯ್ಯುತ್ತದೆ. ಆಗ್ರಹಾಭಿಲಾಷೆಗಳೇ ಆತ್ಮವನ್ನು ಪಾಪಿಯನ್ನಾಗಿ ಮಾಡುತ್ತದೆಂಬುದು ಪುನರ್ಜನ್ಮವಾದಿಗಳ ನಂಬಿಕೆ. ಅದೇ ಕಾರಣದಿಂದ ಆತ್ಮವು ಪದೇ ಪದೇ ಶರೀರ ಬದಲಾವಣೆ ಮಾಡಿ ತನ್ನ ಕರ್ಮಗಳ ಫಲವನ್ನು ಉಣ್ಣುತ್ತದೆ. ಆದ್ದರಿಂದ ಆಗ್ರಹಗಳನ್ನು ದಮನಿಸಬೇಕು ಮತ್ತು ಲೋಕಕಾರ್ಯಗಳಲ್ಲಿ ನಿಬಿಡವಾಗದಿದ್ದರೆ ಆತ್ಮವು ಪುನರ್ಜನ್ಮದ ಈ ಉರುಳಾಟದಿಂದ ಮುಕ್ತಿ ಪಡೆಯುತ್ತದೆ. ಇದರ ಪರಿಣಾಮವಾಗಿ, ಮುಕ್ತಿ ಬಯಸುವವನು ಸನ್ಯಾಸಿಯಾಗಿ ಕಾಡು ಮೇಡುಗಳಲ್ಲಿ ಧ್ಯಾನ ಮಗ್ನನಾಗಬೇಕು. ಹಾಗೆ ಮಾಡದವರು ಪ್ರಾಣಿಗಳು ಮತ್ತು ಸಸ್ಯಗಳಾಗಿ ಹೋಗಲು ಸಿದ್ಧರಾಗಬೇಕು. ಮುಕ್ತಿಯ ಮಾತನ್ನು ಬಿಡಬೇಕು. ಈ ವಿಚಾರದಿಂದ ಸಂಸ್ಕೃತಿ ಮತ್ತು ನಾಗರಿಕತೆಯ ಪ್ರಗತಿ ಸಾಧ್ಯವೇ?

ಈ ನಂಬಿಕೆಯು ಒಂದು ಲೆಕ್ಕದಲ್ಲಿ ನಾಸ್ತಿಕವಾದಕ್ಕಿಂತ ಉತ್ತಮವಾಗಿದೆಯೆನ್ನಬಹುದು. ಮಾನವನ ಶಾಶ್ವತವಾಗಿ ಬದುಕುವ ಆಸೆಗೆ ಈ ನಂಬಿಕೆಯಿಂದ ಸ್ವಲ್ಪ ಸಮಾಧಾನವಾಗಬಹುದು ಜೊತೆಗೆ ಕರ್ಮಗಳ ಉತ್ತಮ ಮತ್ತು ಕೆಟ್ಟ ಫಲ ಹಾಗೂ ಪುರಸ್ಕಾರ-ಶಿಕ್ಷೆಗಳ ಕಲ್ಪನೆಯೂ ಇದರಲ್ಲಿದೆ. ಆದರೆ ಈ ನಂಬಿಕೆಯಿಂದ ನೈತಿಕ ಮೌಲ್ಯ ಕಳಕೊಳ್ಳಬೇಕಾಗುತ್ತದೆ. ಏಕೆಂದರೆ ತಾನು ಪುನರ್ಜನ್ಮದ ಉರುಳಾಟದಲ್ಲೇ ಸದಾ

ಇರಬೇಕಾಗುತ್ತದೆ. ಯಾವುದೇ ತಪ್ಪು ಮಾಡಿದರೂ ಅವನಿಗೆ ಅದರಿಂದ ಮುಕ್ತಿ ದೊರೆಯುವಂತಿಲ್ಲ. ಪಶ್ಚಾತ್ತಾಪ, ಕ್ಷಮಾಯಾಚನೆಗಳು ಯಾವ ಪ್ರಯೋಜನಕ್ಕೂ ಬರುವುದಿಲ್ಲವೆಂದು ಖಾತ್ರಿಯಾದಾಗ, ಆತ ಒಮ್ಮೆ ಪಾಪ ಮಾಡಿದರೆ ಶಾಶ್ವತವಾಗಿ ಪಾಪಗಳ ಸುಳಿಯಲ್ಲಿ ಸಿಲುಕಿ ಬಿಡುತ್ತಾನೆ. ತನಗೆ ಪ್ರಾಣಿ ಅಥವಾ ಸಸ್ಯವಾಗಲೇ ಬೇಕೆಂದಿರುವಾಗ, ಮಾನವನಾಗಿ ಸಿಕ್ಕಿರುವ ಅವಕಾಶವನ್ನು ಮೋಜು ಮಸ್ತಿಯಲ್ಲಿ ಐಶಾರಾಮದಲ್ಲಿ ಏಕೆ ಕಳೆಯಬಾರದೆಂದು ಆತ ಭಾವಿಸುತ್ತಾನೆ.

# ಮರಣೋತ್ತರ ಜೀವನದ ವಿಶ್ವಾಸ

ಈ ಲೋಕ ಮತ್ತು ಮಾನವನ ಅಂತಿಮ ಪರಿಣಾಮದ ಕುರಿತು ನಾಸ್ತಿಕವಾದಿಗಳ ಮತ್ತು ಪುನರ್ಜನ್ಮವಾದಿಗಳ ಅಭಿಪ್ರಾಯಗಳನ್ನು ನಾವು ಕೇಳಿದೆವು. ಆ ಎರಡೂ ಅಭಿಪ್ರಾಯಗಳು ಸರಿಯಲ್ಲ. ಈ ಲೋಕದಲ್ಲಿ ಪತನ ಮತ್ತು ಅಳಿವಿನ ಚಿಹ್ನೆಗಳನ್ನು ನೋಡಿ ಮಾನವನಲ್ಲಿ ಮೂಡಬಹುದಾದ ಸಂಶಯಗಳಿಗೆ ತೃಪ್ತಿದಾಯಕ ಉತ್ತರ ನೀಡಲು ಅವುಗಳಿಗೆ ಸಾಧ್ಯವಿಲ್ಲ. ಒಂದು ಸರಿಯಾದ ಪ್ರಬಲವಾದ ನೈತಿಕ ಸೌಧಕ್ಕೆ ಆಧಾರವಾಗಬಲ್ಲಂತಹ ಸಾಮರ್ಥ್ಯವನ್ನು ಅವು ಹೊಂದಿಲ್ಲವೆಂಬುದನ್ನೂ ನಾವು ತಿಳಿದುಕೊಂಡೆವು.
ಇನ್ನು ಮೂರನೆಯ ಒಂದು ಅಭಿಪ್ರಾಯವನ್ನು ಕೇಳೋಣ. ಅದು ಹೀಗೆನ್ನುತ್ತದೆ.

1) ಈ ಲೋಕದಲ್ಲಿ ಎಲ್ಲ ವಸ್ತುಗಳಿಗೂ ಇಡೀ ಪ್ರಪಂಚ ವ್ಯವಸ್ಥೆಗೂ ಒಂದು ಕಾಲಾವಧಿಯಿದೆ. ಅದು ಮುಗಿದ ಕೂಡಲೇ ಅದು ನಾಶವಾಗುತ್ತದೆ. ಅನಂತರ ಇಲ್ಲಿನ ಭೌತಿಕ ನಿಯಮಗಳಿಗೆ ವ್ಯತಿರಿಕ್ತವಾದ ನಿಯಮಗಳೊಂದಿಗೆ ಇನ್ನೊಂದು ವ್ಯವಸ್ಥೆ ಅಸ್ತಿತ್ವಕ್ಕೆ ಬರಲಿದೆ.

2) ಅಲ್ಲಿ ಸೃಷ್ಟಿಕರ್ತನು ನ್ಯಾಯಾಲಯವನ್ನು ಸ್ಥಾಪಿಸಿ ಪ್ರತಿಯೊಂದು ವಸ್ತುವಿನ ಲೆಕ್ಕಾಚಾರ ಪಡೆಯುವನು. ಮಾನವ ಕೂಡಾ ಅಂದು ಒಂದು ಹೊಸ ಶರೀರದೊಂದಿಗೆ ಹುಟ್ಟಿ ದೇವನ ಮುಂದೆ ಹಾಜರಾಗುವನು. ಅಂದು ತನ್ನ ಲೌಕಿಕ ಜೀವನದಲ್ಲಿ ಮಾಡಿದ ಎಲ್ಲ ಕರ್ಮಗಳ ವಿಚಾರಣೆ ನಡೆಯುವುದು. ಸತ್ಯ ಮತ್ತು ನ್ಯಾಯಕ್ಕನುಗುಣವಾಗಿ ತೀರ್ಮಾನ ನಡೆಯುವುದು. ಸತ್ಕರ್ಮಗಳಿಗೆ ಉತ್ತಮ ಪ್ರತಿಫಲ ದುಷ್ಕರ್ಮಗಳಿಗೆ ಶಿಕ್ಷೆಯೂ ಇರುವುದು.

3) ಮಾನವನ ಲೌಕಿಕ ಜೀವನವು ಆ ಪರಲೋಕ ಜೀವನದ ಪೀಠಿಕೆಯಾಗಿದೆ. ಇಲ್ಲಿನ ಜೀವನ ತಾತ್ಕಾಲಿಕವಾಗಿದೆ. ಅಲ್ಲಿಯ ಜೀವನ ಶಾಶ್ವತ. ಇಲ್ಲಿನದ್ದು ಅಪೂರ್ಣವಾಗಿದೆ. ಅಲ್ಲಿನದ್ದು ಪರಿಪೂರ್ಣ. ಈ ಲೋಕದ ಎಲ್ಲ ಕರ್ಮಗಳ ಫಲ ಇಲ್ಲಿ ಗೋಚರಿಸುವುದಿಲ್ಲ. ಇಲ್ಲಿ ಬಿತ್ತಲಾಗುವ ಪ್ರತಿ ಬೀಜದ ಫಲಗಳು ಇಲ್ಲಿನ ಅಪೂರ್ಣ ಜೀವನದಲ್ಲಿ ಸಿಗುವುದಿಲ್ಲ. ಈ ನ್ಯೂನತೆಯು ಅಲ್ಲಿನ ಜೀವನದಲ್ಲಿ ಪೂರ್ಣಗೊಳ್ಳುತ್ತದೆ. ಇಲ್ಲಿ ಫಲ ನೀಡದ್ದು ಅಲ್ಲಿ

ಫಲ ನೀಡುತ್ತದೆ. ಆದ್ದರಿಂದ ಮಾನವನು ತನ್ನ ಕರ್ಮಗಳ ಅಪೂರ್ಣ ಹಾಗೂ ಹೆಚ್ಚಾಗಿ ಮೋಸಗೊಳಿಸುವ ಪರಿಣಾಮಗಳನ್ನು ನೋಡಬಾರದು. ಪರಿಪೂರ್ಣ ಪ್ರತಿಫಲ ಬರುವಂತಹ ಪರಲೋಕ ಜೀವನವನ್ನು ಗುರಿಯಲ್ಲಿಟ್ಟು ಕರ್ಮಗಳನ್ನು ನಿರ್ಣಯಿಸಬೇಕು.

ಇದು ಎಲ್ಲ ಪ್ರವಾದಿಗಳು ಮುಂದಿಟ್ಟ ಅಭಿಪ್ರಾಯವಾಗಿದೆ. ಪವಿತ್ರ ಕುರ್‌ಆನ್ ಇದನ್ನು ಬಲವಾಗಿ ಸಮರ್ಥಿಸುತ್ತದೆ. ಕುರ್‌ಆನ್ ಮಂಡಿಸಿದ ಪರಲೋಕ ವಿಶ್ವಾಸವನ್ನು ಅಂದು ವಿರೋಧಿಗಳು ಆಕ್ಷೇಪಿಸಿದಂತೆಯೇ ಇಂದಿನ ನಿಷೇಧಿಗಳೂ ಆಕ್ಷೇಪಿಸುತ್ತಾರೆ. ವಾಸ್ತವದಲ್ಲಿ ಅವರಿಗೆ, ಸತ್ತ ಬಳಿಕ ಪುನಃ ಜೀವ ಪಡೆಯುವುದು ಬುದ್ಧಿಗೆ ನಿಲುಕದ ವಿಷಯವೆಂದಷ್ಟೇ ಹೇಳಲು ಸಾಧ್ಯ. ಅವರ ಆಕ್ಷೇಪಗಳನ್ನು ಕುರ್‌ಆನ್ ಈ ರೀತಿ ಉಲ್ಲೇಖಿಸಿದೆ.

ನಾವು ಮಣ್ಣುಪಾಲಾಗಿ ಹೋದ ಬಳಿಕ ಪುನಃ ಹೊಸತಾಗಿ ಸೃಷ್ಟಿಸಲ್ಪಡುತ್ತೇವೆಯೇ, ಎಂದು ಇವರು ಕೇಳುತ್ತಾರೆ. ವಾಸ್ತವದಲ್ಲಿ ಇವರು ತಮ್ಮ ಪ್ರಭುವಿನ ಭೇಟಿಯನ್ನು ನಿರಾಕರಿಸುವವರಾಗಿದ್ದಾರೆ. (ಪವಿತ್ರ ಕುರ್‌ಆನ್, 32:10)

ನಾವು ಬರೇ ಎಲುಬುಗಳಾಗಿ ಮತ್ತು ಮಣ್ಣಾಗಿ ಬಿಟ್ಟ ಮೇಲೆ ನಮ್ಮನ್ನು ಮತ್ತೆ ಹೊಸದಾಗಿ ಹುಟ್ಟಿಸಿ ಎಬ್ಬಿಸಲಾಗುವುದೇ ಎಂದು ಅವರು ಕೇಳುತ್ತಾರೆ.

(ಪವಿತ್ರ ಕುರ್‌ಆನ್, 17:49)

ನಾವು ಸತ್ತು ಹೋದ ಮೇಲೆ ಹಾಗೂ ಮಣ್ಣಾಗಿ ಹೋದ ಬಳಿಕ? (ಪುನಃ ಎಬ್ಬಿಸಲ್ಪಡುವೆವೇ?) ಈ ಮರಳುವಿಕೆಯು ಬುದ್ಧಿಗೆ ಮೀರಿದ ವಿಷಯವಾಗಿದೆ.

(ಪವಿತ್ರ ಕುರ್‌ಆನ್, 50:3)

ಈಗ ಅವನು ನಮಗೆ ಹೋಲಿಕೆ ಕೊಡುತ್ತಾನೆ ಮತ್ತು ತನ್ನ ಸೃಷ್ಟಿಯನ್ನು ಮರೆತು ಬಿಡುತ್ತಾನೆ. "ಈ ಎಲುಬುಗಳು ಶಿಥಿಲವಾಗಿ ಹೋದ ಬಳಿಕ ಇವುಗಳನ್ನು ಜೀವಂತ ಗೊಳಿಸುವವನಾರು?" ಎಂದು ಕೇಳುತ್ತಾನೆ. (ಪವಿತ್ರ ಕುರ್‌ಆನ್, 36:78

ಈ ಸಂದೇಹಗಳಿಗೆ ಕುರ್‌ಆನ್ ನೀಡುವ ಉತ್ತರದಲ್ಲಿ, ಪ್ರಪ್ರಥಮವಾಗಿ ದೇವ ಮಹಿಮೆಯ ಕುರುಹುಗಳನ್ನು ನೋಡಿ ಅವುಗಳ ಬಗ್ಗೆ ಚಿಂತನೆ ನಡೆಸುವಂತೆ ಕರೆ ನೀಡಲಾಗಿದೆ.

''ಇವರು ಭೂಮಿ-ಆಕಾಶಗಳ ವ್ಯವಸ್ಥೆಯ ಕುರಿತು ಎಂದಾದರೂ ಆಲೋಚಿಸಲಿಲ್ಲವೇ? ಅಲ್ಲಾಹನು ಸೃಷ್ಟಿಸಿರುವ ಯಾವ ವಸ್ತುವನ್ನೇ ಆದರೂ ಕಣ್ತೆರೆದು ನೋಡಲಿಲ್ಲವೇ? ಪ್ರಾಯಶಃ ಇವರ ಜೀವನಾವಧಿಯು ಪೂರ್ಣಗೊಳ್ಳುವ ಕಾಲ ಸಮೀಪಿಸಿರಬಹುದೆಂಬುದನ್ನು ಇವರು ಯೋಚಿಸಲಿಲ್ಲವೇ? ಪ್ರವಾದಿಯವರ ಈ ಎಚ್ಚರಿಕೆಯ ಬಳಿಕವೂ (ವಿಶ್ವಾಸವಿಡದವರು) ಇನ್ನಾವ ಮಾತಿನಿಂದ ವಿಶ್ವಾಸವಿಡಬಹುದು?''

(ಪವಿತ್ರ ಕುರ್‌ಆನ್, 7:185)

**(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್,10:105, 41:53)**

ಇಲ್ಲಿ ನಿಮಗೆ ಕಣ್ಣಾರೆ ಕಂಡು ಗುರುತಿಸುವಷ್ಟು ಮತ್ತು ಯಾವುದೇ ಅನುಭವದಿಂದ ತಿಳಿದುಕೊಳ್ಳುವಷ್ಟು ಶಕ್ತಿಯನ್ನು ನೀಡಲಾಗಿಲ್ಲವೆಂದು ಹೇಳಲಾಗಿದೆ. ವಾಸ್ತವವನ್ನು ತಿಳಿದುಕೊಳ್ಳಬೇಕಾದರೆ, ನಿಮ್ಮ ಕಣ್ಣ ಮುಂದೆಯೇ ಅನುಭವಕ್ಕೆ ಬರುವಂತಹ ದೃಷ್ಟಾಂತಗಳನ್ನು ಕಣ್ತೆರೆದು ನೋಡಿ ಭೂಮ್ಯಾಕಾಶಗಳ ವ್ಯವಸ್ಥೆಯಲ್ಲೂ ಸ್ವತಃ ನಿಮ್ಮ ಸೃಷ್ಟಿಯ ಬಗ್ಗೆಯೂ ಚಿಂತನೆ ನಡೆಸಿ, ವಾಸ್ತವಕ್ಕೆ ತಲಪಲು ಪ್ರಯತ್ನಿಸಿ. ಆಗ ಈ ಹೇಳಿರುವುದೆಲ್ಲವೂ ಸರಿಯೆಂದು ನಿಮಗೆ ತಿಳಿದು ಬರುವುದು. ಪರಲೋಕದ ಬಗ್ಗೆ ಆದರ ಬರುವಿಕೆಯು ಅಸಾಧ್ಯವಾಗಿದ್ದು ನಿಮ್ಮ ಬುದ್ಧಿಗೆ ಎಟುಕುವುದಿಲ್ಲವಾದರೂ ಮೇಲಿನ ದೃಷ್ಟಾಂತಗಳ ಹಿನ್ನಲೆಯಲ್ಲಿ ಕುರ್‌ಆನ್ ಇನ್ನಷ್ಟು ಮಾಹಿತಿಗಳನ್ನು ನೀಡುತ್ತದೆ. **ಪವಿತ್ರ ಕುರ್‌ಆನ್, 13:2, 79:27**

ಇಷ್ಟು ದೊಡ್ಡ ಪ್ರಪಂಚವನ್ನು ಸೃಷ್ಟಿಸಿ, ದೊಡ್ಡ ದೊಡ್ಡ ಆಕಾಶಕಾಯಗಳನ್ನು ತನ್ನ ನಿಯಮಗಳ ಮೂಲಕ ಪರಸ್ಪರ ಬಂಧಿಸಿಟ್ಟಿರುವುದು, ಅವು ತಮ್ಮ ಕಕ್ಷೆಯಿಂದ ಒಂದನ್ನೊಂದು ಮೀರಿ ಹೋಗದಿರುವುದು, ತನ್ನ ಸಮಯವನ್ನೂ ಒಂದಿಷ್ಟು ಉಲ್ಲಂಘಿಸದಿರುವುದು, ಅವೆಲ್ಲವನ್ನೂ ಕಣ್ಣಿಗೆ ಕಾಣದ ಆಧಾರದ ಮೇಲೆ ಸ್ಥಾಪಿಸಿರುವುದೆಲ್ಲ ದೇವನೇ ಆಗಿರುವಾಗ, ಆ ಮಹಾ ಶಕ್ತಿವಂತನಿಗೆ ಒಂದು ನಿಕೃಷ್ಟ ಸೃಷ್ಟಿಯನ್ನು ಅಳಿಸಿ ಇನ್ನೊಮ್ಮೆ ಸೃಷ್ಟಿಸಲು ಸಾಧ್ಯವಿಲ್ಲವೆಂದು ಭಾವಿಸುವುದು ಎಂತಹ ಮೌಢ್ಯವಾಗಿದೆ. **(ಪವಿತ್ರ ಕುರ್‌ಆನ್, 17:99)** ಆಕಾಶದ ನಂತರ ನಮಗೆ ಅತಿ ಹತ್ತಿರವಾಗಿರುವ ಭೂಮಿಯ ದೃಷ್ಟಾಂತಗಳತ್ತ ಗಮನ ಸೆಳೆಯಲಾಗಿದೆ.

**''ನೀವೇನು ಪುರುಷರ ಬಳಿಗೆ ಹೋಗುತ್ತೀರಾ? ದರೋಡೆ ಮಾಡುತ್ತೀರಾ? ಹಾಗೂ ನಿಮ್ಮ ಸಮಾರಂಭಗಳಲ್ಲಿ ದುಷ್ಕರ್ಮಗಳನ್ನೆಸಗುತ್ತೀರಾ? ಅದಕ್ಕೆ ''ನೀನು ಸತ್ಯವಾದಿಯಾಗಿದ್ದರೆ ಅಲ್ಲಾಹನ ಯಾತನೆಯನ್ನು ತಾ'' ಎನ್ನುವ ಹೊರತು ಅವರ ಜನಾಂಗದ ಬಳಿ ಬೇರೆ ಉತ್ತರವಿರಲಿಲ್ಲ.'' (ಪವಿತ್ರ ಕುರ್‌ಆನ್, 29:20)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್,30:50, 35:9, 36:33, 41:39)

ತರುವಾಯ ಕುರ್‌ಆನ್ ಮಾನವನನ್ನು ಕರೆದು, ಎಲ್ಲ ಕಡೆಯಿಂದಲೂ ಕಣ್ಣು ಮುಚ್ಚಿಕೊಂಡು ಚಿಂತನೆ ನಡೆಸಿದರೆ, ಅಲ್ಲಾಹನು ಮರಣದ ಬಳಿಕ ಪುನಃ ಸೃಷ್ಟಿಸುವ ಸಾಮರ್ಥ್ಯ ಹೊಂದಿದ್ದಾನೆಂಬುದಕ್ಕೆ ಪುರಾವೆ ಸ್ವತಃ ನಿಮ್ಮಲ್ಲೇ ಇರುವುದಾಗಿ ಕಾಣುವಿರಿ ಎಂದು ಹೇಳುತ್ತದೆ.

**''ಮಾನವನ ಮೇಲೆ- ಅವನೊಂದು ಪ್ರಸ್ತಾಪನೀಯ ವಸ್ತುವೇ ಆಗಿರದಂತಹ ಸುದೀರ್ಘ ಕಾಲವೊಂದು ಕಳೆದಿದೆಯೇ?'' (ಪವಿತ್ರ ಕುರ್‌ಆನ್, 76:1)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್,2:28, 17:50–51, 22:5, 23:12–16, 75:37–40)

ಈ ಸ್ಪಷ್ಟ ಮತ್ತು ಸಾಮ್ಯ ಅನುಭವಗಳಿಗೆ ಹತ್ತಿರವಾಗಿರುವ ಸಾಕ್ಷ್ಯಗಳನ್ನು ನೀಡಿದ ಬಳಿಕ ಸಾಮಾನ್ಯ ಬುದ್ಧಿಗೆ ನಿಲುಕದಂತಹ ಒಂದು ಪುರಾವೆಯನ್ನು ನೀಡುತ್ತದೆ. ನಾಸ್ತಿಯಿಂದ ವಸ್ತುಗಳನ್ನು ಅಸ್ತಿತ್ವಕ್ಕೆ ತರುವುದು ಚದುರಿಹೋದ ಮತ್ತು ಕರಗಿಹೋದ ವಸ್ತುಗಳನ್ನು ಪುನಃ ಮೊದಲ ರೂಪದಲ್ಲಿ ಸೃಷ್ಟಿಸುವುದಕ್ಕಿಂತ ಕಷ್ಟ. ಈ ಮಹಾ ಕಾರ್ಯವನ್ನು ಮಾಡಿದ ಅಂದರೆ ನಾಸ್ತಿಯಿಂದ ಮನುಷ್ಯನನ್ನು ಅಸ್ತಿತ್ವಕ್ಕೆ ತರಲು ಸಾಮರ್ಥ್ಯ ಹೊಂದಿದ ದೇವನಿಗೆ ಸತ್ತ ಬಳಿಕ ಪುನಃ ಸೃಷ್ಟಿಸುವುದು ಕಷ್ಟವಾಗುವುದು ಹೇಗೆ? ಕುರ್‌ಆನ್ ಹೇಳುತ್ತದೆ.

**"ಅಲ್ಲಾಹನು ಸೃಷ್ಟಿಯ ಆರಂಭ ಹೇಗೆ ಮಾಡುತ್ತಾನೆ, ಅನಂತರ ಹೇಗೆ ಅದರ ಪುನರಾವರ್ತನೆ ಮಾಡುತ್ತಾನೆ ಎಂಬುದನ್ನು ಇವರೆಂದೂ ನೋಡಲಿಲ್ಲವೇ? ನಿಶ್ಚಯವಾಗಿಯೂ ಇದು (ಈ ಪುನರಾವರ್ತನೆ) ಅಲ್ಲಾಹನಿಗೆ ಅತಿ ಸುಲಭವಾಗಿದೆ." (ಪವಿತ್ರ ಕುರ್‌ಆನ್, 29:19)**

**"ಸೃಷ್ಟಿಯ ಆರಂಭ ಮಾಡುವವನೂ ಅವನೇ ಮತ್ತು ಅದರ ಪುನರಾವರ್ತನೆ ಮಾಡುವವನೂ ಅವನೇ. ಇದು ಅವನಿಗೆ ಅತ್ಯಂತ ಸುಲಭವಾದುದು. ಭೂಮಿ-ಆಕಾಶಗಳಲ್ಲಿ ಅವನ ಗುಣವು ಸರ್ವಶ್ರೇಷ್ಠವಾಗಿದ್ದು ಅವನು ಪ್ರಬಲನೂ ಯುಕ್ತಿಪೂರ್ಣನೂ ಆಗಿರುತ್ತಾನೆ." (ಪವಿತ್ರ ಕುರ್‌ಆನ್, 30:27)**

**"ನಾವೇನು ಪ್ರಥಮ ಬಾರಿ ಸೃಷ್ಟಿಸಿ ಬಳಲಿದ್ದೇವೆಯೇ? ಆದರೂ ಇವರು ಒಂದು ಹೊಸ ಸೃಷ್ಟಿಯ ಬಗ್ಗೆ ಸಂಶಯಗ್ರಸ್ತರಾಗಿದ್ದಾರೆ." (ಪವಿತ್ರ ಕುರ್‌ಆನ್, 50:15)**

ಇದರಿಂದ ಪರಲೋಕವು ಸಂಭವಿಸಲಾರದು ಎಂಬುದಕ್ಕಿಂತ ಸಂಭವಿಸುವುದು ಎಂಬ ನಿಲುವೇ ಹೆಚ್ಚು ಸಮಂಜಸವೆಂದು ವ್ಯಕ್ತವಾಯಿತು.

ಕುರ್‌ಆನ್ ಪರಲೋಕದ ಅಗತ್ಯದ ಕುರಿತು ಮಂಡಿಸುವ ಪುರಾವೆಯೇನೆಂದರೆ ಈ ಪ್ರಪಂಚವು ಓರ್ವ ಮಹಾ ಬುದ್ಧಿವಂತನಿಂದ ಸೃಷ್ಟಿಸಲ್ಪಟ್ಟಿದೆ. ಅವನ ಯಾವುದೇ ಕಾರ್ಯವು ಯುಕ್ತಿಗೆ ವಿರುದ್ಧವಲ್ಲ, ಬುದ್ಧಿಗೆ ನಿಲುಕದ್ದೂ ಅಲ್ಲ, ಈ ಆಧಾರದಲ್ಲಿ ಕುರ್‌ಆನ್ ಹೇಳುತ್ತದೆ.

**"ನೀವೇನು ನಾವು ನಿಮ್ಮನ್ನು ನಿರರ್ಥಕವಾಗಿ ಸೃಷ್ಟಿಸಿದ್ದೇವೆಂದೂ ನಿಮಗೆ ನಮ್ಮ ಕಡೆಗೆ ಮರಳಲಿಕ್ಕೆ ಇಲ್ಲವೆಂದೂ ತಿಳಿದು ಕೊಂಡಿದ್ದೀರಾ" ಎಂದು ಹೇಳಲಾಗುವುದು. (ಪವಿತ್ರ ಕುರ್‌ಆನ್, 23:115)**

**"ಈ ಭೂಮಿ-ಆಕಾಶಗಳನ್ನೂ ಅವುಗಳ ನಡುವೆ ಇರುವ ವಸ್ತುಗಳನ್ನೂ ನಾವೇನೂ ಲೀಲೆಗಾಗಿ ಉಂಟು ಮಾಡಿದುದಲ್ಲ, ನಾವು ಅವುಗಳನ್ನು ಸತ್ಯಪೂರ್ಣವಾಗಿ ಸೃಷ್ಟಿಸಿದ್ದೇವೆ. ಆದರೆ ಇವರಲ್ಲಿ ಹೆಚ್ಚಿನವರು ಅರಿಯುವುದಿಲ್ಲ, ಇವರೆಲ್ಲರೂ ಎಬ್ಬಿಸಲ್ಪಡಲು ನಿಶ್ಚಿತವಾಗಿರುವ ಸಮಯವು ತೀರ್ಪಿನ ದಿನವಾಗಿದೆ." (ಪವಿತ್ರ ಕುರ್‌ಆನ್, 44:38-40)**

"ಇವರೆಂದಾದರೂ ಸ್ವಯಂ ತಮ್ಮ ಕುರಿತಾಗಿ ವಿವೇಚಿಸಲಿಲ್ಲವೇ? ಅಲ್ಲಾಹನು ಆಕಾಶಗಳನ್ನೂ ಭೂಮಿಯನ್ನೂ ಅವುಗಳ ನಡುವೆ ಇರುವುದೆಲ್ಲವನ್ನೂ ಸತ್ಯಪೂರ್ಣವಾಗಿ ಮತ್ತು ಒಂದು ನಿರ್ದಿಷ್ಟ ಕಾಲಾವಧಿಗಾಗಿಯೇ ಸೃಷ್ಟಿಸಿದ್ದಾನೆ. ಆದರೆ ಅನೇಕರು ತಮ್ಮ ಪ್ರಭುವಿನ ಭೇಟಿಯನ್ನು ನಿರಾಕರಿಸುವವರಾಗಿರುತ್ತಾರೆ." (ಪವಿತ್ರ ಕುರ್‌ಆನ್, 30:8)

ಈ ವಚನಗಳಲ್ಲಿ ಭೂಮ್ಯಾಕಾಶಗಳ ಈ ಸಂಪೂರ್ಣ ವ್ಯವಸ್ಥೆಯು ಒಂದು ನಿರ್ದಿಷ್ಟ ಅವಧಿಯ ವರೆಗೆ ನಡೆಯುತ್ತಿರುವುದು ಕೇವಲ ಆಟ ವಿನೋದವೇನೂ ಅಲ್ಲ, ಬದಲಾಗಿ ಇಲ್ಲಿನ ವ್ಯವಸ್ಥೆಗೆ ಪ್ರಗತಿಯೂ ಇದೆ, ಅಳಿವೂ ಇದೆ. ವಿಶೇಷವಾಗಿ ಮಾನವ ಹುಟ್ಟಿನಿಂದ ವೃದ್ಧಾಪ್ಯದ ವರೆಗೆ ಬೆಳೆಯುತ್ತಲೇ ಇರುತ್ತಾನೆ. ಕೊನೆಗೊಂದು ದಿನ ಈ ಲೋಕಕ್ಕೆ ವಿದಾಯ ಕೋರುತ್ತಾನೆ. ಅದೇ ರೀತಿ ಇಡೀ ವ್ಯವಸ್ಥೆಯೂ ಒಂದು ದಿನ ನಾಶ ಹೊಂದಲಿದೆಯೆಂದು ತಿಳಿದು ಬರುತ್ತದೆ. ಆದರೆ ಅದು ಅಲ್ಲಿಗೇ ಮುಗಿಯುವುದಿಲ್ಲ, ಅದನ್ನು ಪುನಃ ಅಸ್ತಿತ್ವಕ್ಕೆ ತರಲಾಗುತ್ತದೆ. ಕುರ್‌ಆನ್ ಅದನ್ನು ಈ ರೀತಿ ವಿವರಿಸುತ್ತದೆ.

"ಭೂಮಿ ಮತ್ತು ಆಕಾಶಗಳು ಬದಲಾಯಿಸಲ್ಪಟ್ಟು ಏನಕ್ಕೇನೋ ಮಾಡಲ್ಪಡುವ ಆ ದಿನದ ಬಗ್ಗೆ ಹಾಗೂ ಏಕನೂ ಪ್ರಚಂಡನೂ ಆದ ಅಲ್ಲಾಹನ ಮುಂದೆ ಸರ್ವರೂ ಪ್ರತ್ಯಕ್ಷ ಹಾಜರಾಗಲಿರುವ ದಿನದ ಬಗ್ಗೆ ಅವರಿಗೆ ಎಚ್ಚರಿಕೆ ನೀಡಿರಿ."

"ಅಲ್ಲಾಹನು ಪ್ರತಿಯೊಂದು ಜೀವಿಗೂ ಅದರ ಕರ್ಮಫಲವನ್ನು ಕೊಡಲಿಕ್ಕಾಗಿ ಹೀಗಾಗುವುದು. ನಿಶ್ಚಯವಾಗಿಯೂ ಅಲ್ಲಾಹನು ವಿಚಾರಣೆ ನಡೆಸುವುದರಲ್ಲಿ ಅತಿ ಶೀಘ್ರನು." (ಪವಿತ್ರ ಕುರ್‌ಆನ್, 14:48,51)

## ಪರಲೋಕದ ವ್ಯವಸ್ಥೆ ಹೇಗಿರುವುದು?

ಕುರ್‌ಆನ್‌ನಿಂದ ತಿಳಿದು ಬರುವಂತೆ ಪ್ರಸಕ್ತ ವ್ಯವಸ್ಥೆಯಲ್ಲೇನೋ ನ್ಯೂನತೆಯಿದೆ. ಅದರ ಪರಿಪೂರ್ಣತೆಯೇ ಪರಲೋಕವಾಗಿದೆ. ನಮ್ಮ ಬುದ್ಧಿಯೂ ಹಾಗೆಯೇ ಆಗಬೇಕೆಂದು ಬಯಸುತ್ತದೆ. ಅಲ್ಲಿ ತೂಕ, ಪರಿಮಾಣ ಮತ್ತು ಲೆಕ್ಕ ಎಲ್ಲವೂ ಇರುವುದು. ಆದರೆ ಭೌತಿಕ ವಸ್ತುಗಳಿಗಲ್ಲ, ಅಲ್ಲಿ ಒಳಿತು-ಕೆಡುಕು, ಈಮಾನ್-ಕುಫ್ರ್, ನೀತಿ-ನಿಲುವುಗಳು, ಭಾವನೆಗಳು ಮತ್ತು ಸಂಕಲ್ಪಗಳ ಪರಿಮಾಣವಿರುವುದು. ಅಲ್ಲಿ ಮನಸ್ಸಿನ ಕ್ರಿಯೆಗಳನ್ನು ಅಳೆಯಲಾಗದು, ತೂಗಲಾಗದು. ಅಲ್ಲಿ ನೀವು ದಾನ ಮಾಡುವ ಅನ್ನ ಅಥವಾ ಪೈಸೆಯ ತೂಕ ಮಾಡಲಾಗುವುದಿಲ್ಲ ಬದಲಾಗಿ ಅದರ ಹಿಂದಿನ ಪ್ರೇರಕ ಮತ್ತು ಉದ್ದೇಶವನ್ನು ನೋಡಲಾಗುವುದು. ಏಕೆಂದರೆ ಅಲ್ಲಿ ಭೌತಿಕ ಕಾನೂನು ಇರಲಾರದು. ಬೌದ್ಧಿಕ ಕಾನೂನಿರುವುದು.

"ತೂಕವು ಅಂದು ಸಾಕ್ಷಾತ್ ಸತ್ಯವಾಗಿರುವುದು. ಯಾರ ತೂಗುತಟ್ಟೆಯು ಭಾರವಾಗಿರುವುದೋ ಅವರೇ ಸಾರ್ಥಕ್ಯ ಹೊಂದುವವರಾಗುವರು."

(ಪವಿತ್ರ ಕುರ್‌ಆನ್, 7:8)

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್,17:36, 21:47, 99:6-8)

ಅಲ್ಲಿ ಕ್ರಿಯೆಗಳ ವಾಸ್ತವಿಕ ಪರಿಣಾಮ ಗೋಚರವಾಗುವುದು. ಅದು ಬುದ್ಧಿ, ಜಾಣ್ಮೆ ಮತ್ತು ನ್ಯಾಯಕ್ಕೆ ಅನುಗುಣವಾಗಿರುವುದು. ಪ್ರಸಕ್ತ ವ್ಯವಸ್ಥೆಯಲ್ಲಿ ಪ್ರಕಟವಾಗುವ ಮಾನವನ ಕ್ರಿಯೆಗಳ ಪರಿಣಾಮದ ಇಲ್ಲಿನ ಕಾನೂನು ಇಲ್ಲಿ ಜಾರಿಯಲ್ಲಿರದು. ಅಲ್ಲಿ ಅದೆಲ್ಲವೂ ನೀತಿ-ನ್ಯಾಯಕ್ಕೆ ಅಡ್ಡಿಯಾಗುತ್ತದೆ. ಅವುಗಳ ನೈಜ ಪರಿಣಾಮವೂ ಗೋಚರವಾಗುವುದಿಲ್ಲ. ಆದರೆ ಅಲ್ಲಿ ಅವುಗಳಿಗೆ ಯಾವ ಬೆಲೆಯೂ ಇರುವುದಿಲ್ಲ. ಉದಾ: ಇಲ್ಲಿ ಸಂಪತ್ತು, ಗೆಳೆಯರು ಮತ್ತು ಬೆಂಬಲಿಗರು, ಪ್ರಯತ್ನ, ಶಿಫಾರಸು, ಕೌಟುಂಬಿಕ ಪ್ರಭಾವ, ಚಾಕಚಕ್ಯತೆ ಹಾಗೂ ಇನ್ನಿತರ ವಸ್ತುಗಳು ಮಾನವನನ್ನು ಅನೇಕ ಕೃತ್ಯಗಳ ಪರಿಣಾಮಗಳಿಂದ ರಕ್ಷಿಸುತ್ತದೆ. ಆದರೆ ಈ ವಸ್ತುಗಳ ಪ್ರಭಾವವೆಲ್ಲ ಅಳಿದುಹೋಗುವುದು. ಅಲ್ಲಿ ಸತ್ಯ-ನ್ಯಾಯದಿಂದುರಿಟಾಗು ವಂತಹ ಪ್ರತಿಯೊಂದು ಕರ್ಮದ ಪರಿಣಾಮ ಗೋಚರವಾಗುವುದು.

**''ಆಗ ಪ್ರತಿಯೊಬ್ಬನು ತಾನು ಮಾಡಿದ ಕರ್ಮದ ಸವಿಯನ್ನುಣ್ಣುವನು. ಎಲ್ಲರೂ ತಮ್ಮ ನೈಜ ಒಡೆಯನಾದ ಅಲ್ಲಾಹನ ಕಡೆಗೆ ತಿರುಗಿಸಲ್ಪಡುವರು ಮತ್ತು ಅವರು ಸೃಷ್ಟಿಸಿಕೊಂಡ ಎಲ್ಲ ಸುಳ್ಳುಗಳೂ ಮಾಯವಾಗುವುವು.'' (ಯೂನುಸ್: 30)**

(ಹೆಚ್ಚಿನ ವಿವರಗಳಿಗಾಗಿ ನೋಡಿರಿ ಪವಿತ್ರ ಕುರ್‌ಆನ್,ಆಲಿ ಇಮ್ರಾನ್: 25, ಅಲ್ ಮೂಮಿನೂನ್: 101-103, ಅಲ್ ಅನ್‌ಆಮ್: 94, ಅಲ್ ಮುಮ್ತಹಿನ: 3)

ಪ್ರಸಕ್ತ ವ್ಯವಸ್ಥೆಯಲ್ಲಿ ಮಾನವನಿಗೆ ಲಭಿಸುವ ಸಂಪತ್‌ಸೌಕರ್ಯಗಳು ಅವನ ಕರ್ಮ ಮತ್ತು ಪ್ರತಿಭೆಗಳಿಗನುಗುಣವಾಗಿರುವುದಿಲ್ಲ. ಒಬ್ಬ ವ್ಯಕ್ತಿ ಜೀವಮಾನವಿಡೀ ಅಕ್ರಮ, ಮೋಸ ವಂಚನೆಯಿಂದ ಸಾಕಷ್ಟು ಸಂಪತ್ತು ಗಳಿಸಿರಬಹುದು. ಇನ್ನೊಬ್ಬನು ಜೀವಮಾನವಿಡೀ ಸತ್ಯ, ನ್ಯಾಯ, ದೇವಭಯದಿಂದ ಬದುಕು ಸಾಗಿಸಿಯೂ ದಾರಿದ್ರ್ಯ, ಬಡತನ ಮತ್ತು ಸಂಕಷ್ಟಗಳಲ್ಲಿ ಸಿಲುಕಿರಬಹುದು. ಇವರಿಬ್ಬರೂ ಸಮಾನ ಪ್ರತಿಫಲಕ್ಕೆ ಅರ್ಹರೇ? ಈ ಕೊರತೆಯನ್ನು ತುಂಬಲು ಇನ್ನೊಂದು ವ್ಯವಸ್ಥೆಯಿರಬೇಕು. ಅಲ್ಲಿ ಪ್ರತಿಯೊಬ್ಬನೂ ಮಾಡಿದ ಸತ್ಕರ್ಮ ಮತ್ತು ದುಷ್ಕರ್ಮಗಳಿಗೆ ತಕ್ಕುದಾದ ಪ್ರತಿಫಲ ನ್ಯಾಯಪೂರ್ಣವಾಗಿ ದೊರಕಬೇಕೆಂಬುದು ಬುದ್ಧಿಯ ಬೇಡಿಕೆಯಾಗಿದೆ. ಪರಲೋಕದ ವ್ಯವಸ್ಥೆಯು ಹಾಗೆಯೇ ಇರುವುದೆಂದು ಕುರ್‌ಆನ್ ಖಡಾ ಖಂಡಿತವಾಗಿ ಸಾರುತ್ತದೆ. **(ಸ್ವಾದ್: 28, ಅಲ್ ಜಾಸಿಯ: 21, ಅಲ್ ಅನ್‌ಆಮ್: 132, ಅಶ್ಶುಅರಾ: 90)**

ಇದು ಪರಲೋಕದ ಚಿತ್ರಣವಾಗಿದೆ. ಪ್ರವಾದಿ ಮುಹಮ್ಮದ್(ಸ) ಸಹಿತ ಲೋಕಕ್ಕೆ ಬಂದ ಲಕ್ಷಕ್ಕಿಂತಲೂ ಮಿಕ್ಕಿ ಪ್ರವಾದಿಗಳು ಇದನ್ನೇ ಪ್ರತಿಪಾದಿಸಿದ್ದಾರೆ. ಈ ಲೋಕವನ್ನು ಕೇವಲ ಆಟ ವಿನೋದ, ಉದ್ದೇಶರಹಿತ ಹಾಗೂ ವ್ಯರ್ಥ ಅಸ್ತಿತ್ವವೆಂದು ಭಾವಿಸುವವರಿಗೆ, ಇದು ಶೂನ್ಯದಿಂದ ಸೃಷ್ಟಿಯಾಗಿ ಶೂನ್ಯಕ್ಕೆ ಮರಳಲಿದೆಯೆಂದು ನಂಬುವವರಿಗೆ ಪ್ರಸ್ತುತ ಪುರಾವೆಗಳೂ ದೃಷ್ಟಾಂತಗಳೂ ಸ್ವೀಕಾರಾರ್ಹವಾಗದು. ಆದರೆ ಇದನ್ನು ಮಹಿಮಾವಂತನಾದ

ದೇವನ ಸೃಷ್ಟಿಯೆಂದು ಒಪ್ಪಿಕೊಳ್ಳುವವನು, ಆ ಎಲ್ಲ ಪುರಾವೆಗಳ ಬಗ್ಗೆ ಚಿಂತನೆ ನಡೆಸಿದಾಗ ಪ್ರಸಕ್ತ ಲೋಕದ ನಂತರ ಇಂತಹದೇ ಒಂದು ವ್ಯವಸ್ಥೆ ಇರುವುದನ್ನು ಒಪ್ಪಿಕೊಳ್ಳದಿರಲಾರನು. ಮರಣದ ನಂತರ ಒಂದು ಜೀವನವಿದೆಯೆಂದು ಸಾಬೀತುಗೊಂಡಾಗ, ಅದರ ಅಗತ್ಯಗಳನ್ನು ಸರ್ವ ಸಮರ್ಥನಾದ ದೇವನು ಪೂರೈಸಲಿದ್ದಾನೆಂದು ವಿಶ್ವಾಸವಿರಿಸಲು ಅದು ಪರ್ಯಾಪ್ತವಾಗಿದೆ.

ಯಾವ ಪರಲೋಕ ಜೀವನದ ಮೇಲೆ ವಿಶ್ವಾಸವಿರಿಸಬೇಕೆಂದು ಇಸ್ಲಾಮ್ ಕರೆ ನೀಡುತ್ತದೋ ಅದು ಸಾಮಾನ್ಯವಾಗಿ ಭಾವಿಸಲಾಗುವಂತೆ ಬುದ್ಧಿಗೆ ನಿಲುಕದ ವಿಷಯವಲ್ಲವೆಂದೂ ಅದು ಬುದ್ಧಿ, ವಿವೇಕ ಹಾಗೂ ಯುಕ್ತಿಗೆ ಸಂಪೂರ್ಣ ಪೂರಕವಾದುದೆಂದೂ ಸಾಬೀತಾಗುತ್ತದೆ. ಇದರಲ್ಲಿ ವೈಜ್ಞಾನಿಕ-ತಾಂತ್ರಿಕ ಪ್ರಗತಿಯಿಂದಾಗಿ ಬಿರುಕುಂಟಾಗಲು ಸಾಧ್ಯವಿಲ್ಲ[1]

**ಪರಲೋಕ ವಿಶ್ವಾಸದ ಪ್ರಯೋಜನ**

ಪರಲೋಕ ವಿಶ್ವಾಸವು ಒಳಿತಿನಂತೆ ನಡೆಯುವ, ಕೆಡುಕಿನಿಂದ ದೂರವಿರುವ ಪ್ರೇರಣೆ ನೀಡುತ್ತದೆ ಹಾಗೂ ಒಳಿತಿಗೆ ಉತ್ತಮ ಪ್ರತಿಫಲ ಮತ್ತು ಕೆಡುಕಿಗೆ ಕೆಟ್ಟ ಫಲವಿದೆಯೆಂಬ ನಿರೀಕ್ಷೆಯನ್ನು ಮನುಷ್ಯನಲ್ಲಿ ಮೂಡಿಸುತ್ತದೆ. ಅದು ನೀತಿ-ಸಂಹಿತೆ ಹಾಗೂ ಧರ್ಮಶಾಸ್ತ್ರದ ಆಧಾರ ಸ್ತಂಭವೂ ಆಗಿದೆ. ಈ ಸಂಹಿತೆ ಮತ್ತು ವ್ಯವಸ್ಥೆಗೆ ತನ್ನ ಭದ್ರತೆ ಮತ್ತು ಉಳಿವಿಗಾಗಿ ಯಾವುದೇ ಭೌತಿಕ ಶಕ್ತಿ-ಅಧಿಕಾರದ ಅಗತ್ಯವಿಲ್ಲ, ಅದು ಪರಲೋಕ ವಿಶ್ವಾಸದ ಮೂಲಕ ಮಾನವನೊಳಗೆ ಒಂದು ಬಲಿಷ್ಠ ಆತ್ಮಸಾಕ್ಷಿಯನ್ನು ಸೃಷ್ಟಿಸುತ್ತದೆ. ಅದು ಮಾನವನಿಗೆ ಯಾವುದೇ ಬಾಹ್ಯ ಆಮಿಷ ಮತ್ತು ಭಯವಿಲ್ಲದೆಯೇ ತಾನಾಗಿಯೇ ಒಳಿತಿನ ಕಡೆಗೆ ಪ್ರೇರಣೆ ನೀಡುತ್ತದೆ ಮತ್ತು ಇಸ್ಲಾಮ್ ಅಂತಿಮ ದುರ್ಗತಿಗೆ ಕಾರಣವಾಗುವಂತಹ ಪಾಪಗಳಿಂದ ದೂರವಿರಲು ತಾಕೀತು ಮಾಡುತ್ತದೆ. ಇಹಲೋಕವು ನಶ್ವರ ಮತ್ತು ಪರಲೋಕ ಶಾಶ್ವತವೆಂಬುದನ್ನು ಕುರ್‌ಆನ್ ಅಲ್ಲಲ್ಲಿ ಪ್ರತಿಪಾದಿಸುತ್ತಾ ಮಾನವನನ್ನು ನೈತಿಕ ಚೌಕಟ್ಟಿನೊಳಗೆ ಜೀವಿಸಲು ಪ್ರೇರೇಪಿಸುತ್ತದೆ. ಉದಾ : ಆಲಿ ಇಮ್ರಾನ್ : 196-198

---

1. ಪರಲೋಕದ ಕುರಿತು ಹೆಚ್ಚಿನ ವಿವರಗಳಿಗಾಗಿ ಮೌ/ ಕೆ.ಸಿ. ಅಬ್ದುಲ್ಲಾ ಮೌಲವಿಯವರ 'ಪರಲೋಕ ಚಿತ್ರಣ ಕುರ್‌ಆನಿನಲ್ಲಿ' ಹಾಗೂ ಮರಣಾನಂತರ ಜೀವನದ ವೈಜ್ಞಾನಿಕ ವಿಶ್ಲೇಷಣೆಯನ್ನರಿಯಲು ಮೌ। ಸಯ್ಯಿದ್ ಮೌದೂದಿಯವರ 'ಮರಣೋತ್ತರ ಜೀವನ' ಎಂಬ ಕೃತಿಗಳನ್ನು ನೋಡಿರಿ.

# ಇಸ್ಲಾಮೀ ಸಂಸ್ಕೃತಿಯಲ್ಲಿ ಈಮಾನಿಗಿರುವ ಮಹತ್ವ

ಈಗ ಈವರೆಗೆ ವಿವರಿಸಿದಂತೆ ಇಸ್ಲಾಮಿನ ಮೂಲಭೂತ ವಿಶ್ವಾಸಗಳು ಒಟ್ಟಾಗಿ ಎಂತಹ ಸಂಸ್ಕೃತಿಯನ್ನು ಸೃಷ್ಟಿಸುತ್ತದೆಂದು ನೋಡೋಣ.

ಮಾನವನು ಇಲ್ಲಿ ಇತರ ಚರಾಚರ ವಸ್ತುಗಳಂತಲ್ಲ, ಅವನು ಈ ಭೂಮಿಯಲ್ಲಿ ಅಲ್ಲಾಹನ ಪ್ರತಿನಿಧಿಯಾಗಿದ್ದಾನೆ. ಈ ಕಲ್ಪನೆಯ ಪ್ರಕಾರ, ಮಾನವ ತನ್ನ ಸೃಷ್ಟಿಕರ್ತ ಮತ್ತು ಪರಿಪಾಲಕನ ಸಂಪ್ರೀತಿ ಗಳಿಸುವುದೇ ಅವನ ಜೀವನದ ಧ್ಯೇಯವೆಂದು ಸಾರಲಾಯಿತು. ಈ ಧ್ಯೇಯ ಸಾಧನೆಗಾಗಿ ಮಾನವ ಮಾಡಬೇಕಾದುದು:

1) ದೇವನನ್ನು ಸರಿಯಾಗಿ ಗುರುತಿಸಿಕೊಳ್ಳುವುದು.
2) ಆಜ್ಞಾಪಿಸುವುದು, ತಡೆಯುವುದು ಕೇವಲ ಅಲ್ಲಾಹನಾಗಿದ್ದಾನೆ. ಅವನು ಮಾತ್ರ ಆಜ್ಞಾಧಿಕಾರಿ ಮತ್ತು ಅನುಸರಣಾರ್ಹನೆಂದು ಭಾವಿಸಿ ತನ್ನೆಲ್ಲ ಅಧಿಕಾರಗಳನ್ನು ದೇವಾಜ್ಞೆಗಳಿಗೆ ಅಧೀನಗೊಳಿಸುವುದು.
3) ದೇವನ ಸಂಪ್ರೀತಿಯನ್ನು ಗಳಿಸುವ ವಿಧಾನಗಳನ್ನು ಅರಿಯುವುದು. ಅದನ್ನು ಅರಿತ ನಂತರ ಅವುಗಳ ಪ್ರಕಾರವೇ ಬದುಕು ಸಾಗಿಸುವುದು.
4) ಈ ಲೋಕದ ಅಪೂರ್ಣ ಫಲಿತಾಂಶಗಳಿಂದ ಮೋಸ ಹೋಗದಿರಲು, ದೇವ ಸಂಪ್ರೀತಿಯ ಫಲಗಳನ್ನೂ ಅವನ ಕ್ರೋಧದ ದುಷ್ಪರಿಣಾಮವನ್ನು ಅರಿಯುವುದು.

ಅಲ್ಲಾಹ್, ದೇವಚರರು, ದೇವಗ್ರಂಥಗಳು, ದೇವ ಪ್ರವಾದಿಗಳು ಮತ್ತು ಪರ ಲೋಕ ವೆಂಬ ಇಸ್ಲಾಮಿನ ಮೂಲಭೂತ ವಿಶ್ವಾಸಗಳು ಇದೇ ಅಗತ್ಯವನ್ನು ಪೂರೈಸುತ್ತವೆ.

ದೇವನ ಅಸ್ತಿತ್ವ ಮತ್ತು ಗುಣಗಳನ್ನು ಕುರ್‌ಆನ್ ವಿವರಿಸಿರುವುದು, ಮಾನವನು ಯಾರ ಪ್ರತಿನಿಧಿಯಾಗಿ ಭೂಮುಖಕ್ಕೆ ಕಳಿಸಲ್ಪಟ್ಟಿರುತ್ತಾನೋ ಮತ್ತು ಯಾರ ಸಂಪ್ರೀತಿಯ ಗಳಿಕೆಯು ಅವನ ಜೀವನದ ಧ್ಯೇಯವಾಗಿದೆಯೋ ಆ ದೇವನನ್ನು ಸರಿಯಾದ ರೀತಿಯಲ್ಲಿ ಗುರುತಿಸಲಿಕ್ಕಾಗಿದೆ. ದೇವಚರರು ಪ್ರಪಂಚದ ವ್ಯವಹಾರಗಳನ್ನು ನೋಡಿಕೊಳ್ಳುವ ಕಾರ್ಯಕರ್ತರಾಗಿದ್ದಾರೆ. ಅವರ ಕುರಿತು ಕುರ್‌ಆನ್ ವಿವರಿಸಿರುವುದು, ಮಾನವನು ಇವರನ್ನು ಪ್ರಪಂಚದ ನಿರ್ಮಾಪಕರೆಂದೋ ದೇವನ ಕಾರ್ಯಗಳಲ್ಲಿ ಆತನ

ಭಾಗೀದಾರರೆಂದೋ ಭಾವಿಸಬಾರದು ಎಂಬುದಕ್ಕಾಗಿದೆ. ಇದು ಮಾನವನನ್ನು ದೇವನ ಕಾನೂನುಗಳನ್ನು ಮನಸಾರೆ ಅನುಸರಿಸಲು ಅಗತ್ಯವಿರುವ ಒಂದು ವಿಶಿಷ್ಟ ಗುಣವನ್ನು ಅವನಲ್ಲಿ ಉಂಟು ಮಾಡುತ್ತದೆ. ವಿಶೇಷ ಆತ್ಮಸಾಕ್ಷಿಯನ್ನೂ ಮೂಡಿಸುತ್ತದೆ.

ಪ್ರವಾದಿತ್ವ ಮತ್ತು ಗ್ರಂಥದ ಮೇಲಿನ ವಿಶ್ವಾಸದಿಂದ ದೇವನು ಮಾನವನಿಗೆ ನಿಶ್ಚಯಿಸಿದ ಕಾನೂನುಗಳ ಮತ್ತು ಮೇರೆಗಳ ಪರಿಚಯವಾಗುತ್ತದೆ. ಪ್ರವಾದಿಯ ಶಿಕ್ಷಣವನ್ನು ದೇವನ ಶಿಕ್ಷಣವೆಂದೂ ಆ ಶಿಕ್ಷಣವನ್ನು ವಿವರಿಸುವ ಗ್ರಂಥವನ್ನು ದೇವನ ಗ್ರಂಥವೆಂದೂ ನಂಬುವುದೇ ಈ ಎರಡರ ಮೇಲೆ ವಿಶ್ವಾಸ ತಾಳುವುದರ ತಾತ್ಪರ್ಯವಾಗಿದೆ. ಈ ವಿಶ್ವಾಸದಿಂದಲೇ ಮಾನವನಲ್ಲಿ ದೃಢ ನಂಬಿಕೆಯುಂಟಾಗುತ್ತದೆ. ದೇವನು ತನ್ನ ಪ್ರವಾದಿ ಮತ್ತು ಗ್ರಂಥದ ಮೂಲಕ ತೋರಿಸಿ ಕೊಟ್ಟ ಕಾನೂನು, ವಿಧಾನ ಮತ್ತು ಮೇರೆಗಳನ್ನು ಪಾಲಿಸುವ ಸಾಮರ್ಥ್ಯ ವನ್ನು ಅವನಲ್ಲುಂಟು ಮಾಡುತ್ತದೆ. ಪರಲೋಕ ವಿಶ್ವಾಸದ ಮೂಲಕ ಮಾನವನು ಬಾಹ್ಯವಾಗಿ ತೋರುವ ಒಂದು ಲೋಕದ ಹಿಂದೆ ಇನ್ನೊಂದು ಲೋಕವನ್ನು ಕಾಣುತ್ತಾನೆ. ಇಲ್ಲಿನ ಸುಖ-ದುಃಖ, ಲಾಭ-ನಷ್ಟಗಳು ದೇವ ಸಂಪ್ರೀತಿಯ ಮಾನದಂಡವಲ್ಲವೆಂದು ಅವನಿಗೆ ತಿಳಿಯುತ್ತದೆ. ಮಾನವನ ಕರ್ಮಗಳಿಗೆ ಒಳ್ಳೆಯ ಅಥವಾ ಕೆಟ್ಟ ಪ್ರತಿಫಲ, ಶಿಕ್ಷೆ ಅಥವಾ ರಕ್ಷೆ ಇದೇ ಲೋಕದಲ್ಲಿ ಮುಗಿಯುವುದಿಲ್ಲ, ಬದಲಾಗಿ ಅಂತಿಮ ತೀರ್ಮಾನವು ಆ ಲೋಕದಲ್ಲಿ ಆಗುತ್ತದೆ. ಅದುವೇ ಅಧಿಕೃತವಾಗಿದೆ. ಈ ಲೋಕದಲ್ಲಿ ದೇವನ ಕಾನೂನನ್ನು ಸರಿಯಾಗಿ ಅನುಸರಿಸುವುದು ಮತ್ತು ಅವನ ಮೇರೆಗಳನ್ನು ಚೆನ್ನಾಗಿ ಪಾಲಿಸುವುದು ಮಾತ್ರ ಅಂದಿನ ತೀರ್ಮಾನದಲ್ಲಿ ಯಶಸ್ಸಿನ ಏಕೈಕ ಮಾರ್ಗವಾಗಿದೆ. ಅಲ್ಲಾಹನ ಮೇಲೆ ವಿಶ್ವಾಸದ ಬಳಿಕ ಪರಲೋಕ ವಿಶ್ವಾಸವೇ ಮಾನವನನ್ನು ಇಸ್ಲಾಮಿನ ಕಾನೂನುಗಳನ್ನು ಪಾಲಿಸಲು ಪ್ರೇರೇಪಿಸುವ ಪ್ರಬಲ ಶಕ್ತಿಯಾಗಿದೆ. ಇಸ್ಲಾಮೀ ಸಂಸ್ಕೃತಿಗಾಗಿ ಮಾನವನನ್ನು ಮಾನಸಿಕವಾಗಿ ಸಿದ್ಧಪಡಿಸುವಲ್ಲಿ ಈ ವಿಶ್ವಾಸಕ್ಕೆ ಪ್ರಮುಖ ಪಾತ್ರವಿದೆ.

ಈ ಮೂಲಭೂತ ವಿಶ್ವಾಸಗಳು ಜೀವನದ ಕುರಿತು ವಿಶಿಷ್ಟ ಕಲ್ಪನೆ ಮತ್ತು ನಿರ್ದಿಷ್ಟ ಧ್ಯೇಯದ ಆಧಾರದಲ್ಲಿ ಸಂಸ್ಕೃತಿಯನ್ನು ಕಟ್ಟಿ ಬೆಳೆಸುತ್ತದೆ. ಬುದ್ಧಿಪೂರ್ವಕವಾಗಿಯೂ ಅಂತಹ ಸಂಸ್ಕೃತಿಗೆ ಅದು ಅಗತ್ಯವಾಗಿ ಬೇಕಾಗಿದೆ.

## ಇಸ್ಲಾಮೀ ಸಂಸ್ಕೃತಿಯ ರೂಪುರೇಷೆ

1) ಇದೊಂದು ಸಾಮ್ರಾಜ್ಯದಂತಹ ವ್ಯವಸ್ಥೆಯಾಗಿದೆ. ಇದರಲ್ಲಿ ದೇವನು ಧಾರ್ಮಿಕ ಕಲ್ಪನೆಯ ಪ್ರಕಾರ ಕೇವಲ 'ಆರಾಧ್ಯ'ನಲ್ಲ, ಬದಲಾಗಿ, ಲೌಕಿಕ ಕಲ್ಪನೆಯಂತೆ ಅವನು ನಿರಂಕುಶ ಪ್ರಭುವಾಗಿದ್ದಾನೆ. ಅವನು ಈ ಸಾಮ್ರಾಜ್ಯದ ಚಕ್ರವರ್ತಿಯಾಗಿದ್ದಾನೆ. ಪ್ರವಾದಿಯು ಅವನ ಪ್ರತಿನಿಧಿಯೂ ಕುರ್‌ಆನ್ ಅವನ ಸಂವಿಧಾನವೂ ಆಗಿದೆ. ಈ

ಚಕ್ರವರ್ತಿಯನ್ನು ಒಪ್ಪಿಕೊಳ್ಳುವವನು ಅವನ ಪ್ರತಿನಿಧಿಯನ್ನು ಅನುಸರಿಸುವ ಮತ್ತು ಅವನ ಸಂವಿಧಾನಕ್ಕೆ ಬದ್ಧವಾಗಿರುವುದಾಗಿ ಅಂಗೀಕರಿಸುವ ಮೂಲಕ ಈ ಸಾಮ್ರಾಜ್ಯದ ಪ್ರಜೆಯಾಗುತ್ತಾನೆ. ಆ ಚಕ್ರವರ್ತಿಯು ತನ್ನ ಪ್ರತಿನಿಧಿ ಮತ್ತು ತನ್ನ ಸಂವಿಧಾನದ ಮೂಲಕ ನಿಶ್ಚಯಿಸಿದ ಕಾನೂನುಗಳನ್ನು- ಅದು ಅವನಿಗೆ ಅರ್ಥವಾಗಲಿ, ಆಗದಿರಲಿ-ನಿಶ್ಶರ್ತವಾಗಿ ಒಪ್ಪಿಕೊಳ್ಳುವವನೇ 'ಮುಸ್ಲಿಮ್'. ಅದಕ್ಕೆ ವ್ಯತಿರಿಕ್ತವಾಗಿ ದೇವನ ಈ ನಿರಂಕುಶ ಅಧಿಕಾರ ಮತ್ತು ಕಾನೂನನ್ನು ವೈಯಕ್ತಿಕ ಮತ್ತು ಸಾಮೂಹಿಕ ನೆಲೆಯಲ್ಲಿ ಒಪ್ಪಿಕೊಳ್ಳುವುದೂ ಬಿಡುವುದೂ ತನ್ನ ಸ್ವಂತ ಅಧಿಕಾರವೆಂದು ಭಾವಿಸುವವನಿಗೆ ಈ ಸಾಮ್ರಾಜ್ಯದಲ್ಲಿ ಸ್ಥಾನವಿಲ್ಲ.

2) ಈ ಸಂಸ್ಕೃತಿಯ ನೈಜ ಉದ್ದೇಶವು ಮಾನವನನ್ನು ಅಂತಿಮ ವಿಜಯಕ್ಕಾಗಿ ಸಿದ್ಧಗೊಳಿಸುವುದಾಗಿದೆ. ಅದು ಈ ಲೋಕದಲ್ಲಿ ಮಾನವನ ಸತ್ಕರ್ಮವನ್ನವಲಂಬಿಸಿದೆ. ಅವನಿಗೆ ಸತ್ಕರ್ಮ ಯಾವುದು, ದುಷ್ಕರ್ಮ ಯಾವುದು, ಯಾವುದು ಉತ್ತಮ, ಯಾವುದು ಹಾನಿಯೆಂದು ತೋರಿಸಿ ಕೊಡುವುದು ಮಾನವನ ಕೆಲಸವಲ್ಲ, ಅದು ಪರಲೋಕದಲ್ಲಿ ಕರ್ಮಗಳ ಬಗ್ಗೆ ತೀರ್ಪು ನೀಡುವ ದೇವನ ಕೆಲಸವಾಗಿದೆ. ಅವನೇ ಅದನ್ನು ಚೆನ್ನಾಗಿ ಬಲ್ಲನು. ಆದ್ದರಿಂದ ಈ ಸಂಸ್ಕೃತಿಯು ಮಾನವನೊಂದಿಗೆ, ತನ್ನ ಜೀವನದ ಎಲ್ಲ ವ್ಯವಹಾರಗಳಲ್ಲೂ ದೇವನು ತೋರಿಸಿದ ಮಾರ್ಗವನ್ನು ಅನುಸರಿಸುವಂತೆ ಮತ್ತು ತನ್ನ ಕರ್ಮ ಸ್ವಾತಂತ್ರ್ಯವನ್ನು ಧರ್ಮದ ಮೇರೆಯೊಳಗಿರಿಸುವಂತೆ ಕರೆ ನೀಡುತ್ತದೆ. ಈ ರೀತಿ ಸಂಸ್ಕೃತಿಯು ಧರ್ಮ ಮತ್ತು ಲೋಕದ ಸಂಯೋಜನೆಯಾಗಿದೆ. ಇದೊಂದು ವಿಸ್ತೃತ ವ್ಯವಸ್ಥೆಯಾಗಿದ್ದು ಮಾನವನ ವಿಚಾರ-ನಂಬಿಕೆಗಳು, ಅವನ ವ್ಯಕ್ತಿ ಚಾರಿತ್ರ್ಯ, ಅವನ ವೈಯಕ್ತಿಕ ಕರ್ಮಗಳು, ಅವನ ಖಾಸಗಿ ವ್ಯವಹಾರಗಳು, ಅವನ ಕೌಟುಂಬಿಕ, ನಾಗರಿಕ, ರಾಜಕೀಯವೇ ಮೊದಲಾದ ಸಕಲ ರಂಗಗಳನ್ನು ಅದು ಒಳಗೊಂಡಿವೆ. ಈ ಎಲ್ಲ ವಿಷಯಗಳಿಗೂ ವಿಧಾನ ಮತ್ತು ಕಾನೂನುಗಳನ್ನು ಅಲ್ಲಾಹನೇ ನಿಶ್ಚಯಿಸಿದ್ದಾನೆ. ಅದರ ಹೆಸರೇ 'ಇಸ್ಲಾಮ್ ಧರ್ಮ' ಅಥವಾ 'ಇಸ್ಲಾಮೀ ಸಂಸ್ಕೃತಿ'ಯಾಗಿದೆ.

3) ಇದು ಯಾವುದೇ ಜನಾಂಗೀಯ, ದೇಶೀಯ ಅಥವಾ ವಂಶೀಯ ಸಂಸ್ಕೃತಿಯಲ್ಲ, ಅದು ಅಪ್ಪಟ ಮಾನವ ಸಂಸ್ಕೃತಿಯಾಗಿದೆ. ಇದು ಮಾನವನನ್ನು ಮಾನವನೆಂಬ ನೆಲೆಯಲ್ಲಿ ಅಭಿಸಂಬೋಧಿಸುತ್ತದೆ. ಏಕದೇವತ್ವ , ಪ್ರವಾದಿತ್ವ , ದೇವಗ್ರಂಥ ಮತ್ತು ಪರಲೋಕದ ಮೇಲೆ ವಿಶ್ವಾಸವಿರಿಸುವ ಸಕಲರನ್ನೂ ತನ್ನ ಮೇರೆಯೊಳಗೆ ತೆಗೆದುಕೊಳ್ಳುತ್ತದೆ. ವರ್ಣ, ವಂಶ, ಭಾಷೆಗಳ ವ್ಯತ್ಯಾಸವಿಲ್ಲದೆ ಸಕಲ ಮಾನವರನ್ನೂ ಒಂದು ಸಮುದಾಯವಾಗಿ ಮಾಡುತ್ತದೆ. ಇದಕ್ಕೆ ಇಡೀ ಜಗತ್ತಿನಲ್ಲಿ ಹಬ್ಬುವ ಸಾಮರ್ಥ್ಯವಿದೆ. ಆದರೆ ಇದರ ಉದ್ದೇಶ ತನ್ನ ಅನುಯಾಯಿಗಳ ಸಂಖ್ಯೆಯನ್ನು ಹೆಚ್ಚಿಸುವುದಲ್ಲ, ಬದಲಾಗಿ, ಅಲ್ಲಾಹನು ಸಕಲ ಮಾನವರಿಗಾಗಿ ನೀಡಿದ ನೈಜ ಶಿಕ್ಷಣ ಮತ್ತು ಸತ್ಕರ್ಮಗಳಿಂದ ಪ್ರಯೋಜನ ಪಡೆಯುವಂತೆ ಮಾಡುವುದಾಗಿದೆ. ಆದ್ದರಿಂದ ದೇವನ ಸಾಮ್ರಾಜ್ಯಕ್ಕೆ ಅಧೀನವಾಗಿ, ಅವನ ಮೇರೆಗಳನ್ನು

ಕಾನೂನುಗಳನ್ನು ಅವನ ಪ್ರವಾದಿ ಮತ್ತು ಗ್ರಂಥ ತೋರಿಸಿಕೊಟ್ಟ ಪ್ರಕಾರ ಪಾಲಿಸುವವರನ್ನು ಮಾತ್ರ ಆಯ್ಕೆ ಮಾಡಲಿಕ್ಕಾಗಿ ಈಮಾನಿನ ನಿಬಂಧನೆಯನ್ನು ಹೇರುತ್ತದೆ. ಅವರು ಮಾತ್ರ ಈ ಸಂಸ್ಕೃತಿಯಲ್ಲಿ ಲೀನವಾಗಬಲ್ಲರು. ಅವರು ಎಷ್ಟು ಕಡಿಮೆ ಸಂಖ್ಯೆಯಲ್ಲಿದ್ದರೂ ಸರಿ. ಅವರಿಂದ ಮಾತ್ರ ಒಂದು ನೈಜ ಮತ್ತು ಪ್ರಬಲ ವ್ಯವಸ್ಥೆ ಸ್ಥಾಪಿತವಾಗಬಲ್ಲುದು. ನಿಷೇಧಿಗಳು, ಕಪಟ ವಿಶ್ವಾಸಿಗಳು ಅಥವಾ ದುರ್ಬಲ ವಿಶ್ವಾಸಿಗಳಿಗೆ ಈ ವ್ಯವಸ್ಥೆಯಲ್ಲಿ ಸ್ಥಾನ ದೊರಕಲಾರದು.

4) ಈ ಸಂಸ್ಕೃತಿಯ ಇನ್ನೊಂದು ವಿಶೇಷತೆಯು, ಪ್ರಬಲ ಶಿಸ್ತು ಮತ್ತು ಶಕ್ತಿಶಾಲಿ ಹಿಡಿತ ವಾಗಿದೆ. ಆದರಿಂದ ಅದು ತನ್ನ ಅನುಯಾಯಿಗಳನ್ನು ವೈಯಕ್ತಿಕವಾಗಿಯೂ ಸಾಮೂಹಿಕ ವಾಗಿಯೂ ತನ್ನ ಸಂವಿಧಾನಕ್ಕೆ ಬದ್ಧಗೊಳಿಸುತ್ತದೆ. ಅದಕ್ಕೆ ಕಾರಣ ಕಾನೂನು ಮಾಡುವುದಕ್ಕೆ ಮತ್ತು ಮೇರೆಗಳನ್ನು ನಿಶ್ಚಯಿಸುವುದಕ್ಕೆ ಮುಂಚೆ ಅವುಗಳಿಗೆ ಬದ್ಧವಾಗಿರುವ ವ್ಯವಸ್ಥೆ ಮಾಡುತ್ತದೆ. ಆಜ್ಞೆ ನೀಡುವುದಕ್ಕೆ ಮುಂಚೆ ಅದನ್ನು ಜಾರಿಗೊಳಿಸುವ ವ್ಯವಸ್ಥೆ ಮಾಡುತ್ತದೆ. ಮೊತ್ತಮೊದಲು ಅದು ದೇವನ ಸಾರ್ವಭೌಮತೆಯನ್ನು ಒಪ್ಪಿಕೊಳ್ಳುವಂತೆ ಮಾಡುತ್ತದೆ. ಕುರ್‌ಆನ್ ಮತ್ತು ಪ್ರವಾದಿಯ ಮೂಲಕ ನೀಡಲಾಗಿರುವ ಆಜ್ಞೆಗಳು ಅಲ್ಲಾಹನ ಆಜ್ಞೆಗಳಾಗಿದ್ದು ಅವುಗಳ ಅನುಸರಣೆಯು ದೇವನ ಅನುಸರಣೆಯಾಗಿದೆಯೆಂದು ಖಾತ್ರಿ ಪಡಿಸುತ್ತದೆ. ತರುವಾಯ ಎಲ್ಲ ಸ್ಥಿತಿಗಳಲ್ಲೂ ಪ್ರತಿಕ್ಷಣದಲ್ಲೂ ಆಜ್ಞಾಪಾಲನೆಗೆ ಪ್ರೇರೇಪಿಸುವಂತಹ, ಆಜ್ಞೋಲ್ಲಂಘನೆಯನ್ನು ಖಂಡಿಸುವಂತಹ ಒಂದು ಶಕ್ತಿಯನ್ನು ಅವನೊಳಗೆ ಇರಿಸುತ್ತದೆ. ಅನಂತರವಷ್ಟೇ ಅವನಿಗೆ ಆಜ್ಞೆಗಳನ್ನು ನೀಡುತ್ತದೆ ಮತ್ತು ಮೇರೆಗಳನ್ನು ನಿಶ್ಚಯಿಸುತ್ತದೆ. ಜೀವನದ ವಿಧಾನವನ್ನು ಕಲಿಸುತ್ತದೆ. ತನ್ನ ಹಿತಾಸಕ್ತಿಗಾಗಿ ದೊಡ್ಡ ದೊಡ್ಡ ತ್ಯಾಗ ಬಲಿದಾನಗಳನ್ನು ಸಹಿಸಲು ಹೇಳುತ್ತದೆ. ಈ ವಿಧಾನಕ್ಕಿಂತ ಉತ್ತಮ ಮತ್ತು ಯುಕ್ತಿಪೂರ್ಣ ವಿಧಾನ ಬೇರೊಂದಿಲ್ಲ. ಇದರಿಂದಾಗಿ ಇಸ್ಲಾಮೀ ಸಂಸ್ಕೃತಿಯುಗಳಿಸಿದಷ್ಟು ಪ್ರಭಾವವನ್ನು ಬೇರಾವ ಸಂಸ್ಕೃತಿಯೂ ಪಡೆದಿಲ್ಲ.

5) ಈ ಸಂಸ್ಕೃತಿಯು ಒಂದು ಪಾವನ, ಪರಿಶುದ್ಧ ಸಮಾಜವನ್ನು ಕಟ್ಟ ಬಯಸುತ್ತದೆ. ಅದಕ್ಕೆ ಸದಾಚಾರ ಸಂಪನ್ನ ವ್ಯಕ್ತಿಗಳ ಅಗತ್ಯವಿದೆ. ಅವರು ಎಲ್ಲ ರೀತಿಯ ಕೆಟ್ಟ ವಿಚಾರ-ಚಿಂತನೆಗಳಿಂದ ಮುಕ್ತವಾಗಿರಬೇಕು. ಅಂತಹ ಸತ್ಪ್ರಜೆಗಳನ್ನು ತಯಾರಿಸಲು ಇಸ್ಲಾಮ್ ಮೊತ್ತಮೊದಲು ಅವರಲ್ಲಿ ಸತ್ಯವಿಶ್ವಾಸವನ್ನು ತುಂಬುತ್ತದೆ. ಆದರಿಂದ ಅವರಲ್ಲಿ ಸತ್ಯ ಸಂಧತೆ, ಪ್ರಾಮಾಣಿಕತೆ, ವಿಶ್ವಸ್ಥತೆ, ಶುದ್ಧ ಪ್ರಕೃತಿ, ಆತ್ಮನಿಯಂತ್ರಣ, ಔದಾರ್ಯ, ವಿಶಾಲ ದೃಷ್ಟಿ, ಸ್ವಾಭಿಮಾನ, ನಯ-ವಿನಯ, ದೃಢ ಸಂಕಲ್ಪ, ತ್ಯಾಗ-ಬಲಿದಾನ, ಕರ್ತವ್ಯ ಪ್ರಜ್ಞೆ, ಧೈರ್ಯ- ಸ್ಥೈರ್ಯ, ನಿರಪೇಕ್ಷತೆ, ಆಜ್ಞಾನುಸರಣೆ ಮತ್ತು ಕಾನೂನು ಪಾಲನೆಯಂತಹ ಉನ್ನತ ಗುಣಗಳು ಬೆಳೆಯುತ್ತದೆ. ಇವೆಲ್ಲ ಸೇರಿ ಒಂದು ಉತ್ತಮ ಸಮಾಜಕ್ಕೆ ಬೇಕಾದ ಅರ್ಹತೆಯನ್ನು ಜನರಲ್ಲಿ ಉಂಟು ಮಾಡುತ್ತದೆ.

6) ಈ ಸಂಸ್ಕೃತಿಯ ಮೂಲ ವಿಶ್ವಾಸಗಳಲ್ಲಿ ಸಚ್ಚಾರಿತ್ರ್ಯವನ್ನುಂಟು ಮಾಡುವ ಮತ್ತು ಅದನ್ನು ಬೆಳೆಸಿ ರಕ್ಷಿಸುವ ಎಲ್ಲ ಸಾಮರ್ಥ್ಯಗಳಿವೆ. ಅಷ್ಟೇ ಅಲ್ಲ, ಅದು ಮಾನವನ ಭೌತಿಕ ಪ್ರಗತಿಗಾಗಿ ಪ್ರೇರೇಪಿಸುತ್ತದೆ. ಲೋಕದ ಸಂಪನ್ಮೂಲಗಳನ್ನು ಅತ್ಯುತ್ತಮ ರೀತಿಯಲ್ಲಿ ಸಮತೋಲನದೊಂದಿಗೆ ಬಳಸಲು ಕಲಿಸುತ್ತದೆ. ಭೌತಿಕ ಪ್ರಗತಿಗಾಗಿ ಅಗತ್ಯವಿರುವ ಸದ್ಗುಣಗಳನ್ನು ಅದು ಉಂಟು ಮಾಡುತ್ತದೆ. ಮಾನವನನ್ನು ಕ್ರಿಯಾಶೀಲನಾಗಿ ಮಾಡುವ, ಮೇರೆ ಮೀರದಂತೆ ನೋಡಿಕೊಳ್ಳುವ ಹಾಗೂ ವಿನಾಶ ಕೂಪಕ್ಕೆ ತಳ್ಳಬಹುದಾದಂತಹ ತಪ್ಪುದಾರಿಗೆ ಸಾಗದಂತೆ ತಡೆಯುವ ಶಕ್ತಿಯನ್ನೂ ಹೊಂದಿದೆ.

## ಇಸ್ಲಾಮೀ ಸಂಸ್ಕೃತಿಯಲ್ಲಿ ಈಮಾನಿಗಿರುವ ಮಹತ್ವ

ಈಮಾನ್(ಸತ್ಯವಿಶ್ವಾಸ) ಇಲ್ಲದಿದ್ದರೆ ಇಸ್ಲಾಮ್ ಇಲ್ಲ, ಈಮಾನಿನ ದೌರ್ಬಲ್ಯವು ಇಸ್ಲಾಮಿನ ದೌರ್ಬಲ್ಯವಾಗಿದೆ. ಈಮಾನಿನ ಶಕ್ತಿಯು ಇಸ್ಲಾಮಿನ ಶಕ್ತಿಯಾಗಿದೆ. ಇಸ್ಲಾಮ್ ಕೇವಲ ಒಂದು ಮತವಲ್ಲ, ಅದು ನೀತಿ-ಚಾರಿತ್ರ್ಯ, ಸಂಸ್ಕೃತಿ-ಕುಟುಂಬ, ನಾಗರಿಕತೆ-ರಾಜಕೀಯ ಎಲ್ಲವೂ ಆಗಿದೆ. ಈಮಾನ್ ಎಂಬುದು ಕೇವಲ ಧಾರ್ಮಿಕ ನಂಬಿಕೆಯಲ್ಲ, ಬದಲಾಗಿ ವ್ಯಕ್ತಿಗಳ ನೀತಿ-ನಡವಳಿಕೆಗಳು ಅದನ್ನೇ ಅವಲಂಬಿಸಿದೆ. ಅವರ ವ್ಯವಹಾರಗಳು ಸರಿಯಾಗಿರುವುದಕ್ಕೆ ಅದುವೇ ಹೊಣೆಯಾಗಿದೆ. ಅದುವೇ ಅವರನ್ನು ಜೋಡಿಸಿ ಒಂದು ಜನಾಂಗವಾಗಿ ಮಾಡುತ್ತದೆ. ಅವರ ನಾಗರಿಕ, ಸಾಮಾಜಿಕ ಮತ್ತು ರಾಜಕೀಯ ನೀತಿಯನ್ನು ಅದುವೇ ರೂಪಿಸುತ್ತದೆ. ಅದರ ಹೊರತು ಇಸ್ಲಾಮ್ 'ಮತ'ವಾಗಿಯೂ ಉಳಿಯಲಾರದು. ಸಾಂಸ್ಕೃತಿಕ, ನಾಗರಿಕ ಮತ್ತು ರಾಜಕೀಯ ವ್ಯವಸ್ಥೆಯಾಗಿಯೂ ಉಳಿಯಲಾರದು. ಈಮಾನ್ ದುರ್ಬಲಗೊಂಡರೆ ಮುಸ್ಲಿಮರ ನೀತಿ-ಚಾರಿತ್ರ್ಯ ಕೆಡುವುದು, ಅವರ ವ್ಯವಹಾರಗಳು ಕೆಟ್ಟು ಹೋಗುವುದು, ಅವರ ಸಾಮಾಜಿಕ ಮತ್ತು ನಾಗರಿಕ ವ್ಯವಸ್ಥೆ ಅಸ್ತವ್ಯಸ್ತಗೊಳ್ಳುವುದು. ಅವರ ಮಧ್ಯೆ ಏಕ ಜನಾಂಗವೆಂಬ ಸಂಬಂಧ ಕಡಿದು ಹೋಗುವುದು. ಅವರು ಒಂದು ಸ್ವತಂತ್ರ ಮತ್ತು ಗೌರವಪೂರ್ಣ ಹಾಗೂ ಬಲಶಾಲಿ ಜನಾಂಗವೆಂಬ ನೆಲೆಯಲ್ಲಿ ಉಳಿಯ ಲಾರರು. ಅವರ ಏಕತೆ ಮುರಿದು ಹೋದೀತು.

ಆದ್ದರಿಂದ ಇಸ್ಲಾಮಿನಲ್ಲಿ ಈಮಾನಿಗೆ ಸರ್ವ ಪ್ರಥಮ ಸ್ಥಾನವಿದೆ. ಇಸ್ಲಾಮೀ ವ್ಯವಸ್ಥೆಯಲ್ಲಿ ಸೇರಲು ಅದು ಪ್ರಥಮ ನಿಬಂಧನೆಯಾಗಿದೆ. ಒಬ್ಬನು ಈಮಾನನ್ನು ಅಂಗೀಕರಿಸಿದರೆ ಅವನು ಮುಸ್ಲಿಮ್ ಸಮುದಾಯದ ಸದಸ್ಯನಾಗಿ ಮಾರ್ಪಡುವನು. ಅದರ ಸಾಮಾಜಿಕ, ನಾಗರಿಕ ಮತ್ತು ರಾಜಕೀಯದಲ್ಲಿ ಸಮಾನ ಪಾಲುದಾರನಾಗುವನು. ಎಲ್ಲ ಆಜ್ಞೆಗಳು, ಮೇರೆಗಳು ಮತ್ತು ಕಾನೂನುಗಳು ಅವನಿಗೆ ಅನ್ವಯವಾಗುವುವು. ಇನ್ನು ಈ ವಿಶ್ವಾಸವನ್ನು ಸ್ವೀಕರಿಸದವನಿಗೆ ಈ ಸಮುದಾಯದಲ್ಲಿ ಯಾವುದೇ ಸ್ಥಾನವಿಲ್ಲ, ಇಸ್ಲಾಮಿನ ಯಾವುದೇ ಆಜ್ಞೆ, ಯಾವುದೇ ಕಾನೂನು ಅವನ ಮೇಲೆ ಜಾರಿಯಾಗದು. ಏಕೆಂದರೆ ಮುಸ್ಲಿಮರ ಸಮೂಹದಲ್ಲಿ ಅವನು ಲೀನವಾಗುವುದೇ ಸಾಧ್ಯವಿಲ್ಲ.

# ಇಸ್ಲಾಮೀ ಸಂಸ್ಕೃತಿಯ ವೈಶಿಷ್ಟ್ಯಗಳು

ಏಕದೇವ ವಿಶ್ವಾಸವು ಇಸ್ಲಾಮೀ ಸಂಸ್ಕೃತಿಯ ಮೂಲಾಧಾರವಾಗಿದೆ. ಇದು ಅದರ ಪ್ರಥಮ ವೈಶಿಷ್ಟ್ಯವಾಗಿದೆ. ಅದು ಏಕ ಆರಾಧ್ಯನ ಕಡೆಗೆ ಆಹ್ವಾನಿಸುವ ಪ್ರಪ್ರಥಮ ಸಂಸ್ಕೃತಿಯಾಗಿದೆ. ಅವನ ಪ್ರಭುತ್ವ ಮತ್ತು ಆಡಳಿತದಲ್ಲಿ ಅವನಿಗೆ ಯಾರೂ ಭಾಗೀದಾರರಿಲ್ಲ. ಅವನನ್ನು ಮಾತ್ರ ಆರಾಧಿಸಬೇಕು. ಅವನನ್ನು ಮಾತ್ರ ಆಶ್ರಯಿಸಬೇಕು. ಅವನಿಂದ ಮಾತ್ರ ಸಹಾಯ ಬೇಡಬೇಕು. **"ನಾವು ನಿನಗೆ ಮಾತ್ರ ಇಬಾದತ್ ಮಾಡುತ್ತೇವೆ ಮತ್ತು ನಿನ್ನಿಂದ ಮಾತ್ರ ಸಹಾಯ ಯಾಚಿಸುತ್ತೇವೆ."** **(ಪವಿತ್ರ ಕುರ್‌ಆನ್, 1:4)** ಗೌರವವನ್ನು ದಯ ಪಾಲಿಸುವವನೂ ಅವನೇ, ಅಪಮಾನಿಸುವವನೂ ಅವನೇ. ಭೂಮಿ-ಆಕಾಶಗಳಲ್ಲಿರುವ ಯಾವೊಂದು ವಸ್ತುವೂ ಅವನ ಅಧಿಕಾರ ವ್ಯಾಪ್ತಿಯಿಂದ ಹೊರಗಿಲ್ಲ, ಎಲ್ಲವೂ ಅವನ ನಿಯಂತ್ರಣದಲ್ಲಿವೆ. ಈ ಕಲ್ಪನೆಯನ್ನು ಮನ-ಮಸ್ತಿಷ್ಕಗಳಿಗೆ ನಾಟಿರುವುದರ ಫಲವಾಗಿಯೇ ಮಾನವನು ಸೃಷ್ಟಿಗಳಲ್ಲೇ ಅತ್ಯುನ್ನತ ಸ್ಥಾನಕ್ಕೇರಿದ. ಇದೇ ಕಲ್ಪನೆಯು ಜನಸಾಮಾನ್ಯರನ್ನು ಅರಸರ ಮತ್ತು ಜನನಾಯಕರ ದಬ್ಬಾಳಿಕೆಯಿಂದ, ಪಾದ್ರಿಗಳ ಮತ್ತು ಪುರೋಹಿತರ ಕಪಿ ಮುಷ್ಟಿಯಿಂದ ಮುಕ್ತಿ ನೀಡಿತು. ರಾಜ ಮತ್ತು ಪ್ರಜೆಗಳ ಸಂಬಂಧವನ್ನು ಸರಿಪಡಿಸಿತು. ಅವರ ದೃಷ್ಟಿಯನ್ನು ಸರ್ವವನ್ನೂ ಸೃಷ್ಟಿಸಿದ ಸರ್ವಲೋಕಗಳ ಪರಿಪಾಲಕನ ಕಡೆಗೆ ಹರಿಸಿತು.

ಇಸ್ಲಾಮ್ ಮೂರ್ತಿ ಪೂಜೆ, ವಿಗ್ರಹಾರಾಧನೆಗಳ ಕಠಿಣ ಶತ್ರುವಾಗಿದೆ. ಅದು ಜನ ನಾಯಕರ, ಸಜ್ಜನರ, ಪ್ರವಾದಿಗಳ ಹಾಗೂ ದಿಗ್ವಿಜಯಿಗಳ ಪ್ರತಿಮೆಗಳನ್ನು ಮಾಡುವುದನ್ನು ನಿಷೇಧಿಸಿದೆ. ವಸ್ತುತಃ ಈ ಪ್ರತಿಮೆಗಳು ಹಳೆಯ ಮತ್ತು ಆಧುನಿಕ ಸಂಸ್ಕೃತಿಗಳ ವಿಶಿಷ್ಟ ಸಂಕೇತಗಳಾಗಿವೆಯಷ್ಟೆ. ಈ ಮೂಲಭೂತ ವಿಶ್ವಾಸವು ಒಂದು ಏಕತೆಯನ್ನು ಸ್ಥಾಪಿಸಿತು. ಆದ್ದರಿಂದ ಇಲ್ಲಿ ತತ್ವ ಸಿದ್ಧಾಂತ ಮತ್ತು ಧ್ಯೇಯದಲ್ಲಿ, ಸಾರ್ವಜನಿಕ ಉದ್ದೇಶಗಳಲ್ಲಿ, ಸಮಾಜದ ಒಟ್ಟು ಸ್ವರೂಪದಲ್ಲಿ, ಆರ್ಥಿಕ ಮೂಲಗಳಲ್ಲಿ ಹಾಗೂ ವೈಚಾರಿಕತೆ ಮತ್ತು ದೃಷ್ಟಿ ಕೋನದಲ್ಲಿ- ಹೀಗೆ ಎಲ್ಲೆಲ್ಲೂ ಏಕತೆಯನ್ನು ಕಾಣಬಹುದು. ಇಸ್ಲಾಮೀ ಕಲೆಗಳ ಅಧ್ಯಯನ ನಡೆಸುವವರು ವಿವಿಧ ರೀತಿಯ ಕಲಾಸೃಷ್ಟಿಗಳ ವಿನ್ಯಾಸದಲ್ಲೂ ಏಕತೆಯಿರುವುದನ್ನು

ಕಂಡಿದ್ದಾರೆ. ಸ್ಪೈಯಿನ್‌ನ ಆನೆದಂತದ ಕೆತ್ತನೆ, ಈಜಿಪ್ಟ್‌ನ ನೆಯ್ಗೆಯ ಬಟ್ಟೆ, ಸಿರಿಯಾದ ಮಣ್ಣಿನ ಪಾತ್ರೆಗಳು, ಇರಾನಿನ ಆಭರಣಗಳೆಲ್ಲದರಲ್ಲೂ ವೈವಿಧ್ಯತೆಯಿದ್ದರೂ ಅವುಗಳಲ್ಲಿ ಒಂದೇ ರೀತಿಯ ಛಾಪು ಕಂಡು ಬರುತ್ತದೆ.

ಇಸ್ಲಾಮೀ ಸಂಸ್ಕೃತಿಯ ಎರಡನೆಯ ವೈಶಿಷ್ಟ್ಯವೇನೆಂದರೆ ಅದರ ಸಂದೇಶ ಮತ್ತು ದೌತ್ಯವು ಸಾರ್ವಲೌಕಿಕ ಮತ್ತು ಸಾರ್ವಕಾಲಿಕವಾಗಿದೆ. ಅದು ಸಂಪೂರ್ಣ ಮಾನವ ಕುಲವನ್ನು ಆವರಿಸಿದೆ. ಆದ್ದರಿಂದ ಪವಿತ್ರ ಕುರ್‌ಆನ್ ಕುಟುಂಬ, ವಂಶ ಮತ್ತು ದೇಶಗಳ ವ್ಯತ್ಯಾಸಗಳ ಹೊರತಾಗಿಯೂ ಸಂಪೂರ್ಣ ಮಾನವ ಕುಲವನ್ನು ಒಂದು ಏಕತೆಯಾಗಿ ಸಮರ್ಪಿಸುತ್ತದೆ.

**"ಜನರೇ! ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬಳು ಸ್ತ್ರೀಯಿಂದ ಉಂಟು ಮಾಡಿದೆವು. ತರುವಾಯ ಪರಸ್ಪರ ಪರಿಚಯ ಪಟ್ಟುಕೊಳ್ಳಲಿಕ್ಕಾಗಿ ನಿಮ್ಮ ಜನಾಂಗಗಳನ್ನೂ ಗೋತ್ರಗಳನ್ನೂ ಮಾಡಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು." (ಪವಿತ್ರ ಕುರ್‌ಆನ್, 49:13)**

ಈ ಘೋಷಣೆಯು ಜಾಗತಿಕ ಮಾನವ ಏಕತೆಯನ್ನು ಸತ್ಯ, ಒಳಿತು ಮತ್ತು ದೇವ ನಿಷ್ಠೆಯ ಆಧಾರದ ಮೇಲೆ ಇರಿಸಿದಾಗ, ಇಸ್ಲಾಮಿಗೆ ಅಧೀನಗೊಂಡ ಪ್ರತಿಯೊಂದು ಜನಾಂಗ ಮತ್ತು ದೇಶದ ಬುದ್ಧಿ ಜೀವಿಗಳನ್ನು ಅದು ಈ ಸಂಸ್ಕೃತಿಯೊಂದಿಗೆ ಜೋಡಿಸಿತು. ಆದ್ದರಿಂದ ಇತರ ಸಂಸ್ಕೃತಿಗಳು ಆಯಾ ವಂಶದ, ಜನಾಂಗದ ಮಹಾನರ ಬಗ್ಗೆ ಹೆಮ್ಮೆಪಡುವಾಗ, ಇಸ್ಲಾಮೀ ಸಂಸ್ಕೃತಿಯು ಅದನ್ನು ಕಟ್ಟಿ ಬೆಳೆಸಲು ಕೈಜೋಡಿಸಿದ ಎಲ್ಲ ಜನಾಂಗಗಳ ಮತ್ತು ಗೋತ್ರಗಳ ಸುಪುತ್ರರ ಬಗ್ಗೆ ಹೆಮ್ಮೆಪಡುತ್ತದೆ.

ಇಸ್ಲಾಮೀ ಸಂಸ್ಕೃತಿಯ ಮೂರನೆಯ ವೈಶಿಷ್ಟ್ಯವೇನೆಂದರೆ ಅದು ತನ್ನ ಸಂಪೂರ್ಣ ವ್ಯವಸ್ಥೆ ಮತ್ತು ಎಲ್ಲ ಚಟುವಟಿಕೆಗಳಲ್ಲಿ ನೈತಿಕತೆಗೆ ಪ್ರಥಮ ಸ್ಥಾನ ನೀಡುತ್ತದೆ. ಅದರಿಂದ ಎಂದೂ ವ್ಯತಿಚಲಿಸಲಿಲ್ಲ, ಅದನ್ನು ಆಡಳಿತವರ್ಗದ, ಸಂಘಟನೆಗಳ ಮತ್ತು ಜನನಾಯಕರ ಭೌತಿಕ ಲಾಭದ ಸಾಧನವಾಗಿ ಮಾಡಲಿಲ್ಲ, ಸರಕಾರ, ಶಿಕ್ಷಣ-ಕಲೆ, ಕಾನೂನು ನಿರ್ಮಾಣ, ಯುದ್ಧ-ಒಪ್ಪಂದ, ಆರ್ಥಿಕ ಮತ್ತು ಸಾಮಾಜಿಕವೇ ಮೊದಲಾದ ಎಲ್ಲ ರಂಗಗಳಲ್ಲೂ ಹೊಂದಾಣಿಕೆಗೆ ಸದಾ ಗಮನ ಕೊಟ್ಟಿದೆ. ಈ ವಿಷಯದಲ್ಲಿ ಇಸ್ಲಾಮೀ ಸಂಸ್ಕೃತಿಯು ತಲಪಿರುವ ಮಟ್ಟಕ್ಕೆ ಇತರ ಯಾವ ಸಂಸ್ಕೃತಿಯೂ ಮುಟ್ಟಿಲ್ಲ, ಈ ನಿಟ್ಟಿನಲ್ಲಿ ಈ ಸಂಸ್ಕೃತಿಯು ಬಿಟ್ಟು ಹೋಗಿರುವ ಕುರುಹುಗಳು ಅತ್ಯದ್ಭುತವಾಗಿವೆ. ಇದು ಮಾನವ ಕುಲಕ್ಕೆ ಮಹಾ ಸೌಭಾಗ್ಯ ನೀಡಿದ ಮತ್ತು ದೌರ್ಭಾಗ್ಯದ ನೆರಳೂ ಸೋಂಕದಂತೆ ಮಾಡಿದ ಏಕೈಕ ಸಂಸ್ಕೃತಿಯಾಗಿದೆ.

ಇಸ್ಲಾಮೀ ಸಂಸ್ಕೃತಿಯ ನಾಲ್ಕನೆಯ ವೈಶಿಷ್ಟ್ಯವೇನೆಂದರೆ ಅದು ನೈಜ ಜ್ಞಾನದ ಮೇಲೆ ನಂಬಿಕೆಯನ್ನಿರಿಸಿದೆ. ಪವಿತ್ರತಮ ತತ್ವ ಚಿಂತನೆಗಳ ಆಗರವಾಗಿದೆ. ಅದು

ಮನ-ಮಸ್ತಿಷ್ಕಗಳನ್ನು ಒಟ್ಟಿಗೆ ಅಭಿಸಂಬೋಧಿಸುತ್ತದೆ. ದೃಷ್ಟಿಕೋನದಲ್ಲೂ ಅದು ವಿಶಿಷ್ಟವಾಗಿದೆ. ಇದಕ್ಕೆ ಸಾಟಿಯಾದ ಬೇರೆ ಸಂಸ್ಕೃತಿಯಿಲ್ಲ. ಅದು ಧರ್ಮ ಮತ್ತು ವಿಶ್ವಾಸವನ್ನು ಕೇಂದ್ರವಾಗಿಟ್ಟುಕೊಂಡು ಸತ್ಯ- ನ್ಯಾಯದ ಮೇಲೆ ಒಂದು ಸಾಮ್ರಾಜ್ಯವನ್ನು ಸೃಷ್ಟಿಸಿದೆ. ಅದು ಧರ್ಮ ಮತ್ತು ಸಾಮ್ರಾಜ್ಯದ ಅಭಿವೃದ್ಧಿ ಮತ್ತು ಸಂಸ್ಕೃತಿಯ ಬೆಳವಣಿಗೆಗೆ ಅಡ್ಡಿಯಾಗಿಲ್ಲ. ಧರ್ಮ ಮತ್ತು ರಾಜಕೀಯವನ್ನು ಬೇರ್ಪಡಿಸದ ಒಂದು ಸಂಸ್ಕೃತಿಯಿದ್ದರೆ ಅದು ಇಸ್ಲಾಮೀ ಸಂಸ್ಕೃತಿ ಮಾತ್ರ. ಅದರ ಆಡಳಿತವು ಸತ್ಯವನ್ನು ಸ್ಥಾಪಿಸಲಿಕ್ಕಾಗಿಯೇ ಹೊರತು ವೈಯಕ್ತಿಕ ಲಾಭಕ್ಕಾಗಿ ಅಲ್ಲ. ರಾಷ್ಟ್ರದ ಅಧ್ಯಕ್ಷನು ಮುಸ್ಲಿಮರ ಪ್ರತಿನಿಧಿಯೂ ನಾಯಕನೂ ಆಗಿದ್ದಾನೆ. ಕಾನೂನು ನಿರ್ಮಾಣವು ಶರೀಅತ್ ತಜ್ಞರ ಕೆಲಸ. ವಿದ್ವಾಂಸರ ಪ್ರತಿಯೊಂದು ವರ್ಗಕ್ಕೂ ಒಂದು ವಿಶೇಷ ಹೊಣೆಗಾರಿಕೆಯಿದೆ. ಕಾನೂನಿನ ಮುಂದೆ ಎಲ್ಲರೂ ಸಮಾನರು. ಶ್ರೇಷ್ಠತೆಯು ಕೇವಲ ದೇವಭಕ್ತಿ ಮತ್ತು ಜನಸೇವೆಯನ್ನು ಅನುಸರಿಸಿ ಇರುತ್ತದೆ. ಫಾತಿಮಾ ಎಂಬ ಕುಲೀನ ಮಹಿಳೆಯೊಬ್ಬಳು ಕಳ್ಳತನ ಮಾಡಿ ಸಿಕ್ಕಿ ಬಿದ್ದಳು. ಅವಳ ಶಿಕ್ಷೆಯನ್ನು ರದ್ದುಗೊಳಿಸುವಂತೆ ಪ್ರವಾದಿಯವರಲ್ಲಿ ಶಿಫಾರಸು ಮಾಡಲು ಹೋದಾಗ ಅವರು ಬಹಳ ಕೋಪಗೊಂಡರು, ಮತ್ತು 'ಮುಹಮ್ಮದ್‌ನ ಮಗಳು ಫಾತಿಮಾಳೇ ಕದ್ದರೂ ನಾನಾಕೆಯ ಕೈ ಕಡಿಯುವೆ' ಎಂದೂ ಹೇಳಿದರು.

(ಬುಖಾರಿ, ಮುಸ್ಲಿಮ್)

ಒಮ್ಮೆ ಪ್ರವಾದಿ(ಸ) ಹೇಳಿದರು- "ಸೃಷ್ಟಿಗಳೆಲ್ಲ ಅಲ್ಲಾಹನ ಕುಟುಂಬವಾಗಿದೆ. ಯಾರು ಆತನ ಕುಟುಂಬಕ್ಕೆ ಹೆಚ್ಚು ಪ್ರಯೋಜನವೊದಗಿಸುತ್ತಾನೋ ಅವನೇ ಅಲ್ಲಾಹನಿಗೆ ಹೆಚ್ಚು ಪ್ರಿಯನು." (ಬಝ್ಝಾರ್)

ಈ ಸಂಸ್ಕೃತಿಯಲ್ಲಿ ಯಾರಿಗೂ ವಿಶಿಷ್ಟ ಸ್ಥಾನಮಾನವಿಲ್ಲ. ಎಲ್ಲರೂ ಸಮಾನರು. ರಾಜಕೀಯ ನಾಯಕ, ಧಾರ್ಮಿಕ ಮುಖಂಡ, ಯಾವುದೇ ಕುಟುಂಬದ ಮುಖ್ಯಸ್ಥ ಅಥವಾ ಐಶ್ವರ್ಯವಂತ. ಯಾರೇ ಆದರೂ ಸರಿ. ಸ್ವಯಂ ಪ್ರವಾದಿಯವರೊಡನೆ ಅಲ್ಲಾಹನು ಜನರಿಗೆ ಹೀಗೆ ಹೇಳಿರೆಂದು ಆದೇಶಿಸಿದ್ದಾನೆ- "ನಾನು ನಿಮ್ಮಂತೆಯೇ ಇರುವ ಓರ್ವ ಮನುಷ್ಯ." (ಪವಿತ್ರ ಕುರ್‌ಆನ್, 18:110)

ಅತ್ಯದ್ಭುತ ಧರ್ಮ ಸಹಿಷ್ಣುತೆಯು ಇಸ್ಲಾಮೀ ಸಂಸ್ಕೃತಿಯ ಐದನೆಯ ವೈಶಿಷ್ಟ್ಯವಾಗಿದೆ. ಇದರ ಅನುಯಾಯಿಯು ಯುದ್ಧ ವೇಳೆಯಲ್ಲೂ ದೇಶಗಳನ್ನು ಜಯಿಸುವಾಗಲೂ ಅದರಲ್ಲಿ ಆಧಿಪತ್ಯ ಸ್ಥಾಪಿಸುವಾಗಲೂ ನ್ಯಾಯ ಪೀಠದಲ್ಲಿರುವಾಗಲೂ ದಬ್ಬಾಳಿಕೆ ನಡೆಸುವುದಕ್ಕೆ, ನ್ಯಾಯ-ನೀತಿಯ ಮಾರ್ಗವನ್ನು ಕೈ ಬಿಡುವುದಕ್ಕೆ, ಜನರು ತಮ್ಮ ಧರ್ಮವನ್ನು ಅನುಸರಿಸಬೇಕೆಂದು ಒತ್ತಾಯಪಡಿಸುವುದಕ್ಕೆ ಅನುಮತಿ ನೀಡುವುದಿಲ್ಲ. ಇಂತಹ ಒಂದು ಸಂಸ್ಕೃತಿ ಇತಿಹಾಸದಲ್ಲಿ ನೆಲೆ ನಿಂತಿರುವುದು ವಾಸ್ತವ. ಅದು ಅತಿ ಹೆಚ್ಚು ಧರ್ಮ ಸಹಿಷ್ಣು ನ್ಯಾಯ ಮತ್ತು ಮಾನವೀಯ ಮೌಲ್ಯಗಳ ಪ್ರತಿಪಾದಕವಾಗಿತ್ತು. ಇದನ್ನು ಇಸ್ಲಾಮೀ

ಸಂಸ್ಕೃತಿ ಮಾಡಿ ತೋರಿಸಿದೆ. ಇದಕ್ಕೆ ಸಾಕಷ್ಟು ಉದಾಹರಣೆಗಳನ್ನು ಕೊಡಬಹುದು. ಇದರ ಅನುಗ್ರಹಗಳಿಂದ ಎಲ್ಲ ಮತಧರ್ಮಗಳ ಅನುಯಾಯಿಗಳೂ ಫಲ ಪಡೆದಿದ್ದಾರೆ.

ಇಸ್ಲಾಮೀ ಸಂಸ್ಕೃತಿಯ ಈ ವೈಶಿಷ್ಟ್ಯಗಳು ಲೋಕಕ್ಕೆ ಒಂದು ಆದ್ಭುತವಾಗಿತ್ತು. ಎಲ್ಲ ಮತ-ಧರ್ಮಗಳ ಬುದ್ಧಿಜೀವಿಗಳನ್ನು ಅದು ಆಕರ್ಷಿಸಿತು. ಬಲಶಾಲಿಗಳು ತಮ್ಮ ಅಧೀನದಲ್ಲಿರುವವರನ್ನು ಯಾವಾಗಲೂ ಸತಾಯಿಸುತ್ತಾರೆ. ಅವರ ಮೇಲೆ ದಬ್ಬಾಳಿಕೆ ನಡೆಸುತ್ತಾರೆ. ಅವರನ್ನು ಅವಮಾನಿಸುತ್ತಾರೆ. ಇದು ಚರಿತ್ರೆಯಲ್ಲಿ ನಡೆದು ಬಂದದ್ದು. ಆದರೆ ಇಸ್ಲಾಮೀ ಸಂಸ್ಕೃತಿಯು ಪ್ರಾಬಲ್ಯ ಪಡೆದಾಗ, ಅದು ಬಲಶಾಲಿಗಳು ಮತ್ತು ದುರ್ಬಲರೊಂದಿಗೆ ಸಮಾನ ನ್ಯಾಯ ಪಾಲಿಸಿತು. ಗೌರವಾರ್ಹರ ಗೌರವವನ್ನು ಅಂಗೀಕರಿಸಿತು. ಅವರು ಪಶ್ಚಿಮದವರಾಗಿದ್ದರೂ ಪೂರ್ವದವರಾಗಿದ್ದರೂ ಸರಿ. ನ್ಯಾಯ ಪೂರ್ಣ ಆಡಳಿತ, ಉದ್ದೇಶ ಶುದ್ಧಿ ಮತ್ತು ಆತ್ಮಸಾಕ್ಷಿಯ ಸ್ಥಿರತೆಯಲ್ಲಿ ಈ ಸಂಸ್ಕೃತಿಗೆ ಸಾಟಿಯಾಗಿ ಯಾವುದೂ ಇಲ್ಲ.

ಯಾವುದೇ ಸಂಸ್ಕೃತಿಗೂ ಎರಡು ಮುಖಗಳಿರುತ್ತವೆ. ಒಂದು ಭೌತಿಕ, ಇನ್ನೊಂದು ನೈತಿಕ ಮತ್ತು ಆಧ್ಯಾತ್ಮಿಕ. ಭೌತಿಕ ದೃಷ್ಟಿಯಿಂದ ನೋಡಿದರೆ ಇಸ್ಲಾಮೀ ಸಂಸ್ಕೃತಿಯು ಈಗ ಇತರ ಸಂಸ್ಕೃತಿಗಳಿಗಿಂತ ಮುಂದಿಲ್ಲವೆಂಬುದನ್ನು ಒಪ್ಪಿಕೊಳ್ಳಬೇಕಾಗುತ್ತದೆ. ಆದರೆ ಅದು ಆ ಸಂಸ್ಕೃತಿಯ ದೋಷವಲ್ಲ, ಬದಲಾಗಿ ಮುಸ್ಲಿಮರಲ್ಲಿ ಧರ್ಮದ ಪಾಲನೆಯಲ್ಲಿ ಉಂಟಾದ ಹಿನ್ನಡೆಯೇ ಕಾರಣವಾಗಿದೆ. ನೈತಿಕ ಮತ್ತು ಆಧ್ಯಾತ್ಮಿಕ ದೃಷ್ಟಿಕೋನದಿಂದ ನೋಡುವುದಾದರೆ, ಸಂಸ್ಕೃತಿಯ ನೈಜ ಉದ್ದೇಶವು ಮಾನವನನ್ನು ಉನ್ನತಿಗೇರಿಸುವುದಾಗಿದೆ. ಈ ಉದ್ದೇಶ ಸಾಧನೆಗಾಗಿ ಇಸ್ಲಾಮೀ ಸಂಸ್ಕೃತಿಯು ಸಲ್ಲಿಸಿದ ಸೇವೆಗಳಿಗೆ, ಪೂರ್ವ-ಪಶ್ಚಿಮಗಳಲ್ಲಿ ಸಾಟಿಯಾದ ಇನ್ನೊಂದು ಸಂಸ್ಕೃತಿಯಿಲ್ಲ. ಈ ಸಂಸ್ಕೃತಿಯ ಶೋಭಾಯಮಾನವಾದ ಅಂಶಗಳನ್ನು ಮುಂದೆ ಕೊಡಲಾಗುವುದು. ಈ ಗುಣ ವೈಶಿಷ್ಟ್ಯಗಳನ್ನು ಹೊಂದಿರುವುದರಿಂದಲೇ ಮಾನವ ಕುಲದ ಸಂಸ್ಕಾರದ ಹೊಣೆಗಾರಿಕೆ ನೀಡಿ ಈ ಸಮುದಾಯಕ್ಕೆ 'ಖೈರು ಉಮ್ಮತ್' ಅಥವಾ ಉತ್ತಮ ಸಮುದಾಯವೆಂಬ ಬಿರುದು ನೀಡಿ ಅಲ್ಲಾಹನು ಗೌರವಿಸಿದ್ದಾನೆ.

## ಇಸ್ಲಾಮೀ ಸಂಸ್ಕೃತಿಯ ಐತಿಹಾಸಿಕ ಕುರುಹುಗಳು

ಸಂಸ್ಕೃತಿಗಳು ಮಾನವ ಇತಿಹಾಸದಲ್ಲಿ ವೈಚಾರಿಕ, ನೈತಿಕ ಮತ್ತು ಭೌತಿಕವಾಗಿ ಎಂತಹ ದೂರಗಾಮೀ ಪರಿಣಾಮಗಳನ್ನು ಬೀರುತ್ತವೋ ಅವು ಅಷ್ಟೇ ಭದ್ರವಾಗಿ ತಳವೂರುವುದು. ಇಸ್ಲಾಮೀ ಸಂಸ್ಕೃತಿಯು ಮಾನವನ ಪ್ರಗತಿಯ ಹಾದಿಯಲ್ಲಿ ಅತಿ ದೊಡ್ಡ ಪಾತ್ರ ವಹಿಸಿದೆ. ವಿಶ್ವಾಸ ಸಿದ್ಧಾಂತಗಳು, ಜ್ಞಾನ-ಕಲೆ, ಆಡಳಿತ, ತತ್ವಶಾಸ್ತ್ರ ಮತ್ತು ಸಾಹಿತ್ಯ ರಂಗಗಳಲ್ಲಿ ಭದ್ರ ಹಾಗೂ ದೂರಗಾಮೀ ಕುರುಹುಗಳನ್ನು ಬಿಟ್ಟಿವೆ.

ಒಂದನೆಯದಾಗಿ, ಇಸ್ಲಾಮಿನ ಏಕದೇವ ಸಿದ್ಧಾಂತವು ಇತರ ಜನ ಸಮುದಾಯಗಳ ಮೇಲೆ ತೀವ್ರ ಪ್ರಭಾವ ಬೀರಿತು. ಇದರ ಪರಿಣಾಮವೆಂಬಂತೆ ಯುರೋಪಿನಲ್ಲಿ ವಿಗ್ರಹಾರಾಧನೆ ಮತ್ತು ಮೂರ್ತಿ ಪೂಜೆಯನ್ನು ವಿರೋಧಿಸಿದ ಸುಧಾರಕರು ಎದ್ದರು. ಅನಂತರ ಅಲ್ಲಾಹನ ಮತ್ತು ದಾಸರ ಮಧ್ಯೆ ಮಧ್ಯವರ್ತಿಗಳನ್ನು ಮಾಡುವುದನ್ನು ನಿರಾಕರಿಸುವವರು ಹಾಗೂ ಪುರೋಹಿತರು ಮತ್ತು ಪಾದ್ರಿಗಳನ್ನು ಬಿಟ್ಟು ದಿವ್ಯ ಗ್ರಂಥಗಳ ಶಿಕ್ಷಣ ನೀಡುವವರು ಮುಂದೆ ಬಂದರು. ಯುರೋಪಿನ ಅತಿ ದೊಡ್ಡ ಸುಧಾರಕ ಮಾರ್ಟಿನ್ ಲೂಥರ್ ಅರೇಬಿಯನ್ ತತ್ವಶಾಸ್ತ್ರ ಮತ್ತು ಮುಸ್ಲಿಮರ ವಿಶ್ವಾಸಗಳಿಂದ ಪ್ರಭಾವಿತನಾಗಿದ್ದನೆಂದು ಸಂಶೋಧಕರ ಅಭಿಪ್ರಾಯ. ಇಸ್ಲಾಮಿನ ಅನೇಕ ಗ್ರಂಥಗಳು ಲ್ಯಾಟಿನ್ ಭಾಷೆಗೆ ಅನುವಾದಿಸಲ್ಪಟ್ಟಿದ್ದು ಮಾರ್ಟಿನ್ ಲೂಥರ್‌ನ ಕಾಲದಲ್ಲಿ ಯುರೋಪಿನ ವಿದ್ಯಾಲಯಗಳು ಅದೇ ಗ್ರಂಥಗಳನ್ನು ಕಲಿಸುತ್ತಿದ್ದವು.

ಎರಡನೆಯದಾಗಿ, ಇಸ್ಲಾಮೀ ಸಂಸ್ಕೃತಿಯ ಪ್ರಭಾವವು ವೈದ್ಯಕೀಯ, ಗಣಿತ, ರಸಾಯನ, ಭೂಗೋಳ ಮತ್ತು ಖಗೋಳ ಶಾಸ್ತ್ರವೇ ಮುಂತಾದ ಎಲ್ಲ ರಂಗಗಳಲ್ಲೂ ಪ್ರಕಟವಾಗಿವೆ. ಯುರೋಪಿನ ಶೈಕ್ಷಣಿಕ ಕ್ರಾಂತಿಗೆ ಮುಸ್ಲಿಮ್ ವಿದ್ವಾಂಸರ ಕೃತಿಗಳೇ ಮೂಲಾಧಾರವಾಗಿದ್ದುವು. ಪಾಶ್ಚಿಮಾತ್ಯ ವಿದ್ಯಾರ್ಥಿಗಳು ಇಸ್ಲಾಮೀ ವಿದ್ಯಾಲಯಗಳಲ್ಲಿ ಪ್ರವೇಶ ಪಡೆದಾಗ, ಇಲ್ಲಿ ಶಿಕ್ಷಣ ಕಲೆಗಳ ದ್ವಾರವು ಎಲ್ಲರಿಗೂ ಮುಕ್ತವಾಗಿ ತೆರೆದಿದ್ದು, ಸ್ವತಂತ್ರ ವಾತಾವರಣದಲ್ಲಿ ವಿದ್ಯೆ ಕಲಿಯಬಹುದೆಂಬುದನ್ನು ಕಂಡು ಆಶ್ಚರ್ಯ ವ್ಯಕ್ತ ಪಡಿಸುತ್ತಿದ್ದರು. ಏಕೆಂದರೆ ಇಂತಹ ಉದಾಹರಣೆಗಳು ಅವರ ದೇಶಗಳಲ್ಲಿ ದುರ್ಲಭವಾಗಿತ್ತು. ಮುಸ್ಲಿಮ್ ವಿದ್ವಾಂಸರು ತಮ್ಮ ಗ್ರಂಥಗಳ ಅಧ್ಯಯನದ ವೇಳೆ ಭೂಮಿಯ ಚಲನೆ, ಅದರ ಗೋಲಾಕೃತಿ ಹಾಗೂ ಆಕಾಶಕಾಯಗಳ ಕುರಿತು ಚರ್ಚಿಸುತ್ತಿದ್ದಾಗ ಯುರೋಪಿನವರ ಮನ ಮಸ್ತಿಷ್ಕಗಳಲ್ಲಿ ಈ ವಿಷಯಗಳ ಕುರಿತು ಪರಂಪರಾಗತ ಮೂಢನಂಬಿಕೆಗಳು, ಅಂಧವಿಶ್ವಾಸಗಳೇ ತುಂಬಿಕೊಂಡಿದ್ದುವು.

ಮೂರನೆಯದಾಗಿ, ಸಾಹಿತ್ಯ ಕಲೆಗಳಲ್ಲಿ ಯುರೋಪಿಯನ್ನರು ಅದರಲ್ಲೂ ಸ್ಪೆಯಿನ್‌ನ ಕವಿಗಳು ಅರಬಿ ಸಾಹಿತ್ಯದಿಂದ ಬಹಳ ಪ್ರಭಾವಿತಗೊಂಡಿದ್ದರು. ಪಾಶ್ಚಾತ್ಯ ಸಾಹಿತ್ಯದಲ್ಲಿರುವ ಕುದುರೆ ಸವಾರಿ, ಪರಾಕ್ರಮ, ಉಪಮೆಯ ಭಾಷೆ ಹಾಗೂ ಇನ್ನಿತರ ಪ್ರಮುಖ ವಿದ್ಯೆಗಳು ಅರಬಿ ಸಾಹಿತ್ಯದ ಮೂಲಕ ಬಂದಿದ್ದುವು. ಅರಬಿ ಸಾಹಿತ್ಯದ ಅನೇಕ ಪ್ರಕಾರಗಳು, ಕತೆ-ಕಾದಂಬರಿಗಳು ಯುರೋಪಿನ ಇತರ ಭಾಷೆಗಳಿಗೆ ಅನುವಾದಿಸಲ್ಪಟ್ಟಿವೆ. ಅತ್ಯುತ್ತಮ ರಚನೆಯೆಂದು ಸಾಹಿತ್ಯರಂಗದಲ್ಲಿ ಪ್ರಸಿದ್ಧವಿರುವ 'ಅಲಿಫ್ ಲೈಲಾ' ಎಂಬ ಪ್ರೇಮಕತೆಯ ಸುಮಾರು ಮುನ್ನೂರಕ್ಕಿಂತಲೂ ಅಧಿಕ ಆವೃತ್ತಿಗಳು ಯುರೋಪಿನ ಭಾಷೆಗಳಲ್ಲಿ ಪ್ರಕಾಶನಗೊಂಡಿದೆ. ಈ ಗ್ರಂಥದಿಂದ ಯುರೋಪಿಯನ್ನರು ಬಹಳ

ಪ್ರಭಾವಿತಗೊಂಡಿದ್ದರೆಂಬುದಕ್ಕೆ ಇದು ಸಾಕ್ಷಿಯಾಗಿದೆ. ಮಧ್ಯ ಯುಗದ ಯುರೋಪಿನ ಆಧ್ಯಾತ್ಮಿಕ ಮತ್ತು ವೈಚಾರಿಕ ಕ್ರಾಂತಿಯ ಹಿಂದೆ ಇದ್ದ ಶಕ್ತಿ ಮತ್ತು ಅದನ್ನು ಜಾರಿಗೊಳಿಸುವಲ್ಲಿ ಅರಬ್ ಜನಾಂಗಗಳ ಮಹತ್ತರ ಪಾತ್ರವಿತ್ತು.

ನಾಲ್ಕನೆಯದಾಗಿ, ಕಾನೂನು ನಿರ್ಮಾಣದಲ್ಲಿ ನ್ಯಾಯ ಪಾಲನೆಗೆ ಆದ್ಯತೆ ನೀಡಲಾಯಿತು. ಯುರೋಪಿನ ವಿದ್ಯಾರ್ಥಿಗಳು ಸ್ಪೈಯಿನಿನ ಇಸ್ಲಾಮೀ ವಿದ್ಯಾಲಯಗಳಲ್ಲಿ ಕಲಿಯುತ್ತಿದ್ದಾಗ ಕಾನೂನಿಗೆ ಸಂಬಂಧಿಸಿದ ಮುಸ್ಲಿಮರ ಅನೇಕ ಕರ್ಮಶಾಸ್ತ್ರ ಗ್ರಂಥಗಳನ್ನು ತಮ್ಮ ಭಾಷೆಗಳಿಗೆ ಅನುವಾದಿಸಿದರು. ಏಕೆಂದರೆ ಕರ್ಮಶಾಸ್ತ್ರಗಳಲ್ಲಿ ಕಾನೂನಿಗೆ ಸಂಬಂಧಿಸಿದ ಸಣ್ಣ ಅಂಶಗಳೂ ಸೇರಿಸಲ್ಪಟ್ಟಿದ್ದುವು. ಆ ಕಾಲದವರೆಗೆ ಯುರೋಪಿನಲ್ಲಿ ಯಾವುದೇ ಸುಭದ್ರ ಸರಕಾರವಿರಲಿಲ್ಲ, ನ್ಯಾಯಪೂರ್ಣ ಕಾನೂನುಗಳೂ ಜಾರಿಯಲ್ಲಿರಲಿಲ್ಲ. ನೆಪೋಲಿಯನನು ಈಜಿಪ್ಟನ್ನು ಗೆದ್ದುಕೊಂಡಾಗ ಪ್ರಸಿದ್ಧ ಮಾಲಿಕೀ ಕರ್ಮಶಾಸ್ತ್ರ ಗ್ರಂಥಗಳನ್ನು ಫ್ರೆಂಚ್ ಭಾಷೆಗೆ ಅನುವಾದಿಸಲಾಯಿತು. ಈ ರೀತಿ ಕಾನೂನುರಂಗದಲ್ಲಿ ಇಸ್ಲಾಮೀ ಸಂಸ್ಕೃತಿಯು ತನ್ನದೇ ಆದ ಕೊಡುಗೆಗಳನ್ನು ನೀಡಿದೆ.

ಐದನೆಯದಾಗಿ, ಹಿಂದಿನ ಕಾಲದಲ್ಲಿ ಜನಸಾಮಾನ್ಯರಿಗೆ ಆಡಳಿತಗಾರರನ್ನು ಪ್ರಶ್ನಿಸುವ ಹಕ್ಕಿರಲಿಲ್ಲ. ಆಡಳಿತಗಾರರು ಮತ್ತು ಪ್ರಜೆಗಳ ಸಂಬಂಧವು ಒಡೆಯರು ಮತ್ತು ಗುಲಾಮರಂತಿತ್ತು. ಆಡಳಿತಗಾರ ನಿರಂಕುಶನಾಗಿರುತ್ತಿದ್ದ. ಪ್ರಜೆಗಳನ್ನು ತಾನಿಚ್ಛಿಸಿದಂತೆ ಕುಣಿಸುತ್ತಿದ್ದ. ಸಾಮ್ರಾಜ್ಯವು ವಾರೀಸು ಸೊತ್ತಿನಂತೆ ತನ್ನವರಲ್ಲೇ ಇರುತ್ತಿತ್ತು. ರಾಜಕುಮಾರಿಯೊಬ್ಬಳು ಇನ್ನೊಂದು ರಾಜ್ಯಕ್ಕೆ ಮದುವೆಯಾಗಿ ಹೋದರೆ ಅಧಿಕಾರ ಹಂಚಿಕೆಯ ವಿಷಯ ದಲ್ಲಿ ಯುದ್ಧಗಳೇ ನಡೆಯುತ್ತಿದ್ದವು. ಗೆದ್ದ ಪಕ್ಷದವರಿಗೆ ಸೋತ ಪಕ್ಷದವರ ಜೀವ, ಸೊತ್ತು, ಮಾನ, ಸ್ವಾತಂತ್ರ್ಯ ಎಲ್ಲವನ್ನೂ ಹರಾಜು ಹಾಕುವ ಅಧಿಕಾರವಿರುತ್ತಿತ್ತು. ಆದರೆ ಇಸ್ಲಾಮೀ ಸಂಸ್ಕೃತಿ ಬಂದಾಗ, ಅದು ಪ್ರಜೆಗಳಿಗೆ ಪ್ರಭುಗಳ ಕೃತ್ಯಗಳನ್ನು ವಿಮರ್ಶಿಸುವ ಮತ್ತು ಪ್ರಶ್ನಿಸುವ ಅಧಿಕಾರವಿದೆಯೆಂದೂ ಪ್ರಭುಗಳು ಕೇವಲ ದೇಶದ ಹಿತ ಕಾಪಾಡುವ ಹೊಣೆಗಾರರೆಂದೂ ಘೋಷಿಸಿತು. ಆಗ, ಪ್ರಜೆಯೊಬ್ಬನು ಎದ್ದು ನಿಂತು ನಿರ್ಭೀತಿಯಿಂದ ಆಡಳಿತಾಧಿಕಾರಿಯನ್ನು ಪ್ರಶ್ನಿಸಿದ. ಅಧಿಕಾರಿಯು ಅವನನ್ನು ಶಿಕ್ಷಿಸಲಿಲ್ಲ, ನೇಣು ಗಂಬಕ್ಕೇರಿಸಲಿಲ್ಲ, ಗಡೀಪಾರು ಮಾಡಲಿಲ್ಲ, ಬದಲಾಗಿ ಶಾಂತಚಿತ್ತದಿಂದ ಆತನ ಮಾತನ್ನು ಆಲಿಸಿ ಅಷ್ಟೇ ಸಮಾಧಾನದೊಂದಿಗೆ ಸ್ಪಷ್ಟೀಕರಣ ನೀಡಿದರು. ಘಟನೆ ಹೀಗಿದೆ:

ಇಸ್ಲಾಮಿನ ದ್ವಿತೀಯ ಖಲೀಫರಾಗಿದ್ದ ಉಮರ್(ರ) ಮಸ್ಜಿದುನ್ನಬವಿಯಲ್ಲಿ ಪ್ರವಚನ ನೀಡುತ್ತಾ, 'ಜನರೇ! ನಾನು ಹೇಳುವುದನ್ನು ಕೇಳಿರಿ ಮತ್ತು ಅನುಸರಿಸಿರಿ' ಎಂದು ಹೇಳಿದರು. ಆಗ ಸಭಿಕರಿಂದ ಒಬ್ಬ ಗ್ರಾಮೀಣ ವ್ಯಕ್ತಿ ಎದ್ದು ನಿಂತು ಹೇಳಿದ– 'ನಿಮ್ಮ ಮಾತನ್ನು ಕೇಳಬೇಕಾದರೆ ಅದಕ್ಕಿಂತ ಮುಂಚೆ ನನ್ನ ಪ್ರಶ್ನೆಗೆ ಉತ್ತರಿಸಿ. ನೀವು ತೊಟ್ಟ ಬಟ್ಟೆ

ಎಲ್ಲಿಂದ ಬಂತು. ನಮಗೆಲ್ಲರಿಗೂ ಸಿಕ್ಕಿದಂತೆಯೇ ನಿಮಗೂ ಒಂದು ತುಂಡು ಬಟ್ಟೆ ಸಿಕ್ಕಿದೆ. ಅದರಲ್ಲಿ ನಿಮ್ಮ ಅಂಗಿಗೆ ಸಾಕಾಗುವಷ್ಟು ಬಟ್ಟೆ ಇರಲಿಲ್ಲವಲ್ಲ, ಈ ಪ್ರಶ್ನೆಗೆ ಉತ್ತರಿಸದೆ ನಿಮ್ಮ ಮಾತನ್ನು ನಾವು ಕೇಳಲಾರೆವು. ನಿಮ್ಮನ್ನು ಅನುಸರಿಸಲಾರೆವು. ಉಮರ್(ರ) ಆತನ ಮಾತನ್ನು ಶಾಂತವಾಗಿ ಆಲಿಸಿದರು. ಅವನಿಗೇನೂ ಉತ್ತರಿಸದೆ ತಮ್ಮ ಪುತ್ರನ ಕಡೆಗೆ ನೋಡಿದರು. ಪುತ್ರ ಅಬ್ದುಲ್ಲಾ ಹೇಳಿದರು- ನಾನು ನನಗೆ ಸಿಕ್ಕಿದ ಬಟ್ಟೆಯನ್ನು ತಂದೆಗೆ ನೀಡಿರುವೆನು. ಅವರಿಗೆ ಸಿಕ್ಕಿದ ಬಟ್ಟೆಯು ಅವರಿಗೆ ಅಂಗಿ ಹೊಲಿಸಲು ಪರ್ಯಾಪ್ತವಾಗಿರಲಿಲ್ಲ, (ಏಕೆಂದರೆ ಅವರು ನೀಳ ಕಾಯದವರಾಗಿದ್ದಾರೆ) ಅವರು ನನ್ನ ಬಟ್ಟೆಯನ್ನೂ ಸೇರಿಸಿ ಅಂಗಿ ಹೊಲಿಸಿದ್ದಾರೆ. ಈ ಉತ್ತರ ಕೇಳಿ ಆತ ಹೇಳಿದ- 'ಇನ್ನು ಹೇಳಿರಿ. ನಾವು ಕೇಳುವೆವು ಮತ್ತು ಅನುಸರಿಸುವೆವು.' ಇದರಿಂದ ಎಲ್ಲರಿಗೂ ಸಮಾಧಾನವಾಯಿತು.

ಈ ವಾಕ್ ಸ್ವಾತಂತ್ರ್ಯ ಮತ್ತು ನಿರ್ಭೀತಿಯು ಇಸ್ಲಾಮೀ ಸಂಸ್ಕೃತಿಯ ಕೊಡುಗೆಯಾಗಿದೆ. ಇನ್ನು, ಇಸ್ಲಾಮೀ ಸಂಸ್ಕೃತಿ ಘೋಷಿಸಿದ ಯುದ್ಧ ನಿಯಮಗಳು ಹೀಗಿವೆ- "ವಾಗ್ದಾನವನ್ನು ಪಾಲಿಸಬೇಕು. ಎಲ್ಲರಿಗೂ ಆಚಾರ-ವಿಚಾರದ ಸ್ವಾತಂತ್ರ್ಯ ನೀಡಬೇಕು. ಆರಾಧನಾಲಯಗಳನ್ನು ಅವರವರ ಬಳಿಯಲ್ಲೇ ಇರಗೊಡಬೇಕು. ಜನರ ಸ್ವಾತಂತ್ರ್ಯ ಮತ್ತು ಮಾನ- ಮರ್ಯಾದೆಗಳ ಮೇಲೆ ಕೈಮಾಡಬಾರದು. ಸ್ತ್ರೀಯರು, ಮಕ್ಕಳು ಮತ್ತು ವೃದ್ಧರನ್ನು ಸತಾಯಿಸಬಾರದು. ಮರಗಳನ್ನು ಕಡಿಯಬಾರದು. ನೀರು ತಡೆಯಬಾರದು. ಕೈದಿಗಳೊಂದಿಗೆ ಉತ್ತಮವಾಗಿ ವರ್ತಿಸಬೇಕು." ಇಂತಹ ಇನ್ನೂ ಅನೇಕ ವಿಷಯಗಳು ಯುದ್ಧನೀತಿಯಲ್ಲಿ ಸೇರಿವೆ. ಇದರ ಪರಿಣಾಮವಾಗಿ ಇಸ್ಲಾಮೀ ಸಾಮ್ರಾಜ್ಯದ ಅಧೀನಕ್ಕೆ ಬಂದ ದೇಶಗಳಲ್ಲಿ ಸ್ವಾಭಿಮಾನ ಬೆಳೆಯಿತು. ಮಾನವೀಯತೆ ಮತ್ತು ಸಜ್ಜನಿಕೆ ಅವರಲ್ಲುಂಟಾಯಿತು. ಒಂದು ಘಟನೆ ಹೀಗಿದೆ:

ಉಮರ್(ರ) ಸಾಮ್ರಾಜ್ಯದ ಅಧಿಪತಿಯಾಗಿದ್ದರು. ಓರ್ವ ಯಹೂದಿ ಬಂದು, ರಾಜ್ಯಪಾಲರ ಪುತ್ರನು ತನ್ನ ಮಗನ ತಲೆಗೆ ಕೊರಡೆಯಿಂದ ಹೊಡೆದಿದ್ದಾನೆಂದು ಅಳಲು ವ್ಯಕ್ತಪಡಿಸಿದ. ರಾಷ್ಟ್ರನಾಯಕ ಕುಪಿತರಾಗುತ್ತಾರೆ. ರಾಜ್ಯಪಾಲ ಅಮ್ರ್ ಬಿನ್ ಆಸ್ ಮತ್ತು ಪುತ್ರನನ್ನು ಕರೆಸಿ ವಿಚಾರಿಸುತ್ತಾರೆ. ತರುವಾಯ ರಾಜ್ಯಪಾಲರ ಪುತ್ರನಿಗೆ ಕೊರಡೆಯೇಟು ಬಾರಿಸುತ್ತಾರೆ. ಆ ಬಳಿಕ ರಾಜ್ಯಪಾಲರನ್ನು ಚೆನ್ನಾಗಿ ತರಾಟೆಗೆ ತೆಗೆದುಕೊಳ್ಳುತ್ತಾರೆ. 'ನೀವು ಜನರನ್ನು ನಿಮ್ಮ ಗುಲಾಮರನ್ನಾಗಿ ಮಾಡುತ್ತೀರಿ. ವಸ್ತುತಃ ಅವರ ತಾಯಂದಿರು ಅವರನ್ನು ಸ್ವತಂತ್ರವಾಗಿ ಹಡೆದಿರುವುದು ನಿಮಗೆ ತಿಳಿಯದೆ ಎಂದು ಕೇಳುತ್ತಾರೆ. ಇಸ್ಲಾಮೀ ಸಂಸ್ಕೃತಿಯ ಕಾರಣದಿಂದಾಗಿ ಜನರಿಗೆ ಲಭಿಸಿದ ಮುಕ್ತ ಸ್ವಾತಂತ್ರ್ಯದ ಚಿತ್ರಣವಿದು. ಅನ್ಯಥಾ ಅದಕ್ಕಿಂತ ಮುಂಚೆ, ಮಗನ ಕುರಿತು ದೂರು ನೀಡಲು ಬಂದ ತಂದೆಯನ್ನೇ ಶಿಕ್ಷಿಸಲಾಗುತ್ತಿತ್ತು. ಅವರ ಸೊತ್ತು-ವಿತ್ತಗಳನು ಜಪ್ತಿ ಮಾಡಲಾಗುತಿತು. ಅವರ ವಿಶಾಸ

ನಂಬಿಕೆಗಳ ವಿಷಯದಲ್ಲಿ ಬಲವಂತ ಪಡಿಸಲಾಗುತ್ತಿತ್ತು. ಈ ದಯನೀಯ ಸ್ಥಿತಿಯಲ್ಲಿ ಅವರು ಪ್ರತಿಭಟಿಸುವುದಂತಿರಲಿ, ಅವರಿಗೆ ಬೇಸರ ಮತ್ತು ದುಃಖವನ್ನೂ ವ್ಯಕ್ತ ಪಡಿಸಲಾಗುತ್ತಿರಲಿಲ್ಲ, ತಮ್ಮ ಸ್ವಾಭಿಮಾನದ ಪ್ರಜ್ಞೆಯೂ ಅವರಲ್ಲಿರುತ್ತಿರಲಿಲ್ಲ, ಇಸ್ಲಾಮೀ ಸಂಸ್ಕೃತಿಯ ಉದಯವಾದಾಗ ಅವರ ಧ್ವನಿ ಮೇಲೇರಿತು.

ಮಧ್ಯ ಯುಗದಲ್ಲಿ ಸಿರಿಯಾ ಮತ್ತು ಸ್ಪೆಯಿನಿನ ಮೂಲಕ ಪಾಶ್ಚಿಮಾತ್ಯರಿಗೆ ಇಸ್ಲಾಮೀ ಸಂಸ್ಕೃತಿಯ ಪರಿಚಯವಾಯಿತು. ಅದಕ್ಕಿಂತ ಮುಂಚೆ ಅರಸರಿಗೆ ಧಾರ್ಮಿಕ ಮುಖಂಡರ ವಿರುದ್ಧ, ಜನಸಾಮಾನ್ಯರಿಗೆ ಅರಸರ ವಿರುದ್ಧ ಸ್ವರವೆತ್ತುವ ಸ್ವಾತಂತ್ರ್ಯವಿರಲಿಲ್ಲ, ಆಡಳಿತಾರೂಢರನ್ನು ಪ್ರಶ್ನಿಸುವುದು ಅಥವಾ ಮರ್ದಿತರಿಗೆ ಸಹಾಯ ಮಾಡುವುದು ಒಂದು ಮೂಲಭೂತ ಕರ್ತವ್ಯವೆಂಬ ಪ್ರಜ್ಞೆಯೂ ಅವರಲ್ಲಿರಲಿಲ್ಲ, ಧರ್ಮ ಮತ್ತು ವಿಶ್ವಾಸದ ವ್ಯತ್ಯಾಸದಿಂದಾಗಿ ಅವರು ಪರಸ್ಪರರ ಕತ್ತುಕೊಯ್ಯುತ್ತಿದ್ದರು. ಇಸ್ಲಾಮೀ ಸಂಸ್ಕೃತಿಯು ಅವರಲ್ಲಿ ಸ್ವಾತಂತ್ರ್ಯ ಪ್ರಜ್ಞೆಯನ್ನು ಜಾಗೃತಗೊಳಿಸಿತು. ಕೊನೆಗೂ ಆ ರಾಷ್ಟ್ರಗಳು ಸ್ವತಂತ್ರವಾದವು.

ಇಸ್ಲಾಮೀ ಸಂಸ್ಕೃತಿಯು ಯಾವ ದೇಶಗಳಲ್ಲಿ ಸ್ವಾತಂತ್ರ್ಯದ ಸ್ಫೂರ್ತಿಯನ್ನುಂಟು ಮಾಡಿತೋ ಅವು ಅದಕ್ಕೆ ಋಣಿಯಾಗಬೇಕಾಗಿದೆ. ಈ ಉಪಕಾರಕ್ಕಾಗಿ ಇಸ್ಲಾಮೀ ಸಂಸ್ಕೃತಿಯ ವಾಹಕರಾದ ನಾವು ಹೆಮ್ಮೆಯಿಂದ ಬೀಗಬೇಕಾಗಿಲ್ಲ, ಯಾವುದೇ ದುರಾಗ್ರಹ ಕ್ಕೊಳಗಾಗಬೇಕಿಲ್ಲ, ನಾವು ನಮ್ಮ ಸಂಸ್ಕೃತಿಯ ಬೆಲೆಯನ್ನು ಅರಿಯಬೇಕು. ನಮ್ಮ ಪರಂಪರೆಯ ಪ್ರತಿಷ್ಠೆಯನ್ನು ಗ್ರಹಿಸಬೇಕು. ನಾವು 'ಮಧ್ಯಮ ಸಮುದಾಯ'ವೆಂಬ ನಮ್ಮ ಸಾಮರ್ಥ್ಯವನ್ನು ಬೆಳೆಸಿಕೊಂಡು, ಲೋಕದಲ್ಲಿ ಸತ್ಯದ ಸಾಕ್ಷಿಗಳಾಗಿ ನಮ್ಮ ಕರ್ತವ್ಯವನ್ನು ನಿರ್ವಹಿಸಬೇಕು. ಆ ಮೂಲಕ ನಾವು ಲೋಕಕ್ಕೆ ಒಳಿತು, ಸತ್ಯ ಮತ್ತು ಸಜ್ಜನಿಕೆಯ ಮಾರ್ಗವನ್ನು ತೋರಿಸುವವರಾಗಬೇಕು.

# ಮಾನವ ಪ್ರೇಮ

**ಮಾ**ನವ ಪ್ರೇಮವು ಇಸ್ಲಾಮೀ ಸಂಸ್ಕೃತಿಯ ವಿಶೇಷತೆಯಾಗಿದೆ. ಅದು ಮನುಷ್ಯನಿಂದ ದ್ವೇಷ, ಅಸೂಯೆ, ಒಡಕು, ಪಕ್ಷಪಾತದಂತಹ ದುರ್ಗುಣಗಳನ್ನು ಹೋಗಲಾಡಿಸಿ ಅವನಲ್ಲಿ ಪ್ರೀತಿ, ಔದಾರ್ಯ, ಸಹಕಾರ ಹಾಗೂ ಸಮಾನತೆಯಂತಹ ಉದಾತ್ತ ಗುಣಗಳನ್ನು ಬೆಳೆಸಿತು. ಇಸ್ಲಾಮೀ ಕಾನೂನು ಮತ್ತು ಸಾಮಾಜಿಕ ನಿಯಮಗಳ ಪ್ರಕಾರ, ಹುಟ್ಟಿನ ಆಧಾರದಲ್ಲಿ, ಕುಲ, ಗೋತ್ರ ಮತ್ತು ಪ್ರದೇಶದ ಆಧಾರದಲ್ಲಿ ಯಾರಿಗೂ ಯಾವುದೇ ಮೇಲ್ಮೆಯಿಲ್ಲ, ಇದು ಈ ಸಂಸ್ಕೃತಿಯ ಆಧಾರಸ್ತಂಭವಾಗಿದ್ದು ಚಿಕ್ಕಪುಟ್ಟ ವಿಷಯಗಳಲ್ಲೂ ಇದು ಗೋಚರಿಸುತ್ತದೆ.

ಇಸ್ಲಾಮ್, ಮಾನವನನ್ನು ಒಂದೇ ಜೀವದಿಂದ ಸೃಷ್ಟಿಸಲಾಗಿದೆಯೆಂದು ಹೇಳುತ್ತದೆ.

**"ಜನರೇ! ನೀವು ನಿಮ್ಮ ಪಾಲಕ ಪ್ರಭುವನ್ನು ಭಯಪಡಿರಿ. ಅವನು ನಿಮ್ಮನ್ನು ಒಂದು ಜೀವದಿಂದ ಸೃಷ್ಟಿಸಿದನು. ಅದೇ ಜೀವದಿಂದ ಅದರ ಜೋಡಿಯನ್ನು ಉಂಟು ಮಾಡಿದನು ಮತ್ತು ಅವೆರಡರಿಂದ ಅನೇಕಾನೇಕ ಸ್ತ್ರೀ ಪುರುಷರನ್ನು ಲೋಕದಲ್ಲಿ ಹಬ್ಬಿಸಿದನು."**

**(ಪವಿತ್ರ ಕುರ್‌ಆನ್, 4:1)**

ಆದ್ದರಿಂದ ಮಾನವ ಕುಲದ ಮೂಲ ಒಂದೇ ಆಗಿದೆ. ಅದೇ ವಂಶಪರಂಪರೆಯಿಂದ ಅವರು ಕುಲ, ಗೋತ್ರ, ದೇಶ ಮತ್ತು ವರ್ಗಗಳಲ್ಲಿ ಹರಿಹಂಚಿಹೋಗಿದ್ದಾರೆ. ಈ ವ್ಯತ್ಯಾಸದ ಹೊರತಾಗಿಯೂ ಅವರಲ್ಲಿ ಪರಸ್ಪರ ಐಕ್ಯ ಮತ್ತು ಸಹಕಾರದ ಸಂಬಂಧವಿರುತ್ತದೆ.

**"ಜನರೇ! ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀಯಿಂದ ಉಂಟು ಮಾಡಿದೆವು. ತರುವಾಯ ನೀವು ಪರಸ್ಪರ ಪರಿಚಯ ಪಟ್ಟುಕೊಳ್ಳಲಿಕ್ಕಾಗಿ ನಿಮ್ಮ ಜನಾಂಗಗಳನ್ನೂ ಗೋತ್ರಗಳನ್ನೂ ಮಾಡಿದೆವು." (ಪವಿತ್ರ ಕುರ್‌ಆನ್, 49:1)**

ಅನಂತರ ಜೀವನ ಯಾತ್ರೆಯಲ್ಲಿ ಕೆಲವರು ಮುಂದೆ ಸಾಗಿದರೆ, ಇನ್ನು ಕೆಲವರು ಹಿಂದೆ ಬೀಳುತ್ತಾರೆ. ಕೆಲವರು ಧನಿಕರಾದರೆ ಇನ್ನು ಕೆಲವರು ಬಡವರಾಗುತ್ತಾರೆ. ಒಬ್ಬನು ಆಳುವವನಾಗಿದ್ದರೆ, ಇಡೀ ಜನಾಂಗವು ಪ್ರಜೆಗಳಾಗಿರುತ್ತಾರೆ. ಕೆಲವರ ಮೈಬಣ್ಣ ಬಿಳಿಯಾಗಿದ್ದರೆ, ಇನ್ನು ಕೆಲವರದ್ದು ಕಪ್ಪಾಗಿರುತ್ತದೆ. ಇದು ಬದಲಾಯಿಸಲಾಗದ ಪ್ರಕೃತಿ

ನಿಯಮವಾಗಿದೆ. ಆದರೆ ಈ ರೀತಿಯ ತಾರತಮ್ಯಗಳಿಂದ ಪ್ರಭಾವಿತರಾಗಿ ಮಾನವರಲ್ಲಿ ಪರಸ್ಪರ ಭಿನ್ನತೆಗೆ ಆಸ್ಪದ ಕೊಡಬಾರದು. ಧನಿಕನಿಗೆ ಬಡವನ ಮೇಲೆ, ಆಳುವವನಿಗೆ ಪ್ರಜೆಗಳ ಮೇಲೆ, ಬಿಳಿಯನಿಗೆ ಕರಿಯನ ಮೇಲೆ ಯಾವುದೇ ಶ್ರೇಷ್ಠತೆಯಿಲ್ಲ, ಮಾನವರೆಂಬ ನೆಲೆಯಲ್ಲಿ ಎಲ್ಲರೂ ಸಮಾನರು. ಇನ್ನು ಯಾರಾದರೂ ಶ್ರೇಷ್ಠರೆನಿಸಿಕೊಳ್ಳಬೇಕಾದರೆ ಅದು 'ತಕ್ವಾ'(ದೇವಭಯ)ದ ಆಧಾರದಲ್ಲಿ ಮಾತ್ರ.

**"ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು." (ಪವಿತ್ರ ಕುರ್‌ಆನ್, 49:13)**

ಇನ್ನು ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಕಾನೂನು ಎಲ್ಲರಿಗಿಂತ ಉನ್ನತವಾಗಿದ್ದು ಎಲ್ಲರ ಮೇಲೂ ಸಮಾನವಾಗಿ ಜಾರಿಗೊಳ್ಳುತ್ತದೆ.

**"ಅಣುಗಾತ್ರದಷ್ಟು ಪುಣ್ಯ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು ಮತ್ತು ಅಣುಗಾತ್ರದಷ್ಟು ಪಾಪ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು."**

**(ಪವಿತ್ರ ಕುರ್‌ಆನ್, 99:7-8)**

ಸಾಮೂಹಿಕ ವ್ಯವಸ್ಥೆಯಲ್ಲಿ ಎಲ್ಲರ ಸ್ಥಾನಮಾನ ಒಂದೇ. ಎಲ್ಲರೂ ಸಮಾನರು. ಅವರಲ್ಲಿ ಬಲಶಾಲಿಯು ದುರ್ಬಲನಿಗೆ ಸಹಾಯ ಮಾಡುತ್ತಾನೆ. ಸಮಾಜದಲ್ಲಿ ಪ್ರತಿಯೊಬ್ಬನೂ ಒಂದಲ್ಲ ಒಂದು ರೀತಿಯಲ್ಲಿ ಇನ್ನೊಬ್ಬನ ಸೇವೆ ಮಾಡುತ್ತಾನೆ.

ಪ್ರವಾದಿ(ಸ) ಹೇಳಿದರು- "ಪ್ರೀತಿಯ ಸಂಬಂಧದಲ್ಲಿ ಮುಸ್ಲಿಮರೆಲ್ಲ ಒಂದು ಶರೀರದಂತಿದ್ದಾರೆ. ಅದರ ಒಂದು ಅಂಗಕ್ಕೆ ತೊಂದರೆಯಾದರೆ ಶರೀರದ ಎಲ್ಲ ಅಂಗಗಳೂ ಜ್ವರಪೀಡಿತವಾಗಿ ನಿದ್ರಾಹೀನತೆಯನ್ನು ಅನುಭವಿಸುತ್ತವೆ." **(ಮುಸ್ಲಿಮ್, ಅಹ್ಮದ್)**

## ಸಮಾನತೆ

ಇಸ್ಲಾಮಿನ ನಾಗರಿಕ ಕಾನೂನಿನಲ್ಲಿ ಮಾನವ ಸಮಾನತೆಯ ಎಲ್ಲ ಮುಖಗಳು ಎದ್ದು ಕಾಣುತ್ತವೆ. ನಮಾಝ್‌ನಲ್ಲಿ ರಾಜ-ಪ್ರಜೆ, ಬಡವ-ಬಲ್ಲಿದ, ಬಿಳಿಯ-ಕರಿಯ ಎಂಬ ಭೇದವಿಲ್ಲದೆ ಎಲ್ಲರೂ ಒಂದೇ ಸಾಲಿನಲ್ಲಿ ಭುಜಕ್ಕೆ ಭುಜ ಕೊಟ್ಟು ನಿಲ್ಲುತ್ತಾರೆ. ರಾಜ, ವಿದ್ವಾಂಸ, ಜನನಾಯಕರಿಗೆಂದು ಪ್ರತ್ಯೇಕ ಸ್ಥಳ ನಿಗದಿಪಡಿಸಲಾಗುವುದಿಲ್ಲ, ಉಪವಾಸ ವ್ರತವನ್ನು ಎಲ್ಲರೂ ಒಟ್ಟಿಗೆ ಒಂದೇ ಸಮಯದಲ್ಲಿ ಆಚರಿಸುತ್ತಾರೆ. ಹಸಿವು ಬಡವನಿಗೆಂಬಂತೆ ಶ್ರೀಮಂತನಿಗೂ ರಾಜನಿಗೂ ಆಗುತ್ತದೆ. ಅದು ಎಲ್ಲರ ಮೇಲೂ ಕಡ್ಡಾಯವಾಗಿದೆ. ಹಜ್ಜ್ ಕರ್ಮವನ್ನು ಎಲ್ಲರೂ ಒಂದೇ ದಿರಿಸಿನಲ್ಲಿ ನಿರ್ವಹಿಸುತ್ತಾರೆ. ಅಲ್ಲಾಹನ ಮುಂದೆ ಎಲ್ಲರೂ ಒಂದೇ ರೀತಿಯಲ್ಲಿ ಆದರ ವಿಧಿವಿಧಾನಗಳನ್ನು ನೆರವೇರಿಸುತ್ತಾರೆ. ಇದರಲ್ಲಿ ದೂರದವ-ಹತ್ತಿರದವನೆಂಬ ಭೇದವಿಲ್ಲ, ಶಕ್ತಿವಂತ-ದುರ್ಬಲನೆಂಬ ಅಂತರವಿಲ್ಲ, ಸಾಮಾನ್ಯ-ಗಣ್ಯನೆಂಬ ವ್ಯತ್ಯಾಸವಿಲ್ಲ, ಎಲ್ಲರೂ ಒಂದೇ ರೀತಿಯಲ್ಲಿ ಹಜ್ಜ್‌ನ ನಿಯಮಗಳನ್ನು ಪಾಲಿಸಬೇಕು. ನಾಗರಿಕ ಕಾನೂನಿನಲ್ಲಿ ಎಲ್ಲರೊಂದಿಗೂ ಒಂದೇ ರೀತಿಯಲ್ಲಿ ವರ್ತಿಸಲಾಗುತ್ತದೆ.

ಕ್ರಿಮಿನಲ್ ಕಾನೂನನ್ನು ನೋಡುವುದಾದರೆ, ಅದರಲ್ಲಿ ಪ್ರತಿಯೊಬ್ಬನಿಗೂ ಸಮಾನವಾದ ಶಿಕ್ಷೆಯಿದೆ. ಕೊಂದವನನ್ನು ಕೊಲ್ಲಲಾಗುವುದು. ಕೊಲೆಗಡುಕನು ಬಡವನಾದರೂ ಧನಿಕನಾದರೂ ಸರಿ. ಅರಬನಾದರೂ ಅರಬೇತರನಾದರೂ ಅಷ್ಟೇ, ಯುರೋಪಿನವನಾದರೂ ಅಮೇರಿಕದವನಾದರೂ ಇದರಲ್ಲಿ ವಿನಾಯತಿಯಿಲ್ಲ. ಅದೇ ರೀತಿ ಕದ್ದವನ ಕೈ ಕಡಿಯಲಾಗುವುದು. ವ್ಯಭಿಚಾರಿಯನ್ನು, ಗಲಭೆಕೋರನನ್ನು, ಅತಿಕ್ರಮಿಯನ್ನು ಹೀಗೆ ಎಲ್ಲರನ್ನೂ ಶಿಕ್ಷಿಸಲಾಗುವುದು. ಕಾನೂನಿನ ದೃಷ್ಟಿಯಲ್ಲಿ ಎಲ್ಲರೂ ಒಂದೇ.

**"ಸ್ವತಂತ್ರನು ವಧಿಸಿದ್ದರೆ ಆ ಸ್ವತಂತ್ರನೊಂದಿಗೇ ಸೇಡು ತೀರಿಸಬೇಕು. ಗುಲಾಮನು ಘಾತಕನಾದರೆ ಗುಲಾಮನೇ ವಧಿಸಲ್ಪಡಬೇಕು ಮತ್ತು ಸ್ತ್ರೀಯು ಈ ಅಪರಾಧವೆಸಗಿದರೆ ಆ ಸ್ತ್ರೀಯೊಂದಿಗೇ ಪ್ರತೀಕಾರವೆಸಗಬೇಕು." (ಪವಿತ್ರ ಕುರ್‌ಆನ್, 2:178)**

## ಗೌರವ

ಇಸ್ಲಾಮ್ ಮಾನವನ ಗೌರವನನ್ನು ಕಾಪಾಡುತ್ತದೆ. ಇದರಲ್ಲಿ ಧರ್ಮ, ವಂಶ, ಬಣ್ಣವೇ ಮುಂತಾದ ಯಾವ ತಾರತಮ್ಯವನ್ನೂ ಮಾಡುವುದಿಲ್ಲ.

**"ನಾವು ಆದಮರ ಸಂತತಿಗೆ ಶ್ರೇಷ್ಠತೆಯನ್ನು ಪ್ರದಾನ ಮಾಡಿದೆವು."**

**(ಪವಿತ್ರ ಕುರ್‌ಆನ್, 17:70)**

ಈ ಗೌರವವು ಮಾನವನ ಜನ್ಮಸಿದ್ಧ ಹಕ್ಕು. ಆಚಾರ, ವಿಚಾರ ಮತ್ತು ಜೀವನ ವಿಧಾನದಲ್ಲಿ ಎಲ್ಲ ಮಾನವರಿಗೂ ಸಮಾನ ಅವಕಾಶವನ್ನು ಇಸ್ಲಾಮ್ ನೀಡುತ್ತದೆ. ಅದಕ್ಕಿಂತಲೂ ಮಿಗಿಲಾಗಿ ಮಾನವನ ಅಂತಿಮ ನೆಲೆಯ ತೀರ್ಮಾನವು ಅವನ ಬಾಹ್ಯ ಕರ್ಮಗಳನ್ನು ಅವಲಂಬಿಸಿಲ್ಲ. ಬದಲಾಗಿ ಅವನ ಹೃದಯ ಸಂಕಲ್ಪವನ್ನು ನೋಡಿ ಅವನಿಗೆ ಪುರಸ್ಕಾರ ಅಥವಾ ಶಿಕ್ಷೆ ನೀಡಲಾಗುತ್ತದೆ.

**ಪ್ರವಾದಿ(ಸ) ಹೇಳಿದರು- "ಅಲ್ಲಾಹನು ನಿಮ್ಮ ರೂಪವನ್ನು ನೋಡುವುದಿಲ್ಲ, ನಿಮ್ಮ ಹೃದಯಗಳನ್ನು ನೋಡುತ್ತಾನೆ." (ಮುಸ್ಲಿಮ್)**

ಒಳಿತಿನ ಹಾಗೂ ಅಲ್ಲಾಹನ ಸಂಪ್ರೀತಿಯ ಸಂಕಲ್ಪದೊಂದಿಗೆ ಮಾಡುವ ಕರ್ಮಗಳು ಸ್ವೀಕೃತವಾಗುತ್ತವೆಯೇ ಹೊರತು ಭೌತಿಕ ಮತ್ತು ವ್ಯಾಪಾರಿ ಮನೋಭಾವದಿಂದ ಮಾಡುವ ಕರ್ಮಗಳಲ್ಲ.

**"ನಿಮ್ಮ ಪ್ರಭುವಿನ ದಾಸ್ಯ-ಆರಾಧನೆ ಮಾಡಿರಿ. ಸತ್ಕರ್ಮಗಳನ್ನೆಸಗಿರಿ. ಇದರಿಂದಲೇ ನಿಮಗೆ ಯಶಸ್ಸು ಸಿಗಬಹುದೆಂದು ನಿರೀಕ್ಷಿಸಬಹುದು." (ಪವಿತ್ರ ಕುರ್‌ಆನ್, 22:77)**

ಇಸ್ಲಾಮಿನ ಮಾನವ ಪ್ರೇಮಕ್ಕೆ ಸಾಕಷ್ಟು ಪುರಾವೆಗಳನ್ನು ಚರಿತ್ರೆಯಲ್ಲಿ ಕಾಣಬಹುದು. ಈ ಪೈಕಿ ಕೆಲವನ್ನು ಇಲ್ಲಿ ಕೊಡಲಾಗಿದೆ.

ಅಬೂದರಿಲ್ ಗಿಫಾರಿಯವರು ಒಮ್ಮೆ ಯಾವುದೋ ವಿಷಯದಲ್ಲಿ ಬಿಲಾಲ್‌ರೊಂದಿಗೆ ಕೋಪಗೊಂಡರು. ಬಿಲಾಲ್‌ರನ್ನು ಅಬೂಬಕರ್(ರ) ಖರೀದಿಸಿ ಸ್ವತಂತ್ರಗೊಳಿಸಿದ್ದರಷ್ಟೆ. ಜಗಳ ತೀವ್ರವಾದಾಗ ನೀಗ್ರೋ ಗುಲಾಮರಾಗಿದ್ದ ಬಿಲಾಲ್‌ರನ್ನು, 'ಓ ಕರಿಯಳ ಪುತ್ರನೇ' ಎಂದು ಬೈದು ಬಿಟ್ಟರು. ಬಿಲಾಲ್ ಪ್ರವಾದಿಯವರಲ್ಲಿ ಈ ಕುರಿತು ದೂರಿಕೊಂಡರು. ಪ್ರವಾದಿಯವರ(ಸ) ಮುಖ ಕೋಪದಿಂದ ಕೆಂಪಾಯಿತು. ಅವರು ಅಬೂದರ್ರ್‌ರೊಂದಿಗೆ 'ನೀವು ಇವರ ತಾಯಿಯನ್ನು ಬೈದಿರಾ. ನಿಮ್ಮಿಂದ ಅಜ್ಞಾನವು ಇನ್ನೂ ತೊಲಗಿಲ್ಲವೆ?' ಎಂದು ಕೇಳಿದರು. ಅಬೂದರ್ರ್‌ರಿಗೆ ವಿಷಾದವಾಯಿತು. ಅವರು ಬಿಲಾಲ್‌ರೊಂದಿಗೆ ಕ್ಷಮೆ ಯಾಚಿಸಿದರು. ಅತ್ಯಂತ ದಯನೀಯವಾಗಿ, 'ನಿಮ್ಮ ಕಾಲಿನಿಂದ ನನ್ನ ಮುಖವನ್ನು ತುಳಿಯಿರಿ' ಎಂದು ಬಿನ್ನವಿಸಿದರು.

ಮಖ್ಝೂಮ್ ಗೋತ್ರದ ಫಾತಿಮಾ ಎಂಬ ಮಹಿಳೆ ಕಳ್ಳತನ ಮಾಡಿ ಸಿಕ್ಕಿ ಬಿದ್ದಳು. ಕುಲೀನೆಯಾದ ಆಕೆಯ ಶಿಕ್ಷೆಯನ್ನು ರದ್ದು ಮಾಡುವಂತೆ ಪ್ರವಾದಿಯವರಲ್ಲಿ ಶಿಫಾರಸು ಮಾಡುವಂತೆ ಕುರೈಶರು ಉಸಾಮತುಬುನು ಝೈದ್‌ರನ್ನು ರವಾನಿಸಿದರು. ಅವರು ಪ್ರವಾದಿಯವರ(ಸ) ಅತ್ಯಂತ ಆಪ್ತರಾಗಿದ್ದರು. ಆವರು ಪ್ರವಾದಿಯವರಲ್ಲಿ ಮಾತಾಡಿದರು. ಪ್ರವಾದಿ(ಸ) ಬಹಳ ಕೋಪಗೊಂಡರು. 'ನೀನು ಅಲ್ಲಾಹನ ಮೇರೆಗಳ ಕುರಿತು ಶಿಫಾರಸು ಮಾಡಲು ಬಂದಿರುವೆಯಾ?' ಎಂದು ಕೇಳಿದರು. ತರುವಾಯ ಜನರನ್ನು ಸೇರಿಸಿ ಭಾಷಣ ಮಾಡುತ್ತಾ ಹೀಗೆಂದರು: "ನಿಮಗಿಂತ ಮುಂಚಿನ ಜನಾಂಗಗಳು ನಾಶವಾಗಲು ಕಾರಣ ಅವರ ಸಿರಿವಂತರು ಕದ್ದರೆ ಅವರನ್ನು ಬಿಟ್ಟು ಬಿಡಲಾಗುತ್ತಿತ್ತು. ಬಡವನಾರಾದರೂ ಕದ್ದು ಸಿಕ್ಕಿಬಿದ್ದರೆ ಅವನನ್ನು ಶಿಕ್ಷಿಸುತ್ತಿದ್ದರು. ಅಲ್ಲಾಹನಾಣೆ! ಮುಹಮ್ಮದ್‌ನ ಮಗಳು ಫಾತಿಮಾ ಕದ್ದಿದ್ದರೂ ನಾನಾಕೆಯ ಕೈಕಡಿಯುತ್ತಿದ್ದೆ."

ಕೈಸ್ ಬಿನ್ ಮುತಾತಿಯ ಓರ್ವ ಕಪಟ ವಿಶ್ವಾಸಿಯಾಗಿದ್ದ, ಆತ ಒಂದು ಸಭೆಗೆ ಬರುತ್ತಾನೆ. ಅಲ್ಲಿ ಜನರ ಮಧ್ಯೆ ಬಿಲಾಲ್, ಸಲ್ಮಾನುಲ್ ಫಾರ್ಸಿ, ಸುಹೈಬ್‌ರಂತಹ ಬಡ ಸಹಾಬಿಗಳು ಕುಳಿತಿದ್ದರು. ಆತ ಬಂದವನೇ, ಔಸ್ ಮತ್ತು ಖಝ್ರಜ್‌ನವರು ಆ ವ್ಯಕ್ತಿ (ಮುಹಮ್ಮದ್)ಗೆ ಸಹಾಯ ಮಾಡಿದರು. ಆದರೆ ಈ ಮಂದಿ(ಬಿಲಾಲ್, ಸಲ್ಮಾನ್, ಸುಹೈಬ್)ಗೇನಾಗಿದೆ? ನನಗೆ ಅರ್ಥವಾಗುತ್ತಿಲ್ಲ, ಅದೇ ಸಭೆಯಲ್ಲಿ ಕುಳಿತಿದ್ದ ಮುಆದುಬುನು ಜಬಲ್(ರ) ಆತನನ್ನು ಹಿಡಿದೆಳೆದುಕೊಂಡು ಪ್ರವಾದಿ(ಸ) ಅವರ ಸನ್ನಿಧಿಗೆ ತಂದರು. ಈ ವ್ಯಕ್ತಿ ಇಂತಿಂತಹ ಮಾತನ್ನು ಹೇಳಿದ್ದಾರೆಂದು ಪ್ರವಾದಿಯವರಿಗೆ ತಿಳಿಸಿದರು. ಪ್ರವಾದಿಯವರ ಮುಖ ಕೆಂಪಾಯಿತು. ಅವರು ಚದ್ದರ ಎಳೆದುಕೊಂಡು ಮಸ್ಜಿದುನ್ನಬವಿಗೆ ತೆರಳಿ, ಜನರನ್ನು ಸೇರಿಸಿ ಈ ರೀತಿ ಹೇಳಿದರು– ಜನರೇ! ನೆನಪಿಡಿರಿ. ನಿಮ್ಮ ದೇವನೊಬ್ಬ, ನಿಮ್ಮ ತಂದೆಯೂ ಒಬ್ಬರು, ನಿಮ್ಮ ಧರ್ಮವೂ ಒಂದು. ಅರಬ್‌ತನವು ತಂದೆಯ ವೀರ್ಯ ಅಥವಾ ತಾಯಿಯ ಗರ್ಭದಿಂದ ಲಭಿಸುವಂತಹದ್ದಲ್ಲ, ಅದೊಂದು ಭಾಷೆಯಾಗಿದೆ. ಯಾರು ಅದನ್ನು ಆಡುತ್ತಾನೋ ಅವನು ಅರಬನಾಗಿದ್ದಾನೆ. (ಇಬ್ನ್ ಅಸಾಕಿರ್– ಝುಹ್ರೀ)

ಅದಿಯ್ಯುಬುನು ಹಾತಿಮ್(ರ) ಇಸ್ಲಾಮ್ ಸ್ವೀಕರಿಸುವುದಕ್ಕಿಂತ ಮುಂಚೆ ಮದೀನಕ್ಕೆ ಬರುತ್ತಾರೆ. ಅವರು, ಪ್ರವಾದಿಯವರ ಸುತ್ತ ಸಹಾಬಿಗಳು ನೆರೆದಿರುವುದನ್ನು ಕಾಣುತ್ತಾರೆ. ಸಹಾಬಿಗಳು ಆಗಷ್ಟೆ ಒಂದು ಯುದ್ಧದಿಂದ ಮರಳಿ ಬಂದಿದ್ದರು. ಯುದ್ಧ ಕವಚಗಳನ್ನು ಇನ್ನೂ ಕಳಚಿರಲಿಲ್ಲ, ಸಹಾಬಿಗಳು ಪ್ರವಾದಿಯವರನ್ನು ಅತ್ಯಂತ ಆದರಪೂರ್ವಕವಾಗಿ ಗೌರವಿಸುವುದನ್ನೂ ಅವರ ಮಾತನ್ನು ಅತ್ಯಾಸಕ್ತಿಯಿಂದ ಆಲಿಸುವುದನ್ನೂ ಕಂಡು ಅದಿಯ್ಯ್ ಬಹಳ ಪ್ರಭಾವಿತರಾದರು. ಅದೇ ಸಂದರ್ಭದಲ್ಲಿ ಓರ್ವ ಬಡ ಮಹಿಳೆ ಪ್ರವಾದಿಯವರ(ಸ) ಬಳಿಗೆ ಬಂದು, ನನಗೆ ತಮ್ಮೊಂದಿಗೆ ಏಕಾಂತದಲ್ಲಿ ಸ್ವಲ್ಪ ಮಾತಾಡಲಿಕ್ಕಿದೆಯೆಂದು ಹೇಳುತ್ತಾಳೆ. ಪ್ರವಾದಿಯವರು ಆ ವೃದ್ಧ ಮಹಿಳೆಯೊಂದಿಗೆ ಹೇಳಿದರು- ಖಂಡಿತ. ನೀವು ನನ್ನನ್ನು ಯಾವ ಕೇರಿಗೆ ಕರೆದರೂ ನಾನು ಬರುತ್ತೇನೆ ಎಂದರು. ತರುವಾಯ ಆ ಮಹಿಳೆಯೊಂದಿಗೆ ಸ್ವಲ್ಪ ದೂರ ಹೋಗಿ ತುಂಬಾ ಹೊತ್ತಿನವರೆಗೆ ಆಕೆಯ ಮಾತನ್ನು ಆಲಿಸಿದರು. ಅನಂತರ ಮರಳಿದರು. ಮಾನವ ಪ್ರೇಮದ ಈ ಅನುಪಮ ಮಾದರಿಯನ್ನು ಅದಿಯ್ಯ್ ಕಣ್ಣಾರೆ ಕಂಡಾಗ, ಅದು ಅವರ ಮೇಲೆ ತೀವ್ರ ಪ್ರಭಾವ ಬೀರಿತು. ಹಾಗೆ ಅವರು ಇಸ್ಲಾಮಿನೊಳಗೆ ಪ್ರವೇಶಿಸಿದರು.

ಪ್ರವಾದಿಯವರಿಗೆ(ಸ) 21 ವರ್ಷಗಳ ತೀವ್ರ ಸಂಘರ್ಷದ ಬಳಿಕ ಮಕ್ಕಾ ವಿಜಯ ಪ್ರಾಪ್ತವಾಯಿತು. ಪ್ರವಾದಿಯವರನ್ನು ಒಪ್ಪಲು ನಿರಾಕರಿಸಿದ್ದ, ಅವರನ್ನು ಸುಳ್ಳಾಗಿಸಿದ್ದ ಅವರನ್ನು ನಾಡಿನಿಂದ ಹೊರಹಾಕಿದ, ಅವರೊಡನೆ ಎಡೆಬಿಡದೆ ಹೋರಾಟ ನಡೆಸಿದ ಜನರು ಅವರ ಮುಂದೆ ಶರಣಾಗತರಾಗಿ ತಲೆತಗ್ಗಿಸಿ ನಿಂತಿದ್ದಾಗಲೂ ತಾನು ಮಕ್ಕಾದ ಗಲ್ಲಿ ಕೇರಿಗಳಲ್ಲಿ ಸಾರಿದ್ದ ಅದೇ ಸಂದೇಶವನ್ನು ಅವರ ಮುಂದಿಟ್ಟರು. ಪ್ರವಾದಿಯವರು ಒಂದು ಹೊಸ ಸಂಸ್ಕೃತಿಗೆ ನಾಂದಿ ಹಾಕಿದ್ದರು. ಕಅ್‌ಬಾ ಭವನದ ಬಾಗಿಲ ಬಳಿ ನಿಂತು ಅವರು ಹೀಗೆ ಘೋಷಿಸಿದರು- ಕುರೈಶ್ ಬಂಧುಗಳೇ! ಅಲ್ಲಾಹನು ನಿಮ್ಮಿಂದ ಅಜ್ಞಾನದ ಮಾಲಿನ್ಯವನ್ನು ಮತ್ತು ನಿಮ್ಮ ಹಿರಿಯರ ದುರಭಿಮಾನಗಳನ್ನು ಅಳಿಸಿ ಹಾಕಿರುವನು. ನೆನಪಿಡಿರಿ! ಮಾನವರೆಲ್ಲರೂ ಆದಮರ ಸಂತತಿಗಳು, ಆದಮರನ್ನು ಮಣ್ಣಿನಿಂದ ಸೃಷ್ಟಿಸಲಾಗಿದೆ. ಅರೇಬಿಯಾದಲ್ಲಿ ಪ್ರಾಬಲ್ಯ ಹೊಂದಿದ್ದ ಮತ್ತು ಸಮಾಜದಲ್ಲಿ ತಾವೇ ದೊಡ್ಡವರೆಂದೆಣಿಸಿ ದುರಭಿಮಾನ ಹೊಂದಿದ್ದ ಕುರೈಶರು ತಲೆತಗ್ಗಿಸಿ ಎಲ್ಲವನ್ನೂ ಮೌನವಾಗಿ ಆಲಿಸುತ್ತಿದ್ದರು. ಆ ಸಂದರ್ಭದಲ್ಲಿ ಪ್ರವಾದಿಯವರು ಈ ಕುರ್‌ಆನ್ ವಚನವನ್ನು ಪಠಿಸಿದರು- **ಜನರೇ, ನಾವು ನಿಮ್ಮನ್ನು ಒಬ್ಬ ಪುರುಷ ಮತ್ತು ಒಬ್ಬ ಸ್ತ್ರೀಯಿಂದ ಉಂಟು ಮಾಡಿದೆವು. ತರುವಾಯ ನೀವು ಪರಸ್ಪರ ಪರಿಚಯಪಟ್ಟುಕೊಳ್ಳಲಿಕ್ಕಾಗಿ ನಿಮ್ಮ ಜನಾಂಗಗಳನ್ನೂ ಗೋತ್ರಗಳನ್ನೂ ಮಾಡಿದೆವು. ನಿಮ್ಮ ಪೈಕಿ ಅತ್ಯಧಿಕ ಧರ್ಮನಿಷ್ಠನೇ ವಾಸ್ತವದಲ್ಲಿ ಅಲ್ಲಾಹನ ಬಳಿ ಅತಿ ಹೆಚ್ಚು ಗೌರವಕ್ಕೆ ಪಾತ್ರನು. (ಪವಿತ್ರ ಕುರ್‌ಆನ್ 49:13)** ತರುವಾಯ ಎಲ್ಲರನ್ನೂ ಕ್ಷಮಿಸಿ ಬಿಟ್ಟರು.

ಅಬೂಬಕರ್(ರ) ಖಲೀಫರಾಗಿ ಆಯ್ಕೆಯಾದಾಗ ಮನ-ಮಸ್ತಿಷ್ಕಗಳಲ್ಲಿ ಮಾನವ ಪ್ರೇಮವು ತುಂಬಿ ತುಳುಕುವ ಓರ್ವ ಜನನಾಯಕನನ್ನು ಲೋಕವು ಕಾಣುತ್ತದೆ. ಯುದ್ಧಗಳಲ್ಲಿ ತಮ್ಮ ತಂದೆಯಂದಿರನ್ನು ಕಳಕೊಂಡ ಕೇರಿಯ ಹೆಣ್ಣು ಮಕ್ಕಳ ಬಳಿಗೆ ಹೋಗಿ ಅವರ ಆಡುಗಳ ಹಾಲು ಕರೆದು ಕೊಡುತ್ತಿದ್ದರು. ಅವರು ಹೀಗೆ ಹೇಳುತ್ತಿದ್ದರು- ನನ್ನ ಖಿಲಾಫತ್‌ನ ಹೊಣೆಗಾರಿಕೆಯು ನಾನು ಮೊದಲಿನಿಂದಲೂ ಮಾಡುತ್ತಿದ್ದ ನಿಮ್ಮ ಸಹಾಯಕ್ಕೆ ಅಡ್ಡಿಯಾಗದು.

ಉಮರ್(ರ) ಓರ್ವ ಪ್ರತಾಪಶಾಲಿ ಖಲೀಫ(ಆಡಳಿತಗಾರ)ರಾಗಿದ್ದರು. ಅವರು ಬಡವರಿಗೆ ಸಹಾಯ ಮಾಡುತ್ತಿದ್ದರು. ತಾನು ಹಸಿದಿದ್ದರೂ ಇತರರಿಗೆ ಉಣಿಸುತ್ತಿದ್ದರು. ಅವರ ದೃಷ್ಟಿಯಲ್ಲಿ ಎಲ್ಲರೂ ಸಮಾನರು. ಜನರ ಸ್ಥಿತಿ-ಗತಿಗಳನ್ನು ತಿಳಿದುಕೊಳ್ಳಲು ಅವರು ರಾತ್ರಿಯ ಅಂಧಕಾರದಲ್ಲಿ ಮಾರುವೇಷದಲ್ಲಿ ನಡೆದಾಡುತ್ತಿದ್ದರು. ಸಂಕಷ್ಟಕ್ಕೀಡಾದ ಜನರಿಗೆ ಸಹಾಯ ಮಾಡಿದ, ಅವರ ಸೇವೆಗೈದ ಅನೇಕ ಘಟನೆಗಳು ಇತಿಹಾಸದ ಪುಟಗಳಲ್ಲಿ ದಾಖಲಾಗಿವೆ. ಉದಾಹರಣೆಗೆ-

(ಅ) ಒಮ್ಮೆ ಓರ್ವ ಯಹೂದಿ ವೃದ್ಧ ಪೇಟೆಯಲ್ಲಿ ತಿರುಪೆಯೆತ್ತುವುದನ್ನು ಕಂಡು ಅವರ ಬಳಿ ಹೋದರು. ನೀವು ಭಿಕ್ಷೆ ಬೇಡಲು ಏನು ಕಾರಣವೆಂದು ಕೇಳಿದರು. ಆ ವೃದ್ಧ ಹೇಳಿದರು- "ಜಿಝಿಯಾ ಪಾವತಿಸಲು ಮತ್ತು ಮನೆ ಮಂದಿಯನ್ನು ಸಾಕಲು ಈ ಕೆಲಸ ಮಾಡುತ್ತಿದ್ದೇನೆ. ಬೇರೆ ದುಡಿಯುವವರು ಯಾರೂ ಇಲ್ಲ." ಉಮರ್‌ರಿಗೆ(ರ) ತುಂಬಾ ಬೇಸರವಾಯಿತು. ಅವರು ಆ ವೃದ್ಧನೊಡನೆ ಹೇಳಿದರು- ಹಿರಿಯರೆ! ನಾವು ನಿಮ್ಮೊಂದಿಗೆ ನ್ಯಾಯ ಪಾಲಿಸಲಿಲ್ಲ, ನೀವು ಯುವಕರಾಗಿದ್ದಾಗ ನಿಮ್ಮಿಂದ ಜಿಝಿಯಾ ವಸೂಲು ಮಾಡಿದೆವು. ವೃದ್ಧಾಪ್ಯದಲ್ಲಿ ನಿಮ್ಮನ್ನು ಈ ಸ್ಥಿತಿಯಲ್ಲಿ ಬಿಟ್ಟು ಅನ್ಯಾಯವೆಸಗಿದ್ದೇವೆ." ತರುವಾಯ ವೃದ್ಧನ ಕೈಹಿಡಿದು ಮನೆಗೆ ಕರೆದುಕೊಂಡು ಹೋಗಿ ಉಪಚರಿಸಿದರು. ತಾವೇ ಊಟ ತಯಾರಿಸಿ ವೃದ್ಧನಿಗೆ ಹೊಟ್ಟೆ ತುಂಬಾ ಉಣಿಸಿದರು. ಆ ಬಳಿಕ ಕಂದಾಯ ಅಧಿಕಾರಿಗೆ ಈ ರೀತಿ ಫರಮಾನು ಬರೆದು ಕಳಿಸಿದರು- ಈ ವ್ಯಕ್ತಿಗೂ ಇವರಂತಹ ಇತರೆಲ್ಲ ವ್ಯಕ್ತಿಗಳು ಹಾಗೂ ಅವರ ಕುಟುಂಬಗಳಿಗೂ ದೈನಂದಿನ ಖರ್ಚಿಗೆ ಸಾಕಾಗುವಷ್ಟು ಜೀವನಾಂಶ ನೀಡಿರಿ.

(ಆ) ಉಮರ್(ರ) ಮದೀನದ ಒಂದು ಕೇರಿಯಲ್ಲಿ ನಡೆದಾಡುತ್ತಿದ್ದರು. ಓರ್ವ ಕೃಶಕಾಯದ ಯುವತಿ ನಿತ್ರಾಣದಿಂದಾಗಿ ಏಳುತ್ತಾ ಬೀಳುತ್ತಾ ನಡೆಯುತ್ತಿದ್ದಳು. ಅವರು ಆ ಹುಡುಗಿಯ ಬಳಿಗೆ ತೆರಳಿದರು. 'ಜನರೊಡನೆ ಈ ಹುಡುಗಿ ಯಾರೆಂದು ಕೇಳಿದರು. ಅಲ್ಲೇ ಇದ್ದ ಅಬ್ದುಲ್ಲಾಹಿಬುನು ಉಮರ್ ಹೇಳಿದರು- ಇದು ತಮ್ಮದೇ ಮೊಮ್ಮಗಳು. ನನ್ನ ಇಂತಿಂತಹ ಪತ್ನಿಯಿಂದ ಜನಿಸಿದವಳು.' ಈಕೆ ಹೀಗಾಗಲು ಏನು ಕಾರಣವೆಂದು ಉಮರ್(ರ) ಪ್ರಶ್ನಿಸಿದಾಗ ಅಬ್ದುಲ್ಲಾ ಹೇಳಿದರು- ತಾವು ನಮಗೇನಾದರೂ ಹೆಚ್ಚು ಕೊಡುತ್ತೀರಾ? ಆದ್ದರಿಂದಲೇ ಈಕೆ ಹೀಗಾಗಿದ್ದಾಳೆ. ಉಮರ್(ರ) ಹೇಳಿದರು-

ಅಲ್ಲಾಹನಾಣೆ! ಖಂಡಿತ ಸಾಧ್ಯವಿಲ್ಲ. ಇತರ ಜನರಿಗೆ ನೀಡುವಂತಹ ದೈನಂದಿನ ಖರ್ಚಿಗಿಂತ ಕಿಂಚಿತ್ತೂ ಹೆಚ್ಚು ಜೀವನಾಂಶ ನೀಡಲು ನನ್ನಿಂದ ಸಾಧ್ಯವಿಲ್ಲ. ಅದು ನಿಮ್ಮ ಖರ್ಚಿಗೆ ಸಾಕಾಗುತ್ತದೋ ಇಲ್ಲವೋ ಎಂಬುದು ನನಗೆ ಬೇಕಿಲ್ಲ. ನಮ್ಮ-ನಿಮ್ಮ ನ್ಯಾಯ ತೀರ್ಮಾನಕ್ಕೆ ಅಲ್ಲಾಹನ ಗ್ರಂಥವೇ ಸಾಕು.

(ಇ) ಒಮ್ಮೆ ಮದೀನಕ್ಕೆ ವ್ಯಾಪಾರಿಗಳ ತಂಡವೊಂದು ಆಗಮಿಸಿತು. ಅದರಲ್ಲಿ ಸ್ತ್ರೀಯರೂ ಮಕ್ಕಳೂ ಇದ್ದರು. ಖಲೀಫರಾದ ಉಮರ್(ರ) ಅಬ್ದುರ್ರಹ್ಮಾನುಬುನು ಔಫ್‌ರೊಡನೆ, ನೀವು ಇವತ್ತು ಈ ತಂಡದವರಿಗೆ ಕಾವಲು ನಿಲ್ಲುವಿರಾ ಎಂದು ಕೇಳಿದರು. ಅವರು ಒಪ್ಪಿದರು. ಅದರಂತೆ ಅವರೂ ಅವರ ಜೊತೆ ಉಮರ್‌ರೂ ಕಾರವಾನದ ಕಾವಲು ನಡೆಸಿದರು. ತಡರಾತ್ರಿಯಾದಾಗ ಇಬ್ಬರೂ ತಹಜ್ಜುದ್ ನಮಾಝ್ ನಿರ್ವಹಿಸಿದರು. ಅಷ್ಟರಲ್ಲಿ ತಂಡದ ನಡುವಿನಿಂದ ಒಂದು ಮಗು ಅಳುವುದು ಕೇಳಿಸಿತು. ಉಮರ್ ಅತ್ತ ನಡೆದರು. ಅದರ ತಾಯಿಯನ್ನುದ್ದೇಶಿಸಿ, ಅಲ್ಲಾಹನನ್ನು ಭಯಪಡು. ಮಗುವನ್ನು ಸರಿಯಾಗಿ ನೋಡಿಕೋ ಎಂದು ಹೇಳಿ ಮರಳಿದರು. ಸ್ವಲ್ಪ ಹೊತ್ತಿನ ಬಳಿಕ ಪುನಃ ಮಗುವಿನ ಅಳು ಕೇಳಿಸಿತು. ಉಮರ್ ಆ ಮಹಿಳೆಯ ಬಳಿಗೆ ಹೋಗಿ, ಅಲ್ಲಾಹನ ಭಯವಿರಿಸು. ಮಗುವಿನ ಕಡೆಗೆ ಗಮನ ಹರಿಸು ಎಂದು ಹೇಳಿ ಹೋದರು. ರಾತ್ರಿಯ ಕೊನೆಯ ಜಾವದಲ್ಲಿ ಪುನಃ ಮಗುವಿನ ಚೀರಾಟ ಕೇಳಿಸಿತು. ಉಮರ್‌ರಿಗೆ ಕೋಪಬಂತು. ಅವರು ಮಹಿಳೆಯ ಬಳಿಗೆ ಹೋಗಿ ಆಕೆಯನ್ನು ಗದರಿಸಿದರು- 'ನಿನ್ನ ಬಗ್ಗೆ ಕನಿಕರವಾಗುತ್ತಿದೆ. ನೀನು ತುಂಬಾ ಕೆಟ್ಟ ತಾಯಿ. ನಿನ್ನ ಮಗು ರಾತ್ರಿಯಿಡೀ ಮಲಗಿಲ್ಲ. ನೀನೇಕೆ ಗಮನಿಸುವುದಿಲ್ಲ.' ಇದು ಅಮೀರುಲ್ ಮೂಮಿನೀನ್ (ಮುಸ್ಲಿಮರ ನಾಯಕ) ಎಂದು ಆ ಮಹಿಳೆಗೇನು ಗೊತ್ತು ಪಾಪ? ಆಕೆ ಹೇಳಿದಳು- ಸಹೋದರಾ! ನೀವು ರಾತ್ರಿಯಿಂದ ನನ್ನ ಬೆನ್ನು ಹತ್ತಿರುವಿರಿ. ನಾನು ಮಗುವಿನ ಮೊಲೆ ಹಾಲನ್ನು ಬಿಡಿಸುವುದಕ್ಕೆ ಹೆಣಗಾಡುತ್ತಿದ್ದೇನೆ. ಆದರೆ ಅದು ಬಿಡುತ್ತಿಲ್ಲ. ಅವರು ಮಗುವಿನ ಪ್ರಾಯ ಕೇಳಿದಾಗ ಕೆಲವು ತಿಂಗಳುಗಳೆಂದು ಆಕೆ ತಿಳಿಸಿದಳು. ಉಮರ್ ಕೇಳಿದರು- ಮೊಲೆ ಹಾಲು ಬಿಡಿಸಲು ಇಷ್ಟು ಅವಸರ ಏಕೆ? ಆಕೆ ಹೇಳಿದಳು- ಅವಸರವೇಕೆಂದರೆ ಖಲೀಫರು ಮೊಲೆ ಹಾಲು ಬಿಡಿಸಲಾದ ಮಕ್ಕಳಿಗೆ ಮಾತ್ರ ಜೀವನಾಂಶ ಕೊಡುತ್ತಾರೆ. ಉಮರ್ 'ಮಗುವಿನ ಮೊಲೆ ಹಾಲು ಬಿಡಿಸಲು ಅವಸರ ಮಾಡುವುದು ಬೇಡ'ವೆಂದು ಉಪದೇಶಿಸಿ ಮರಳಿದರು.

ತರುವಾಯ ಅವರು ಜನರಿಗೆ ಫಜ್ರ್ ನಮಾಝ್ ಮಾಡಿಸಿದರು. ರಾತ್ರಿಯ ಘಟನೆಯಿಂದಾಗಿ ಅವರು ಎಷ್ಟು ದುಃಖಿತರಾಗಿದ್ದರೆಂದರೆ ಅವರ ಗದ್ಗದ ಕಂಠದಿಂದಾಗಿ ನಮಾಝ್‌ನಲ್ಲಿ ಕುರ್‌ಆನ್ ಪಠಿಸುವುದೇ ಕೇಳಿಸುತ್ತಿರಲಿಲ್ಲ. ನಮಾಝ್‌ನಿಂದ ವಿರಮಿಸಿದ ಬಳಿಕ ಅವರು ಜನರೆಡೆಗೆ ತಿರುಗಿ ಹೀಗೆ ಹೇಳಿದರು- ಉಮರ್ ಹಾಳಾಗಿ ಹೋಗಲಿ. ಆತ ಮಕ್ಕಳನ್ನು ಜೀವಂತ ಕೊಲ್ಲುತ್ತಿದ್ದಾನೆ. ತರುವಾಯ ನಗರದಲ್ಲಿ ಈ ರೀತಿ ಘೋಷಿಸುವಂತೆ

ಆಜ್ಞೆ ಹೊರಡಿಸಿದರು– 'ಕೇವಲ ಜೀವನಾಂಶ ಪಡೆಯುವ ಉದ್ದೇಶದಿಂದ ಯಾರೂ ಅಕಾಲದಲ್ಲಿ ಮಕ್ಕಳ ಮೊಲೆ ಹಾಲನ್ನು ಬಿಡಿಸಬಾರದು. ಇಂದಿನಿಂದ ನಾವು ಎಲ್ಲ ಮಕ್ಕಳಿಗೂ ಜೀವನಾಂಶ ಕೊಡಿಸುವೆವು.' ಅದರಂತೆ ನಗರ ಮತ್ತು ಪರಿಸರ ಪ್ರದೇಶದಲ್ಲಿಡೀ ಘೋಷಿಸಲಾಯಿತು.

ಮಾನವ ಇತಿಹಾಸದಲ್ಲಿ ಇಂತಹ ಉಜ್ವಲ ಮತ್ತು ಶೋಭಾಯಮಾನ ಘಟನೆ ನಡೆದುದು ಗೋಚರಿಸುತ್ತಿಲ್ಲ. ಯಾವ ನಾಗರಿಕತೆಯೂ ಉಮರ್‌ರ ಸನಿಹಕ್ಕೂ ತಲುಪಿರುವಂತಹ ಮಾದರಿಯನ್ನು ತೋರಿಸಲಾರದು. ಕೈಸರ್ ಮತ್ತು ಕಿಸ್ರಾರ ಬೃಹತ್ ಸಾಮ್ರಾಜ್ಯಗಳನ್ನು ಅಧೀನಗೊಳಿಸಿದ ಮಹಾನ್ ಚಕ್ರವರ್ತಿಯಾಗಿದ್ದು ಕೂಡಾ ಅವರು ತಾನು ನಿದ್ದೆಗೆಟ್ಟು ಹೊರಗಿನಿಂದ ಬಂದ ಕಾರವಾನವನ್ನು ರಕ್ಷಿಸುತ್ತಾರೆ. ಇಂತಹ ಕೆಲಸವನ್ನು ಇಂದಿನ ಓರ್ವ ಸಾಮಾನ್ಯ ಸಿಪಾಯಿ ಕೂಡಾ ಮಾಡಲಾರ. ಮಗುವಿನ ಆರಾಮಕ್ಕಾಗಿ ತಾಯಿಯನ್ನು ಮೂರು ಬಾರಿ ಎಚ್ಚರಿಸುತ್ತಾರೆ. ಪ್ರಯಾಣಿಕರ ಮಕ್ಕಳೊಂದಿಗೂ ಈ ರೀತಿಯ ಔದಾರ್ಯ ತೋರಿದ ಉಮರ್‌ರಂತಹ ಮಾನವೀಯ ಕಳಕಳಿಯ ಜನನಾಯಕರನ್ನು ಯಾರಾದರೂ ತೋರಿಸಬಲ್ಲರೇ?

(ಈ) ಉಮರ್(ರ) ಒಂದು ದಿವಸ ರಾತ್ರಿ ಗಸ್ತಿಗೆ ಹೊರಟರು. ಜೊತೆಯಲ್ಲಿ ಪರಿಚಾರಕ ಅಸ್ಲಮ್ ಕೂಡಾ ಇದ್ದರು. ಮದೀನದಿಂದ ಹೊರಗೆ ಬಂದ ಅವರು ದೂರದೂರದ ಮನೆಗಳ ಸ್ಥಿತಿಗತಿಗಳನ್ನರಿಯ ಬಯಸಿದ್ದರು. ಅನತಿ ದೂರದಲ್ಲಿ ಒಂದುಕಡೆ ಬೆಂಕಿ ಉರಿಯುವುದನ್ನು ಕಂಡು ಅತ್ತ ಧಾವಿಸಿದರು. ಯಾರೋ ಪ್ರಯಾಣಿಕರು ರಾತ್ರಿ ಕಳೆಯಲು ಮತ್ತು ಚಳಿ ಕಾಯಲು ಅಲ್ಲಿ ತಂಗಿರಬಹುದೆಂದು ಉಮರ್ ಭಾವಿಸಿದ್ದರು.ಅಲ್ಲಿ ಹೋಗಿ ನೋಡುವಾಗ ಓರ್ವ ಮಹಿಳೆ ಮತ್ತು ಆಕೆಯ ಕೆಲವು ಮಕ್ಕಳಿದ್ದರು. ಒಲೆ ಉರಿಯುತ್ತಿತ್ತು. ಒಲೆಯ ಮೇಲೆ ಒಂದು ಪಾತ್ರೆಯನ್ನೂ ಇಡಲಾಗಿತ್ತು.ಮಕ್ಕಳು ಅಳುತ್ತಿದ್ದರು. ಉಮರ್(ರ) ಆಕೆಗೆ ಸಲಾಮ್ ಹೇಳಿದರು. ನೀನಾರು, ನಿನ್ನ ಸ್ಥಿತಿಯೇನು, ಇಲ್ಲೇನಾಗುತ್ತಿದೆ. ಮಕ್ಕಳೇಕೆ ಅಳುತ್ತಿದ್ದಾರೆ ಎಂದು ಅವರು ಮಹಿಳೆಯೊಡನೆ ಪ್ರಶ್ನಿಸಿದರು. ನಾನು ರಾತ್ರೆ ಕಳೆಯಲು ಮತ್ತು ಚಳಿ ಕಾಯಲು ಇಲ್ಲಿ ತಂಗಿದ್ದೇನೆ. ನನ್ನ ಮಕ್ಕಳು ಹಸಿವಿನಿಂದ ಅಳುತ್ತಿದ್ದಾರೆ. ಅವರನ್ನು ಸಮಾಧಾನಪಡಿಸಲು ಪಾತ್ರೆಯಲ್ಲಿ ನೀರು ಹಾಕಿ ಒಲೆಯಲ್ಲಿರಿಸಿದ್ದೇನೆ. ನಮ್ಮ ಮತ್ತು ಉಮರ್‌ರ ನಡುವೆ ಅಲ್ಲಾಹನು ತೀರ್ಮಾನಿಸಲಿ ಎಂದುತ್ತರಿಸಿದಳು. ಉಮರ್ ತಮ್ಮೊಂದಿಗೆ ನ್ಯಾಯ ಪಾಲಿಸುತ್ತಿಲ್ಲವೆಂದು ಆಕೆಯ ಇಂಗಿತವಾಗಿತ್ತು. ಉಮರ್ ಹೇಳಿದರು– ಸೋದರಿ! ನಿನ್ನ ಸ್ಥಿತಿಯ ಕುರಿತು ಉಮರ್‌ರಿಗೇನು ಗೊತ್ತು? ಆಕೆ ಹೇಳಿದಳು– ಪ್ರಜೆಗಳ ಸ್ಥಿತಿಗತಿಗಳ ಬಗ್ಗೆ ತಿಳಿದಿಲ್ಲದಿದ್ದರೆ ಅವರೇಕೆ ಖಲೀಫರಾಗಿದ್ದಾರೆ?

ಉಮರ್(ರ) ಅಸ್ಲಮ್‌ರನ್ನು ಕರೆದುಕೊಂಡು ವೇಗವಾಗಿ ನಡೆದರು. ನೇರವಾಗಿ ಹಿಟ್ಟಿನ ಗೋದಾಮಿಗೆ ಹೋಗಿ ಒಂದು ಮೂಟೆ ಹಿಟ್ಟು ಮತ್ತು ಒಂದು ಬಾಟ್ಲಿಯಲ್ಲಿ ತುಪ್ಪ ತೆಗೆದು, ಅಸ್ಲಮ್‌ರೊಡನೆ, ತನ್ನ ಹೆಗಲ ಮೇಲಿರಿಸುವಂತೆ ಹೇಳಿದರು. ನಾನು ಹೊರುತ್ತೇನೆಂದು ಅಸ್ಲಮ್ ಹೇಳಿದಾಗ, ನಾಳೆ ಪರಲೋಕದಲ್ಲಿ ನನ್ನ ಭಾರವನ್ನು ಹೊರಬಲ್ಲೆಯಾ ಎಂದು ಕೇಳಿ, ಆ ಮೂಟೆಯನ್ನು ತಾನೇ ಹೊತ್ತು ತಂದು ತಾನೇ ಅಡಿಗೆ ಮಾಡಿ ಮಹಿಳೆ ಮತ್ತು ಮಕ್ಕಳಿಗೆ ಬಡಿಸಿದರು. ಅವರು ಎದ್ದು ನಡೆಯುವಾಗ ಮಹಿಳೆ ಹೇಳಿದರು- 'ಅಲ್ಲಾಹನು ನಿಮಗೆ ಅತ್ಯುತ್ತಮ ಪ್ರತಿಫಲ ನೀಡಲಿ. ಅಮೀರುಲ್ ಮೂಮಿನೀನ್ (ಮುಸ್ಲಿಮರ ನಾಯಕ) ಆಗಲು ಉಮರ್‌ಗಿಂತ ನೀವೇ ಅರ್ಹರಾಗಿದ್ದೀರಿ.'

(ಉ) ಒಂದು ರಾತ್ರಿ ಉಮರ್ ಮದೀನದ ಕೇರಿಗಳಲ್ಲಿ ಗಸ್ತು ತಿರುಗುತ್ತಿದ್ದಾಗ ಒಂದು ಆಕ್ರಂದನ ಕೇಳಿಸಿತು. ಅದೊಂದು ಡೇರೆಯಿಂದ ಕೇಳಿಸುತ್ತಿತ್ತು. ಉಮರ್ ಹತ್ತಿರ ಹೋದರು. ಡೇರೆಯ ಹೊರಗೆ ಓರ್ವ ವ್ಯಕ್ತಿ ನಿಂತಿದ್ದರು. ಅವರಿಗೆ ಸಲಾಮ್ ಹೇಳಿದ ಬಳಿಕ ಉಮರ್, ನೀವು ಯಾರು, ಏಕೆ ಇಲ್ಲಿ ನಿಂತಿದ್ದೀರಿ ಎಂದು ಕೇಳಿದರು- ಅವರು ಹೇಳಿದರು- ನಾನೋರ್ವ ಹಳ್ಳಿಗ. ಅಮೀರುಲ್ ಮೂಮಿನೀನ್‌ರಿಂದ ಸಹಾಯ ಬೇಡಲು ಬಂದಿದ್ದೇನೆ. ಈ ಚೀರಾಟ ಯಾರದೆಂದು ಉಮರ್ ಕೇಳಿದಾಗ, ಆ ವ್ಯಕ್ತಿ, ಸಹೋದರಾ! ನಿಮ್ಮ ದಾರಿ ನೋಡಿ. ನಿಮಗೆ ಸಂಬಂಧವಿಲ್ಲದ ವಿಷಯದಲ್ಲಿ ತಲೆ ಹಾಕಬೇಡಿ ಎಂದು ಉತ್ತರಿಸಿದ. ಇವರೇ ಅಮೀರುಲ್ ಮೂಮಿನೀನ್ ಎಂದು ಆತನಿಗೇನು ಗೊತ್ತು? ಆದರೂ ಉಮರ್ ಒತ್ತಾಯಪಡಿಸಿದಾಗ ಆತ ಹೇಳಿದ- 'ನನ್ನ ಪತ್ನಿಗೆ ಹೆರಿಗೆ ನೋವು ಆರಂಭವಾಗಿದೆ. ಸಹಾಯಕರಾಗಿ ಯಾರೂ ಇಲ್ಲ.' ಉಮರ್(ರ) ಕೂಡಲೇ ಧಾವಿಸಿ ಬಂದು ಪತ್ನಿಗೆ ವಿಷಯ ತಿಳಿಸಿದರು. ಈ ಪುಣ್ಯ ಕಾರ್ಯದಲ್ಲಿ ಪಾಲು ಪಡೆಯಬೇಕೆಂದು ಹೇಳಿದಾಗ ಪತ್ನಿ ಉಮ್ಮು ಕುಲ್ಸೂಮುಬಿನ್ತಿ ಅಲಿ ಕೂಡಲೇ ಹೆರಿಗೆಗೆ ಅಗತ್ಯವಾದ ವಸ್ತುಗಳನ್ನೂ ಸ್ವಲ್ಪ ಆಹಾರ ಪದಾರ್ಥಗಳನ್ನು ತೆಗೆದು ಪತಿಯೊಂದಿಗೆ ಡೇರೆಗೆ ಧಾವಿಸಿದರು. ಉಮರ್ ಪತ್ನಿಯನ್ನು ಒಳಗೆ ಕಳಿಸಿದರು. ಅವರು ಮತ್ತು ಆ ಮಹಿಳೆಯ ಪತಿ ಹೊರಗೆ ಕುಳಿತು ಮಾತುಕತೆಯಲ್ಲಿ ತೊಡಗಿದರು. ತಾನು ಓರ್ವ ಮಹಾನ್ ವ್ಯಕ್ತಿಯ ಜೊತೆಯಲ್ಲಿಕುಳಿತಿದ್ದೇನೆಂದು ಆ ವ್ಯಕ್ತಿಗೇನು ಗೊತ್ತು? ಸ್ವಲ್ಪ ಹೊತ್ತಿನಲ್ಲಿ ಮಹಿಳೆಗೆ ಸುಖ ಹೆರಿಗೆಯಾಯಿತು. ಉಮ್ಮು ಕುಲ್ಸೂಮ್ ಒಳಗಿನಿಂದ ಕೂಗಿ ಕರೆದು ಹೇಳಿದರು- ಅಮೀರುಲ್ ಮೂಮಿನೀನ್! ನಿಮ್ಮ ಸಂಗಾತಿಗೆ ಗಂಡು ಮಗುವಿನ ಶುಭವಾರ್ತೆ ನೀಡಿರಿ. ಈ ಸ್ವರ ಕೇಳಿದ ಕೂಡಲೇ ಆ ವ್ಯಕ್ತಿ ಭಯದಿಂದ ಕಂಪಿಸಿದ. ಅವರ ಬಳಿಯಿಂದ ಎದ್ದು ಹೋಗಬಯಸಿದ. ಆದರೆ ಉಮರ್ ಅವನನ್ನು ಅಲ್ಲೇ ಕುಳಿತಿರುವಂತೆ ಹೇಳಿದರು. ತರುವಾಯ ಪತ್ನಿ ತಂದಿದ್ದ ಆಹಾರವನ್ನು ಆ ವ್ಯಕ್ತಿಯ ಮುಂದಿರಿಸುತ್ತಾ, ರಾತ್ರಿಯಿಡೀ ಎಚ್ಚರದಿಂದಿದ್ದೀರಿ. ಚೆನ್ನಾಗಿ ತಿನ್ನಿರಿ ಎಂದು ಹೇಳಿದರು. ತರುವಾಯ ಉಮರ್ ಹೇಳಿದರು-

ನಾಳೆ ನಮ್ಮ ಬಳಿಗೆ ಬರಬೇಕು. ನಿಮ್ಮ ಅಗತ್ಯಗಳ ಪೂರೈಕೆಗೆ ಆದೇಶ ನೀಡಲಾಗುವುದು. ಬೆಳಿಗ್ಗೆ ಆತ ಬಂದಾಗ, ಮಗುವಿಗೆ ಜೀವನಾಂಶ ಹಾಗೂ ಆ ದಂಪತಿಗಳಿಗೆ ಕೆಲವು ಉಡುಗೊರೆಗಳನ್ನು ಕೊಟ್ಟು ಕಳಿಸಿದರು.

ಇಂತಹ ಉಜ್ವಲ ಇತಿಹಾಸ ಬೇರೆ ಯಾವ ಸಂಸ್ಕೃತಿಗಿದೆ. ಉಮರ್(ರ) ತಲುಪಿದಂತಹ ಸ್ಥಾನಕ್ಕೆ ಬೇರಾವ ಸಾಮ್ರಾಜ್ಯದ ಮುಖ್ಯಸ್ಥನೂ ತಲಪಿಲ್ಲವೆಂಬುದೇ ವಾಸ್ತವ. ಇದು ಕೇವಲ ಉಮರ್‌ರಿಗೆ ಮಾತ್ರ ಸೀಮಿತವಾಗಿಲ್ಲ, ಅವರಂತಹ ಮಾನವ ಪ್ರೇಮ, ಕಳಕಳಿ ಹಾಗೂ ಸೇವಾ ಮನೋಭಾವ ಹೊಂದಿದ ಮಾತ್ರವಲ್ಲ, ಕಾರ್ಯರಂಗದಲ್ಲಿ ಪ್ರಾಮಾಣಿಕವಾಗಿ ಜನಸೇವೆಯಲ್ಲಿ ತೊಡಗಿದ ಅಸಂಖ್ಯ ಜನನಾಯಕರು ನಮಗೆ ಇತಿಹಾಸದಲ್ಲಿ ಗೋಚರಿಸುತ್ತಾರೆ. ಉದಾ: ಅಬೂಬಕರ್, ಉಸ್ಮಾನ್, ಅಲೀಯವರಂತಹ ಖಲೀಫರ ಜೀವನವು ಪ್ರೀತಿ ಮತ್ತು ಕರುಣೆಯ ಪ್ರತೀಕವಾಗಿದ್ದವು. ಅದೇ ರೀತಿ ಉಮರುಬುನು ಅಬ್ದಿಲ್ ಅಝೀಝ್, ಸಲಾಹುದ್ದೀನ್ ಅಯ್ಯೂಬಿಯವರಂತಹ ಮಹಾನ್ ನಾಯಕರು ಹಾಗೂ ವಿದ್ವಾಂಸರು, ಕರ್ಮಶಾಸ್ತ್ರಜ್ಞರು, ತತ್ವಜ್ಞಾನಿಗಳ ಜೀವನದಲ್ಲೂ ನಮಗೆ ಇಂತಹ ಉಜ್ವಲ ಮಾದರಿಯು ದೊರೆಯುತ್ತದೆ. ಇದು ಇಸ್ಲಾಮೀ ಸಂಸ್ಕೃತಿಯ ಶೋಭಾಯಮಾನವಾದ ಮುಖಗಳಾಗಿವೆ.

## ಸಮಾನತೆ

ಮಾನವ ಪ್ರೇಮದಂತೆಯೇ ಇಸ್ಲಾಮೀ ಸಂಸ್ಕೃತಿಯ ಇನ್ನೊಂದು ಉಜ್ವಲ ಮುಖ ಸಮಾನತೆಯಾಗಿದೆ. 'ಅತಿ ಹೆಚ್ಚು ದೇವಭಯವುಳ್ಳವನೇ ನಿಮ್ಮ ಪೈಕಿ ಅಲ್ಲಾಹನ ಬಳಿ ಹೆಚ್ಚು ಗೌರವಕ್ಕೆ ಪಾತ್ರನು' **(ಅಲ್‌ಹುಜುರಾತ್: 13)** ಎಂದು ಹೇಳುವ ಮೂಲಕ ಅದು ಸಮಾನತೆಯ ಭದ್ರ ಬುನಾದಿಯನ್ನು ಹಾಕಿತು. ತಮ್ಮ ಕೊನೆಯ ಹಜ್ಜ್‌ನ ವಿದಾಯ ಭಾಷಣದಲ್ಲಿ ಪ್ರವಾದಿ(ಸ) ಹೀಗೆ ಘೋಷಿಸಿದರು.- 'ಎಲ್ಲ ಮಾನವರು ಆದಮರ ಸಂತತಿಗಳು, ಆದಮರನ್ನು ಮಣ್ಣಿನಿಂದ ಸೃಷ್ಟಿಸಲಾಯಿತು. ಅರಬನಿಗೆ ಅರಬೇತರನಿಗಿಂತ, ಬಿಳಿಯನಿಗೆ ಕರಿಯನಿಗಿಂತ ಯಾವ ಶ್ರೇಷ್ಠತೆಯೂ ಇಲ್ಲ, ದೇವಭಯದ ಆಧಾರದಲ್ಲಿ ಹೊರತು.'

ಇದು ಕೇವಲ ಔಪಚಾರಿಕ ಘೋಷಣೆಯಲ್ಲ, ಯಾವುದೋ ವಿಶೇಷ ಸಂದರ್ಭಕ್ಕಿರುವ ಘೋಷಣೆಯೂ ಅಲ್ಲ, ಈ ಸಮಾನತೆಯನ್ನು ಲೋಕದ ಎಲ್ಲೆಡೆ ಮಸೀದಿಗಳಲ್ಲಿ ಕಾಣಬಹುದು. ಕರಿಯ-ಬಿಳಿಯ, ಬಡವ-ಬಲ್ಲಿದ, ರಾಜ ಪ್ರಜೆ, ಒಡೆಯ-ಗುಲಾಮನೆಂಬ ಭೇದವಿಲ್ಲದೆ ಎಲ್ಲರೂ ಭಯಭಕ್ತಿಯೊಂದಿಗೆ ದೇವನ ಮುಂದೆ ನಿಲ್ಲುತ್ತಾರೆ, ಬಾಗುತ್ತಾರೆ, ಸಾಷ್ಟಾಂಗವೆರಗುತ್ತಾರೆ. ಸಾಷ್ಟಾಂಗದಲ್ಲಿ ಎದುರಿನ ಸಾಲಿನಲ್ಲಿರುವ ಗುಲಾಮನ ಕಾಲಿಗೆ ಅಥವಾ ಓರ್ವ ಸಾಮಾನ್ಯ ಪ್ರಜೆಯ ಕಾಲಿಗೆ ಒಡೆಯನ ಅಥವಾ ರಾಜನ ತಲೆಬಾಗುವುದು

ಸಾಮಾನ್ಯ ದೃಶ್ಯ. ಅದೇ ರೀತಿ ತನ್ನ ಬದಿಯಲ್ಲಿ ಓರ್ವ ಕರಿಯ ತನ್ನ ಭುಜಕ್ಕೆ ಭುಜ ಕೊಟ್ಟು ನಿಂತಿದ್ದಾನೆಂಬ ಮುಜುಗರ ಬಿಳಿಯನಿಗಿರುವುದಿಲ್ಲ. ತನ್ನ ಬಳಿಯಲ್ಲಿ ಓರ್ವ ಬಿಳಿಯ ನಿಂತಿದ್ದಾನೆಂಬ ಸಂಕೋಚ ಕರಿಯನಿಗೂ ಇರುವುದಿಲ್ಲ. ಎಂತಹ ಸಮಾನತೆ, ಎಂತಹ ಅದ್ಭುತ ದೃಶ್ಯ!

ಇದೇ ಸಮಾನತೆಯನ್ನು ಹಜ್ಜ್ ಕರ್ಮದಲ್ಲೂ ಕಾಣಬಹುದು. ಅಲ್ಲಿ ವಿವಿಧ ನಾಡುಗಳ, ವಿವಿಧ ಗೋತ್ರಗಳ ಮತ್ತು ವಿವಿಧ ವರ್ಣಗಳ ಜನರು ಒಂದುಗೂಡಿ ಒಂದೇ ಸಮವಸ್ತ್ರ(ಬಿಳಿ ಲುಂಗಿ ಮತ್ತು ಬಿಳಿ ಹೊದೆಯುವ ವಸ್ತ್ರ) ಧರಿಸಿ ಹಜ್ಜ್ ನಿರ್ವಹಿಸುವಾಗ ಮಾನವ ನಿರ್ಮಿತ ತಾರತಮ್ಯದ ಎಲ್ಲ ಗೋಡೆಗಳೂ ಕುಸಿದು ಬೀಳುತ್ತವೆ. ಎಲ್ಲರ ಬಾಯಲ್ಲೂ ಒಂದೇ ಘೋಷಣೆ. ಲಬ್ಬೈಕ್ ಅಲ್ಲಾಹುಮ್ಮ ಲಬ್ಬೈಕ್, ಲಬ್ಬೈಕ ಲಾ ಶರೀಕಲಕ ಲಬ್ಬೈಕ್, ಇನ್ನಲ್ ಹಮ್ದ ವನ್ನಿಅ್‌ಮತ ಲಕ ವಲ್ ಮುಲ್ಕ ಲಾ ಶರೀಕಲಕ ಲಬ್ಬೈಕ್ (ನಾನಿದೋ ಹಾಜರಿದ್ದೇನೆ. ಓ ಅಲ್ಲಾಹ್ ನಾನು ಹಾಜರಿದ್ದೇನೆ. ನಾನು ಹಾಜರಿದ್ದೇನೆ. ನಿನಗಾರೂ ಸಹಭಾಗಿಗಳಿಲ್ಲ, ನಾನು ಹಾಜರಿದ್ದೇನೆ. ಸರ್ವ ಪ್ರಶಂಸೆಗಳೂ ಸಕಲ ಅಧಿಕಾರಗಳೂ ನಿನಗೆ ಮೀಸಲು, ನಿನಗಾರೂ ಭಾಗಿಗಳಿಲ್ಲ, ನಾನಿದೋ ಹಾಜರಿದ್ದೇನೆ) ಈ ಘೋಷಣೆಯನ್ನು ಎಲ್ಲರೂ ಒಕ್ಕೊರಳಿನಿಂದ ಪದೇ ಪದೇ ಘೋಷಿಸುತ್ತಾರೆ. ಇಲ್ಲಿ ಯಾರೂ ದೊಡ್ಡವರಿಲ್ಲ, ಸೃಷ್ಟಿಕರ್ತನು ಮಾತ್ರ ದೊಡ್ಡವನು ಎಂಬುದರ ಪ್ರಾಯೋಗಿಕ ದೃಶ್ಯ ಗೋಚರಿಸುತ್ತದೆ.

ಮಾನವನಿಗೆ ಸಲ್ಲಬೇಕಾದ ನಿಜವಾದ ಗೌರವದ ಪರಾಕಾಷ್ಠೆಯ ದೃಶ್ಯವನ್ನೊಮ್ಮೆ ನೋಡೋಣ. ಮಕ್ಕಾ ವಿಜಯವಾಗಿ ಪವಿತ್ರ ಕಅ್‌ಬಾಲಯದಿಂದ ವಿಗ್ರಹಗಳನ್ನು ಮತ್ತು ಭಿತ್ತಿ ಚಿತ್ರಗಳನ್ನು ಅಳಿಸಿ ಹಾಕಿದ ಬಳಿಕ, ಅಜ್ಞಾನ ಕಾಲದಲ್ಲಿ ಸ್ಥಾನಮಾನದಲ್ಲೂ ಮೈಬಣ್ಣದಲ್ಲೂ ಅತಿ ನಿಕೃಷ್ಟನೆಂದು ಪರಿಗಣಿಸಲ್ಪಟ್ಟಿದ್ದ ಬಿಲಾಲ್‌ರನ್ನು ಪ್ರವಾದಿ(ಸ) ಹತ್ತಿರ ಕರೆಯುತ್ತಾರೆ. ಪವಿತ್ರ ಕಅ್‌ಬಾದ ಗೋಡೆಗಳ ಮೇಲೇರಿ ಅಲ್ಲಾಹನ ಮಹಾನತೆಯ ಘೋಷಣೆ(ಅದಾನ್)ಯನ್ನು ಸಾರ್ವತ್ರಿಕವಾಗಿ ಸಾರುವಂತೆ ಅವರಿಗೆ ಆಜ್ಞಾಪಿಸುತ್ತಾರೆ. ಕಅ್‌ಬಾ ಭವನವು ಇಬ್ರಾಹೀಮ್(ಅ) ಅವರ ಕಾಲದಿಂದಲೂ ಶ್ರೇಷ್ಠತೆಯ ಕೇಂದ್ರವಾಗಿತ್ತು. ಇಸ್ಲಾಮಿನಲ್ಲೂ ಅದು ಕಿಬ್ಲಾ ಆಗುವಂತಹ ಶ್ರೇಷ್ಠತೆಯನ್ನು ಪಡೆದ ಪವಿತ್ರ ಕೇಂದ್ರವಾಯಿತು. ಆದರೆ ಮಾನವನ ಶ್ರೇಷ್ಠತೆಯು ಅದಕ್ಕಿಂತಲೂ ಮಿಗಿಲೆಂದು ಈ ಘಟನೆಯು ವ್ಯಕ್ತಪಡಿಸಿತು. ಬಿಲಾಲ್ ಅದರ ತುತ್ತ ತುದಿಯಲ್ಲಿ ಪಾದಸ್ಪರ್ಶ ಮಾಡುತ್ತಾರೆ. ಇಂತಹ ಉದಾಹರಣೆಯು ಇಂದಿನ ಅತ್ಯಂತ ಸುಸಂಸ್ಕೃತ ಸಮಾಜದಲ್ಲೂ ಊಹಿಸಲಿಕ್ಕೆ ಸಾಧ್ಯವಿಲ್ಲ. ಅಮೆರಿಕಾ ಜಗತ್ತಿನಲ್ಲಿ ಅತ್ಯಂತ ಸುಸಂಸ್ಕೃತ ದೇಶವೆಂದು ಪರಿಗಣಿಸಲ್ಪಡುತ್ತದೆ. ಆದರೆ ಅಲ್ಲಿ ಅಸ್ಪೃಶ್ಯತೆ, ವರ್ಣಭೇದ ಈಗಲೂ ಜೀವಂತವಾಗಿದೆ. ಅಲ್ಲಿ ಬಿಳಿಯರು ಮತ್ತು ಕರಿಯರು ಪ್ರತ್ಯೇಕವಾಗಿ ಜೀವಿಸುತ್ತಿದ್ದಾರೆ. ಅವರ ಆರಾಧನಾಲಯಗಳು ಬೇರೆ, ಅವರ ಹೊಟೇಲುಗಳು ಬೇರೆ,

ಅವರ ಮಕ್ಕಳ ಶಾಲೆಗಳು ಬೇರೆ ಬೇರೆ. ಮಾನವನನ್ನು ಮಾನವನೆಂದು ಪರಿಗಣಿಸದ ಸಂಸ್ಕೃತಿ ಅದೆಂತಹ ಸಂಸ್ಕೃತಿ! ಆದರೆ ಇಸ್ಲಾಮ್ 14 ಶತಮಾನಗಳ ಹಿಂದೆಯೇ ಈ ಭೇದಭಾವವನ್ನು ಅಳಿಸಿ ಹಾಕಿ ಮಾನವನಿಗೆ ಶ್ರೇಷ್ಠ ಪದವಿ ಪ್ರದಾನ ಮಾಡಿದೆ. ದೇವ ಭಯವನ್ನು ಮಾತ್ರ ಅದು ಶ್ರೇಷ್ಠತೆಯ ಮಾನದಂಡವಾಗಿ ಪರಿಗಣಿಸಿದೆ. ಮುಸ್ಲಿಮರು ಈ ಭೂಮುಖದ ಎಲ್ಲೇ ವಾಸಿಸುತ್ತಿದ್ದರೂ ಯಾವ ಭಾಷೆ, ವರ್ಣ, ವರ್ಗದವರಾಗಿದ್ದರೂ ಅವರ ಆರಾಧನಾಲಯ ಒಂದು. ಅವರ ಶಿಕ್ಷಣ ಕೇಂದ್ರಗಳಿಗೆ ಎಲ್ಲರಿಗೂ ಮುಕ್ತ ಅವಕಾಶವಿದೆ. ಅವರು ಒಂದೇ ತಟ್ಟೆಯಲ್ಲಿ ಒಟ್ಟಿಗೆ ಕೂತು ಊಟ ಮಾಡುತ್ತಾರೆ. ಇಸ್ಲಾಮೀ ಸಂಸ್ಕೃತಿಯಲ್ಲಿ ಮಾನವನು ತನ್ನ ಕರ್ಮದ ಮೂಲಕ ಮಾತ್ರ ಉನ್ನತಿಯನ್ನು ಪಡೆಯುತ್ತಾನೆ. ಸ್ವರ್ಗ-ನರಕಗಳೂ ಅವನ ಕರ್ಮಗಳನ್ನು ಅವಲಂಬಿಸಿರುತ್ತದೆ. ಇಲ್ಲಿ ಮೈಬಣ್ಣಕ್ಕೆ ಯಾವ ಬೆಲೆಯೂ ಇಲ್ಲ.

**"ಅಣು ಗಾತ್ರದಷ್ಟು ಪುಣ್ಯ ಕಾರ್ಯವೆಸಗಿದವನು ಅದನ್ನು ಕಂಡೇ ತೀರುವನು. ಅಣು ಗಾತ್ರದಷ್ಟು ಪಾಪ ಕಾರ್ಯವೆಸಗಿದವನು ಅದನ್ನೂ ಕಂಡೇ ತೀರುವನು."**

**(ಪವಿತ್ರ ಕುರ್‌ಆನ್, 99:7-8)**

## ಧರ್ಮ ಸಹಿಷ್ಣುತೆ

ಇಸ್ಲಾಮ್ ತನ್ನ ಸಂಸ್ಕೃತಿಯ ಅಡಿಪಾಯ ಹಾಕಿದಾಗ ಇತರ ಮತ-ಧರ್ಮಗಳ ಬಗ್ಗೆ ವಿಶಾಲ ನೀತಿಯನ್ನು ಅನುಸರಿಸಿತು. ಯಾವುದೇ ರೀತಿಯ ಸಂಕುಚಿತತೆಯನ್ನು ಪ್ರದರ್ಶಿಸಲಿಲ್ಲ. ಅವುಗಳ ತತ್ವ ಸಿದ್ಧಾಂತಗಳ ವಿರುದ್ಧ ಪಕ್ಷಪಾತ ತೋರಲಿಲ್ಲ. ಧರ್ಮ ಸಹಿಷ್ಣುತೆಯು ಅದರ ಮೂಲನೀತಿಯಾಗಿದೆ. ಅದನ್ನು ಪ್ರತಿಯೊಬ್ಬ ಮುಸ್ಲಿಮನೂ ಕಡ್ಡಾಯವಾಗಿ ಪಾಲಿಸಬೇಕೆಂದು ವಿಧಿಸಲಾಗಿದೆ. ಪ್ರವಾದಿ ಮುಹಮ್ಮದ್(ಸ) ಅವರಿಗಿಂತ ಮುಂಚಿನ ಎಲ್ಲ ಪ್ರವಾದಿಗಳ ಮೇಲೂ ವಿಶ್ವಾಸವಿರಿಸುವುದು ಕಡ್ಡಾಯ. ಒಬ್ಬನನ್ನು ನಂಬುತ್ತೇವೆ, ಇನ್ನೊಬ್ಬನನ್ನು ನಂಬುವುದಿಲ್ಲವೆಂದು ಹೇಳುವಂತಿಲ್ಲ. ಹಾಗೆ ಹೇಳಿದರೆ ಆತ ಮುಸ್ಲಿಮನಾಗಿ ಉಳಿಯುವಂತಿಲ್ಲ. ಅದೇ ರೀತಿ ಹಿಂದಿನ ಪ್ರವಾದಿಗಳ ಅನುಯಾಯಿಗಳು, ಅವರ ಸಮುದಾಯಗಳೊಂದಿಗೆ ಉತ್ತಮ ಬಾಂಧವ್ಯವನ್ನಿಟ್ಟುಕೊಳ್ಳಬೇಕು. ಅವರೊಂದಿಗೆ ಗೌರವಾದರಗಳೊಂದಿಗೆ ವರ್ತಿಸಬೇಕು. ಅವರ ಮೇಲೆ ಅತಿರೇಕವೆಸಗಬಾರದು. ಅವರೊಂದಿಗೆ ಕಠೋರವಾಗಿ ವರ್ತಿಸಬಾರದು. ಅವರ ಅತ್ಯುತ್ತಮ ನೆರೆಕರೆಯವರಾಗಬೇಕು. ಅವರ ಆಮಂತ್ರಣವನ್ನು ಸ್ವೀಕರಿಸಬೇಕು. ಅವರ ವಿಶ್ವಾಸ-ನಂಬಿಕೆಗಳ ಮೇಲೆ ಹಸ್ತಕ್ಷೇಪ ನಡೆಸಬಾರದು. ಅವರ ಆರಾಧನಾಲಯಗಳ ರಕ್ಷಣೆಯು ಇಸ್ಲಾಮೀ ಸರಕಾರದ ಹೊಣೆಯಾಗಿದೆ. ಅವರ ಮೊಕದ್ದಮೆಗಳಲ್ಲಿ ನಿಷ್ಠುರ ನ್ಯಾಯ ಪಾಲಿಸಬೇಕು. ಅವರ ಹಕ್ಕು ಅಧಿಕಾರಗಳಿಗೆ ಮುಸ್ಲಿಮರಿಗೆ ಸಮಾನವಾದ ಸ್ಥಾನಮಾನ ನೀಡಬೇಕು. ಮುಸ್ಲಿಮರ

ಮಾನ, ಪ್ರಾಣ ಮತ್ತು ಭವಿಷ್ಯದಂತೆಯೇ ಅವರ ಮಾನ, ಪ್ರಾಣ ಮತ್ತು ಭವಿಷ್ಯವನ್ನು ರಕ್ಷಿಸಬೇಕು. ಪ್ರವಾದಿ ಮುಹಮ್ಮದ್(ಸ) ಕಟ್ಟಿ ಬೆಳೆಸಿದ ಸಂಸ್ಕೃತಿಯು ಇದೆಲ್ಲವನ್ನೂ ಚಾಚೂ ತಪ್ಪದೆ ಪಾಲಿಸಿರುವುದನ್ನು ಲೋಕ ಕಂಡಿತು. ಅದು ಸಾಮೂಹಿಕ ಕಾರ್ಯರಂಗದಿಂದ ಮುಸ್ಲಿಮೇತರರನ್ನು ಹೊರಗಿಡಲಿಲ್ಲ. ಆದರೆ ಮುಸ್ಲಿಮರಿಗೆ ಪತನ ಸಂಭವಿಸಿದಾಗ ಅವರು ಈ ನೀತಿಯನ್ನು ಕೈಬಿಟ್ಟರು. ಧರ್ಮದ ಬಗ್ಗೆ ಅಜ್ಞಾನ ಹೆಚ್ಚಾದಂತೆಲ್ಲ ಧರ್ಮ ಸಹಿಷ್ಣುತೆಯ ಬಗ್ಗೆಯೂ ನಿರ್ಲಕ್ಷ್ಯ ತೋರಿದ್ದರು.

## ಪ್ರವಾದಿಯವರ(ಸ) ಕಾಲದಲ್ಲಿ

ಪ್ರವಾದಿ(ಸ) ಮದೀನಕ್ಕೆ ವಲಸೆ ಹೋದಾಗ ಅಲ್ಲಿ ಯಹೂದಿಯರು ದೊಡ್ಡ ಸಂಖ್ಯೆಯಲ್ಲಿ ವಾಸಿಸುತ್ತಿದ್ದರು. ಅಲ್ಲಿ ಪ್ರಪ್ರಥಮವಾಗಿ ಪ್ರವಾದಿವರ್ಯರು(ಸ) ಮುಸ್ಲಿಮರು ಮತ್ತು ಯಹೂದಿಯರ ಮಧ್ಯೆ ಒಂದು ಒಪ್ಪಂದವೇರ್ಪಡಿಸಿದರು. ಅದರ ಪ್ರಕಾರ, ಇಸ್ಲಾಮೀ ಸರಕಾರಕ್ಕೆ ಯಹೂದಿಯರ ವಿಶ್ವಾಸ-ನಂಬಿಕೆಗಳನ್ನು, ಅವರ ಲಾಂಛನಗಳನ್ನು ರಕ್ಷಿಸುವುದು ಹಾಗೂ ಅವರನ್ನು ಎಲ್ಲ ರೀತಿಯ ಅತಿರೇಕಗಳಿಂದ ರಕ್ಷಿಸುವುದು ಕಡ್ಡಾಯವಾಯಿತು. ಮದೀನದ ಮೇಲೆ ಯಾರಾದರೂ ದಾಳಿ ಮಾಡಿದರೆ ಯಹೂದಿಯರು ಮುಸ್ಲಿಮರೊಂದಿಗೆ ಸೇರಿ ಅದನ್ನು ಎದುರಿಸಬೇಕೆಂಬ ನಿಬಂಧನೆಯೂ ಆ ಒಪ್ಪಂದದಲ್ಲಿತ್ತು. ಈ ರೀತಿ ಪ್ರವಾದಿಯವರು(ಸ) ಆರಂಭದಲ್ಲೇ ಧರ್ಮ ಸಹಿಷ್ಣುತೆಯನ್ನು ಇಸ್ಲಾಮೀ ಸಂಸ್ಕೃತಿಯ ಒಂದು ಭಾಗವಾಗಿ ನಿಶ್ಚಯಿಸಿದರು.

ಪ್ರವಾದಿಯವರ ನೆರೆಕರೆಯಲ್ಲಿ ಕೆಲವು ಯಹೂದಿಯರ ಮನೆಗಳಿದ್ದುವು. ಅವರೊಂದಿಗೆ ಪ್ರವಾದಿ(ಸ) ಅತ್ಯುತ್ತಮ ಬಾಂಧವ್ಯವನ್ನಿಟ್ಟುಕೊಂಡಿದ್ದರು. ಅವರೊಂದಿಗೆ ಉತ್ತಮವಾಗಿ ವರ್ತಿಸುತ್ತಿದ್ದರು. ಅವರಿಗೆ ಉಡುಗೊರೆಗಳನ್ನು ಕಳಿಸುತ್ತಿದ್ದರು. ಅವರ ಉಡುಗೊರೆಗಳನ್ನು ಸ್ವೀಕರಿಸುತ್ತಿದ್ದರು. ಪ್ರವಾದಿಯವರ(ಸ) ಈ ಸದ್ವರ್ತನೆಯನ್ನು ಅವರು ದುರುಪಯೋಗ ಪಡಿಸಿಕೊಂಡರು. ಓರ್ವ ಯಹೂದಿ ಮಹಿಳೆಯು ವಿಷ ಬೆರೆಸಿದ ಆಡಿನ ಮಾಂಸವನ್ನು ಕಳಿಸಿ ಕೊಟ್ಟಿದ್ದಳು. ಏಕೆಂದರೆ ಪ್ರವಾದಿಯವರು ತಮ್ಮ ಕಡೆಯಿಂದ ಹೋಗುವ ಉಡುಗೊರೆಗಳನ್ನು ಸ್ವೀಕರಿಸುತ್ತಾರೆಂದು ಆಕೆಗೆ ಚೆನ್ನಾಗಿ ಗೊತ್ತಿತ್ತು. ಪ್ರವಾದಿಯವರು(ಸ) ಅವಳ ಈ ದುರುದ್ದೇಶದ ಅರಿವಾದರೂ ಆಕೆಯ ಮೇಲೇನೂ ಕ್ರಮಕೈಗೊಳ್ಳಲಿಲ್ಲ. ಸ್ವಂತಕ್ಕಾಗಿ ಯಾರೊಂದಿಗೂ ಪ್ರತೀಕಾರವೆಸಗುವುದು ಪ್ರವಾದಿಯವರ(ಸ) ಜಾಯಮಾನವಾಗಿರಲಿಲ್ಲ.

ಇಥಿಯೋಪಿಯಾದ ಕ್ರೈಸ್ತರು ಮದೀನಕ್ಕೆ ಬಂದಾಗ, ಅವರಿಗೆ ಮಸ್ಜಿದುನ್ನಬವಿಯಲ್ಲಿ ಉಳಕೊಳ್ಳಲು ಪ್ರವಾದಿ(ಸ) ಸೌಕರ್ಯ ಮಾಡಿಕೊಟ್ಟರು. ಅವರ ಆತಿಥೇಯ ಮತ್ತು ಸೇವೆಯ ಹೊಣೆಯನ್ನು ತಾವೇ ವಹಿಸಿಕೊಂಡರು. ಅಂದು ಪ್ರವಾದಿಯವರು ಹೇಳಿದ

ಮಾತು ಗಮನಾರ್ಹವಾಗಿದೆ. ಪ್ರವಾದಿ(ಸ) ಹೇಳಿದರು- "ಈ ಜನರು ನಮ್ಮ ಸಂಗಾತಿಗಳಿಗೆ ಗೌರವಾರ್ಹ ಅತಿಥಿಗಳಾಗಿದ್ದಾರೆ. ಆದ್ದರಿಂದ ಇವರ ಆತಿಥೇಯವನ್ನು ನಾನೇ ವಹಿಸುತ್ತೇನೆಂದು ಇಚ್ಛಿಸಿದ್ದೇನೆ."

ಒಮ್ಮೆ ನಜ್ರಾನಿನಿಂದ ಕ್ರೈಸ್ತರ ಒಂದು ತಂಡ ಬಂದಾಗ ಪ್ರವಾದಿಯವರು(ಸ) ಅವರನ್ನು ಮಸ್ಜಿದುನ್ನಬವಿಯಲ್ಲಿರಲು ಮತ್ತು ಅವರದೇ ಆರಾಧನೆಗಳನ್ನು ಮಾಡಲು ಅನುಮತಿ ನೀಡಿದರು. ಅವರು ಮಸೀದಿಯ ಒಂದು ಬದಿಯಲ್ಲಿ ಆರಾಧಿಸುತ್ತಿದ್ದರೆ, ಪ್ರವಾದಿ(ಸ) ತಮ್ಮ ಸಂಗಾತಿಗಳ ಜೊತೆಯಲ್ಲಿ ಇನ್ನೊಂದು ಬದಿಯಲ್ಲಿ ನಮಾಝ್ ನಿರ್ವಹಿಸುತ್ತಿದ್ದರು. ತಮ್ಮ ಧರ್ಮದ ಸತ್ಯತೆಯ ಬಗ್ಗೆ ಅವರು ಪ್ರವಾದಿಯವರೊಂದಿಗೆ ಚರ್ಚಿಸಿದಾಗ, ಪ್ರವಾದಿಯವರು ಅವರ ಮಾತುಗಳನ್ನು ಗಮನಕೊಟ್ಟು ಆಲಿಸಿದರು ಮತ್ತು ಬಹಳ ವಿನಯ, ಗೌರವ ಮತ್ತು ಸಭ್ಯ ರೀತಿಯಲ್ಲಿ ಅವರಿಗೆ ಉತ್ತರ ನೀಡುತ್ತಿದ್ದರು. ಪ್ರವಾದಿ(ಸ) ಮುಕೌಕಿಸ್ ರಾಜನ ಉಡುಗೊರೆಯನ್ನು ಸ್ವೀಕರಿಸಿದ್ದಾರೆ. ಅವರು ಕಳಿಸಿದ ದಾಸಿಯನ್ನೂ ಸ್ವೀಕರಿಸಿದ್ದಾರೆ. ಆಕೆ (ಮಾರಿಯಾ ಕಿಬ್ತಿಯ್ಯಾ)ಯೊಂದಿಗಿನ ದಾಂಪತ್ಯ ಸಂಬಂಧದಿಂದಾಗಿ ಇಬ್ರಾಹೀಮ್ ಎಂಬ ಹೆಸರಿನ ಮಗುವಿನ ಜನನವಾಯಿತು. ಆದರೆ ಮಗು ಕೆಲವೇ ತಿಂಗಳಲ್ಲಿ ತೀರಿಕೊಂಡಿತು. 'ಕಿಬ್ತಿಗಳು ನಿಮ್ಮ ಸಂಬಂಧಿಕರಾಗಿದ್ದಾರೆ. ಅವರ ಹಿತಚಿಂತಕರಾಗಿರಿ' ಎಂದು ಪ್ರವಾದಿ(ಸ) ಉಪದೇಶಿಸಿದ್ದರು.

## ಖಲೀಫರ ಕಾಲದಲ್ಲಿ

ಪ್ರವಾದಿಯವರ(ಸ) ಕಾಲದ ನಂತರ ಅವರ ಖಲೀಫರುಗಳು ತಮ್ಮ ಆಡಳಿತಾವಧಿಯಲ್ಲಿ ಪ್ರವಾದಿಯವರ(ಸ) ಮಾನವ ಪ್ರೇಮ ಮತ್ತು ಧರ್ಮ ಸಹಿಷ್ಣುತೆ ನೀತಿಯನ್ನು ಅದೇ ರೀತಿಯಲ್ಲಿ ಅನುಸರಿಸಿದರು. ಉಮರ್(ರ) ಬೈತುಲ್‌ಮಕ್ದಿಸಿಗೆ ದಿಗ್ವಿಜಯಿಯಾಗಿ ಪ್ರವೇಶಿಸಿದಾಗ, ಇಲ್ಲಿ ಯಾವ ಯಹೂದಿಯೂ ಇರಬಾರದೆಂಬ ಕ್ರೈಸ್ತ ಬಾಂಧವರ ಬೇಡಿಕೆಯನ್ನು ಒಪ್ಪಿಕೊಂಡರು. ಬೈತುಲ್ ಮಕ್ದಿಸಿನ ದೊಡ್ಡ ಇಗರ್ಜಿಯಲ್ಲಿರುವಾಗ ಅಸರ್ ನಮಾಝ್‌ನ ಸಮಯವಾಯಿತು. ಅವರು ಇಗರ್ಜಿಯಲ್ಲಿ ನಮಾಝ್ ಮಾಡಬಹುದೆಂಬ ಕ್ರೈಸ್ತರ ಅನುಮತಿಯ ಹೊರತಾಗಿಯೂ ಹೊರಗೆ ಬಂದು ನಮಾಝ್ ನಿರ್ವಹಿಸಿದರು. ಮುಸ್ಲಿಮರ ಮುಂದಿನ ತಲೆಮಾರು ಇದು ನಮ್ಮ ಮಸೀದಿಯಾಗಿತ್ತೆಂದು ಹಕ್ಕು ಸ್ಥಾಪಿಸಬಹುದೆಂದು ಭಾವಿಸಿ ಉಮರ್(ರ) ಈ ಕ್ರಮ ಕೈಗೊಂಡಿದ್ದರು.

ಈಜಿಪ್ಟ್‌ನ ಓರ್ವ ಮಹಿಳೆ ತನ್ನ ಮನೆಯನ್ನು ತನ್ನ ಇಚ್ಛೆಗೆ ವಿರುದ್ಧವಾಗಿ ಕೆಡವಿ ಮಸೀದಿಗೆ ಸೇರಿಸಲಾಗಿದೆಯೆಂದು ಉಮರ್‌ರಿಗೆ ದೂರು ನೀಡಿದಾಗ, ಅಲ್ಲಿನ ರಾಜ್ಯಪಾಲ ಅಮ್ರುಬುನು ಆಸ್‌ರಲ್ಲಿ ಕಾರಣ ಕೇಳಿದರು. ಅವರು ಹೇಳಿದರು– 'ಮಸೀದಿಗೆ ತಾಗಿ

ಅವಳ ಮನೆಯಿತ್ತು. ಮುಸ್ಲಿಮರ ಸಂಖ್ಯೆ ಹೆಚ್ಚಾದುದರಿಂದ ಆಕೆಯ ಮನೆಯನ್ನು ಅದರ ವಾಸ್ತವ ದರಕ್ಕಿಂತ ಹೆಚ್ಚೇ ಕೊಟ್ಟು ಖರೀದಿಸ ಬಯಸಿದಾಗ ಆಕೆ ಕೊಡಲೊಪ್ಪಲಿಲ್ಲ, ಆದ್ದರಿಂದ ಬಲವಂತವಾಗಿ ಮನೆಯನ್ನು ಕೆಡವಿ ಮಸೀದಿಗೆ ಸೇರಿಸಲಾಯಿತು. ಮನೆಯ ಬೆಲೆಯನ್ನು ಬೈತುಲ್ ಮಾಲ್‌ನಲ್ಲಿ ಸುರಕ್ಷಿತವಾಗಿಡಲಾಗಿದೆ. ಆಕೆ ಯಾವಾಗ ಬೇಕೋ ಅದನ್ನು ಕೊಂಡು ಹೋಗಬಹುದು.' ಅಮ್ರುಬುನು ಆಸ್‌ರ ಕಾರಣ ಸೂಕ್ತವೇ ಆಗಿತ್ತು. ನಮ್ಮ ಪ್ರಸಕ್ತ ಕಾನೂನು ವ್ಯವಸ್ಥೆಯಲ್ಲೂ ಅದಕ್ಕೆ ಅವಕಾಶವಿದೆ. ಆದರೆ ಉಮರ್(ರ) ಅಮ್ರ್‌ರ ಕಾರಣವನ್ನು ಒಪ್ಪಲಿಲ್ಲ, 'ಆಕೆಯ ಮನೆಯಿದ್ದ ಸ್ಥಳದಲ್ಲಿ ಕಟ್ಟಲಾದ ಮಸೀದಿಯ ಭಾಗವನ್ನು ಕೆಡವಿ ಆಕೆಯ ಮನೆಯನ್ನು ಹಿಂದಿನಂತೆಯೇ ನಿರ್ಮಿಸಿ ಕೊಡಬೇಕೆಂದು ಆಜ್ಞಾಪಿಸಿದರು.

ಈ ಧರ್ಮ ಸಹಿಷ್ಣುತೆಯು ಇಸ್ಲಾಮೀ ಸಂಸ್ಕೃತಿಯ ಸೃಷ್ಟಿಯಾಗಿದೆ. ಇಂತಹ ಧರ್ಮ ಸಹಿಷ್ಣುತೆಯನ್ನು ಇತಿಹಾಸದ ಹಿಂದಿನ ಯಾವ ಕಾಲದಲ್ಲೂ ಕಾಣಲು ಸಾಧ್ಯವಿಲ್ಲ, ಮುಂದುವರಿದ ಆಧುನಿಕ ಲೋಕದಲ್ಲೂ ಅದನ್ನು ದರ್ಶಿಸಲು ಸಾಧ್ಯವಿಲ್ಲ, ಇತಿಹಾಸದ ಪುಟಗಳನ್ನು ತಿರುವುತ್ತಾ ಹೋದರೆ ಇಸ್ಲಾಮೀ ಇತಿಹಾಸದ ಎಲ್ಲ ಕಾಲ ಘಟ್ಟಗಳಲ್ಲೂ ಇಂತಹ ನೂರಾರು ಘಟನೆಗಳನ್ನು ಹುಡುಕಿ ತೆಗೆಯಬಹುದು. ಅದರಲ್ಲಿ ಯಾವುದೂ ಕಟ್ಟು ಕಥೆಯಲ್ಲ, ವಾಸ್ತವದಲ್ಲಿ ನಡೆದ, ಪ್ರಾಮಾಣಿಕರಾದ ಇತಿಹಾಸಗಾರರು ದಾಖಲಿಸಿದ ಘಟನೆಗಳಾಗಿವೆ.

## ಪ್ರಾಣಿ ದಯೆ

ಇಸ್ಲಾಮಿನ ಸಂಸ್ಕೃತಿಯು ಕೇವಲ ಮಾನವರ ಮೇಲೆ ಕರುಣೆ ಪ್ರೀತಿ ತೋರಬೇಕೆಂದು ಕಲಿಸುವ ಧರ್ಮವಲ್ಲ, ಬದಲಾಗಿ ಪ್ರಾಣಿ ಪಕ್ಷಿಗಳ ಮೇಲೂ ದಯೆ ತೋರಬೇಕೆಂದು ಕಲಿಸಿದ ಪ್ರಪ್ರಥಮ ಸಂಸ್ಕೃತಿಯಾಗಿದೆ. ಇತ್ತೀಚಿನ ಕಾಲದ ವರೆಗೆ ಪ್ರಾಣಿ ಪಕ್ಷಿಗಳ ಮೇಲೂ ದಯೆ ತೋರಬೇಕಾಗಿದೆಯೆಂಬ ಪ್ರಜ್ಞೆಯೇ ಇತರ ಜನಸಮುದಾಯಗಳಲ್ಲಿರಲಿಲ್ಲ, ಮೋಜಿಗಾಗಿ ಪ್ರಾಣಿಗಳನ್ನು ಹೊಡೆದಾಡಿಸುವುದು, ರಾಷ್ಟ್ರೀಯ ಮತ್ತು ಧಾರ್ಮಿಕ ಉತ್ಸವಗಳಲ್ಲಿ ಪ್ರಾಣಿಗಳನ್ನು ಕೊಲ್ಲುವುದು. ಕೆಲವು ಜನಾಂಗಗಳಲ್ಲಿ ಈಗಲೂ ಇವೆ. ಆದರೆ ಇಸ್ಲಾಮೀ ಸಂಸ್ಕೃತಿಯು ಪ್ರೀತಿ ದಯೆಯ ಮಾನವೀಯ ಪ್ರಜ್ಞೆಯನ್ನು ಪ್ರಾಣಿ ಪಕ್ಷಿಗಳಿಗೂ ವಿಸ್ತರಿಸುತ್ತದೆ.

ಪ್ರಾಣಿ ಸಂಕುಲವು ಮಾನವ ಕುಲದಂತೆ ಒಂದು ಲೋಕವಾಗಿದೆ. ಅದಕ್ಕೆ ಕೆಲವು ವಿಶೇಷತೆಗಳಿವೆ. ಕೆಲವು ಗುಣಗಳಿವೆ, ಅದಕ್ಕೆ ವಿಶಿಷ್ಟ ಸ್ವಭಾವವಿದೆ. ಅದು ವಿಶಿಷ್ಟ ರೀತಿಯ ಪ್ರಜ್ಞೆಯನ್ನು ಹೊಂದಿದೆಯೆಂಬುದು ಇಸ್ಲಾಮೀ ಸಂಸ್ಕೃತಿಯ ಮೂಲ ಪಾಠವಾಗಿದೆ.

ಭೂಮಿಯ ಮೇಲೆ ಚಲಿಸುವ ಪ್ರಾಣಿಗಳನ್ನೂ ವಾಯುವಿನಲ್ಲಿ ರೆಕ್ಕೆಗಳಿಂದ ಹಾರಾಡುವ ಪಕ್ಷಿಗಳನ್ನೂ ನೋಡಿಕೊಳ್ಳಿರಿ. ಇವೆಲ್ಲವೂ ನಿಮ್ಮಂತೆಯೇ ಇರುವ ವರ್ಗಗಳು.
**(ಪವಿತ್ರ ಖುರ್‌ಆನ್, 6: 38)**

"ಮಾನವರಂತೆಯೇ ಪ್ರಾಣಿಗಳೂ ದಯೆ ಕರುಣೆಗೆ ಅರ್ಹವಾಗಿವೆ. ದಯೆ ತೋರದವನ ಮೇಲೆ ಪರಮ ದಯಾಮಯನು ದಯೆ ತೋರುವುದಿಲ್ಲ, ಯಾರಿಗೆ ಮೃದುತ್ವ ಲಭಿಸಿತೋ ಅವನಿಗೆ ಇಹ-ಪರಲೋಕಗಳ ಒಳಿತಿನ ಒಂದಂಶ ಸಿಕ್ಕಿತು."
**(ಪ್ರವಾದಿವಚನ ಅಹ್ಮದ್, ಅಬೂದಾವೂದ್, ತಿರ್ಮಿದಿ, ಹಾಕಿಮ್)**

ಪ್ರಾಣಿಗಳ ಮೇಲೆ ದಯೆಯು ಮಾನವನನ್ನು ಸ್ವರ್ಗಕ್ಕೆ ಅರ್ಹನನ್ನಾಗಿ ಮಾಡುತ್ತದೆ. ಪ್ರವಾದಿ(ಸ) ಹೇಳಿದರು- ಒಮ್ಮೆ ಒಬ್ಬ ವ್ಯಕ್ತಿ ಎಲ್ಲಿಗೋ ಹೋಗುತ್ತಿದ್ದನು. ಆತನಿಗೆ ಬಹಳ ಬಾಯಾರಿಕೆಯಾಗಿತ್ತು. ಅವನಿಗೊಂದು ಬಾವಿ ಕಾಣಿಸಿತು. ಆತ ಅದರೊಳಗಿಳಿದು ನೀರು ಕುಡಿದು ಹೊರಗೆ ಬಂದಾಗ, ಒಂದು ನಾಯಿಯು ತೀವ್ರ ಬಾಯಾರಿಕೆಯಿಂದಾಗಿ ನೆಲವನ್ನು ನೆಕ್ಕುತ್ತಿತ್ತು. ಆತನಲ್ಲಿ ಕರುಣೆ ಉಕ್ಕಿ ಹರಿಯಿತು. ಆತ ಪುನಃ ಬಾವಿಗಿಳಿದು ತನ್ನ ಪಾದರಕ್ಷೆಯಲ್ಲಿ ನೀರು ತುಂಬಿ ಬಾಯಲ್ಲಿ ಕಚ್ಚಿಕೊಂಡು ಹೊರಬಂದು ನಾಯಿಗೆ ಕುಡಿಸಿದ. ಅಲ್ಲಾಹನು ಅವನ ಈ ಸತ್ಕರ್ಮಕ್ಕಾಗಿ ಅವನಿಗೆ ಕ್ಷಮೆ ನೀಡಿದನು. ಆಗ ಸಹಾಬಿಗಳು ಕೇಳಿದರು- ಪ್ರವಾದಿಯವರೇ! ಜಾನುವಾರುಗಳೊಂದಿಗೆ ಸದ್ವರ್ತನೆ ತೋರಿದರೂ ಪುಣ್ಯ ಲಭಿಸುವುದೇ? ಪ್ರವಾದಿ(ಸ) ಪ್ರತಿಯೊಂದು ಹೃದಯವಿರುವ ಮತ್ತು ಮೇವು ತಿನ್ನುವ ಪ್ರಾಣಿಯೊಂದಿಗೆ ಸದ್ವರ್ತನೆ ತೋರಿದರೂ ಅದಕ್ಕೆ ಪುಣ್ಯವಿರುವುದು. **(ಅಹ್ಮದ್, ಅಬೂದಾವೂದ್)**

ಇದಕ್ಕೆ ವ್ಯತಿರಿಕ್ತವಾಗಿ ಪ್ರಾಣಿಗಳೊಂದಿಗೆ ಕಠಿಣವಾಗಿ ವರ್ತಿಸಿದುದಕ್ಕೆ ಮನುಷ್ಯ ನರಕಕ್ಕೂ ಹೋಗಬಲ್ಲನು.

ಪ್ರವಾದಿ(ಸ) ಹೇಳಿದರು- "ಒಬ್ಬ ಮಹಿಳೆ ಒಂದು ಬೆಕ್ಕನ್ನು ಕಟ್ಟಿ ಹಾಕಿದಳು. ಅದಕ್ಕೆ ತಿನ್ನಲು ಏನೂ ಕೊಡಲಿಲ್ಲ, ಅದು ಸ್ವತಂತ್ರವಾಗಿ ಜೀವ ಜಂತುಗಳನ್ನು ತಿನ್ನಲೆಂದು ಅದನ್ನು ಬಿಡಲೂ ಇಲ್ಲ, ಈ ಕಾರಣಕ್ಕಾಗಿ ಆಕೆ ನರಕಕ್ಕೆ ಪ್ರವೇಶಿಸಬೇಕಾಯಿತು." **(ಬುಖಾರಿ)**

ಪ್ರಾಣಿ ದಯೆಯ ಪಾಠ ಮಾತ್ರ ನೀಡಿದುದಲ್ಲ, ಬದಲಾಗಿ ಅದಕ್ಕಾಗಿ ಕಾನೂನನ್ನು ರಚಿಸಲಾಯಿತು. ಯಾರೂ ಸವಾರಿಗಳ ಮೇಲೆ ಕುಳಿತುಕೊಂಡು ಯಾರೊಂದಿಗಾದರೂ ಮಾತಾಡಲು ಅದನ್ನು ಹೆಚ್ಚು ಹೊತ್ತು ನಿಲ್ಲಿಸಬಾರದೆಂದು ವಿಧಿಸಲಾಯಿತು. ಪ್ರವಾದಿಗಳು(ಸ) ಹೇಳಿದರು-"ನಿಮ್ಮ ಜಾನುವಾರುಗಳನ್ನು ಕುರ್ಚಿಯಾಗಿ ಬಳಸದಿರಿ."**(ಅಹ್ಮದ್, ಹಾಕಿಮ್)**

ಅದೇ ರೀತಿ ಜಾನುವಾರುಗಳಿಗೆ ಮೇವು ನೀಡದೆ ಹಸಿವಿನಿಂದಿರಿಸುವುದು ಮತ್ತು ಅದನ್ನು ಬಡಕಲಾಗಿಸುವುದು ಎಲ್ಲವನ್ನೂ ನಿಷೇಧಿಸಲಾಯಿತು. ಒಮ್ಮೆ ಪ್ರವಾದಿ(ಸ)

ನಡೆದು ಕೊಂಡು ಹೋಗುವಾಗ (ಹಸಿವಿನಿಂದ) ಹೊಟ್ಟೆ ಬೆನ್ನಿಗೆ ತಾಗಿದ ಒಂದು ಒಂಟೆಯನ್ನು ಕಂಡು ಅದರ ಮಾಲಿಕನೊಂದಿಗೆ ಹೇಳಿದರು- "ಈ ಜಾನುವಾರುಗಳ ಬಗ್ಗೆ ಅಲ್ಲಾಹನ ಭಯವಿರಿಸಿರಿ. ಸವಾರಿಗೆ ಅರ್ಹವಾಗಿರುವಾಗ ಅದರಲ್ಲಿ ಸವಾರಿ ಮಾಡಿರಿ ಮತ್ತು ಚೆನ್ನಾಗಿರುವ ಸ್ಥಿತಿಯಲ್ಲಿ ಅದನ್ನು ಬಿಟ್ಟು ಬಿಡಿರಿ." (ಅಬೂದಾವೂದ್)

ಪ್ರವಾದಿ(ಸ) ಒಮ್ಮೆ ಓರ್ವ ಅನ್ಸಾರಿಯ ತೋಟಕ್ಕೆ ಹೋದರು. ಅಲ್ಲೊಂದು ಒಂಟೆ ಪ್ರವಾದಿಯವರನ್ನು ಕಂಡಾಗ ಕೆನೆಯಿತು. ಅದರ ಕಣ್ಣುಗಳಿಂದ ಅಶ್ರುಧಾರೆಯಿಳಿಯಿತು. ಪ್ರವಾದಿ(ಸ) ಅದರ ಬಳಿಗೆ ಹೋಗಿ ಅದರ ಕಣ್ಣೀರನ್ನು ಒರೆಸಿದರು. ತರುವಾಯ ಈ ಒಂಟೆ ಯಾರದೆಂದು ಕೇಳಿದರು. ಅದರ ಮಾಲಿಕ 'ನನ್ನದು ಪ್ರವಾದಿಯವರೇ!' ಎಂದು ಹೇಳಿದಾಗ ಅವರೊಂದಿಗೆ ಹೇಳಿದರು- "ನಿಮ್ಮ ಅಧೀನಕ್ಕೆ ಅಲ್ಲಾಹನು ಕೊಟ್ಟಿರುವ ಈ ಪ್ರಾಣಿಯ ಬಗ್ಗೆ ನಿಮಗೆ ಅಲ್ಲಾಹನ ಭಯವಿಲ್ಲವೆ? ನೀವು ಅದರಿಂದ ಸೇವೆ ಮಾಡಿಸುತ್ತೀರಿ. ಆದರೆ ಮೇವು ಸರಿಯಾಗಿ ನೀಡುತ್ತಿಲ್ಲವೆಂದು ಅದು ನನ್ನೊಂದಿಗೆ ದೂರು ಹೇಳುತ್ತಿದೆ." (ಅಹ್ಮದ್)

ಅನಗತ್ಯವಾಗಿ ಬೇಟೆಯಾಡುವುದನ್ನೂ ನಿಷೇಧಿಸಲಾಯಿತು. ಪ್ರವಾದಿ(ಸ) ಹೇಳಿದರು- "ಯಾರಾದರೂ ಒಂದು ಪಕ್ಷಿಯನ್ನಾದರೂ ಮೋಜಿಗಾಗಿ ಕೊಂದರೆ ನಾಳೆ ಪರಲೋಕದಲ್ಲಿ ಅದು ದೇವನ ಮುಂದೆ, ಓ ಅಲ್ಲಾಹ್ ಈತನು ನನ್ನನ್ನು ವಿನೋದಕ್ಕಾಗಿ ಕೊಂದಿದ್ದಾನೆ. ಯಾವುದೇ ಪ್ರಯೋಜನಕ್ಕಾಗಿ ಅಲ್ಲ ಎಂದು ದೂರಿಕೊಳ್ಳುವುದು."

(ನಸಾಈ, ಇಬ್ನು ಹಿಬ್ಬಾನ್)

ಯಾವುದೇ ಪ್ರಾಣಿಯನ್ನು ಗುರಿಯಾಗಿಟ್ಟು ಹೊಡೆಯಬಾರದು. ಪ್ರವಾದಿ(ಸ) ಹೇಳಿದರು-"ಜೀವವಿರುವ ಪ್ರಾಣಿಯನ್ನು ಗುರಿಯಾಗಿಟ್ಟು ಹೊಡೆಯುವವನ ಮೇಲೆ ಶಾಪವಿರಲಿ." (ಬುಖಾರಿ, ಮುಸ್ಲಿಮ್)

ಪ್ರಾಣಿಗಳನ್ನು ಪರಸ್ಪರ ಹೊಡೆದಾಡಿಸುವುದನ್ನು* ಪ್ರವಾದಿ(ಸ) ನಿಷೇಧಿಸಿದ್ದಾರೆ. ಅದೇ ರೀತಿ ಪ್ರಾಣಿಗಳ ಮುಖವನ್ನು ಸುಟ್ಟು, ಗಾಯಗಳಿಂದ ವಿರೂಪಗೊಳಿಸುವುದು ಅಥವಾ ಕಾದ ಸಲಾಕೆಯಿಂದ ಗಾಯಗೊಳಿಸುವುದನ್ನೂ ನಿಷೇಧಿಸಿದ್ದಾರೆ. ಪ್ರವಾದಿ(ಸ) ನಡೆಯುತ್ತಿದ್ದಾಗ ಒಂದು ಕತ್ತೆಯನ್ನು ನೋಡಿದರು, ಅದರ ಮುಖದಲ್ಲಿ ಸುಟ್ಟ ಗಾಯಗಳಿದ್ದುವು. ಪ್ರವಾದಿ(ಸ) ಹೇಳಿದರು- "ಈ ಕೃತ್ಯ ನಡೆಸಿದವನ ಮೇಲೆ ಅಲ್ಲಾಹನ ಶಾಪವಿರಲಿ. ತಿನ್ನುವ ಪ್ರಾಣಿಗಳ ಮೇಲೆ ಕರುಣೆ ತೋರಬೇಕು. ಅದನ್ನು ಕೊಯ್ಯುವಾಗ ಕತ್ತಿಯನ್ನು ಚೆನ್ನಾಗಿ ಹರಿತಗೊಳಿಸಬೇಕು. ಅದಕ್ಕೆ ನೀರು ಕುಡಿಸಬೇಕು. ಅದರ ಚರ್ಮ ಸುಲಿಯುವುದಕ್ಕಿಂತ ಮುಂಚೆ ಅದನ್ನು ತಣ್ಣಗಾಗಲು ಬಿಡಬೇಕು."

*ಕೋಳಿ, ಟಗರು ಇತ್ಯಾದಿಗಳ ಕಾಳಗ.

ಪ್ರವಾದಿ(ಸ) ಹೀಗೂ ಹೇಳಿದ್ದಾರೆ- "ಪ್ರತಿಯೊಂದು ವಸ್ತುವಿನ ಮೇಲೂ ಔದಾರ್ಯ ತೋರಬೇಕು. ಆದ್ದರಿಂದ ಯಾರನ್ನಾದರೂ ವಧಿಸುವಾಗ ಉತ್ತಮ ರೀತಿಯಲ್ಲಿ ವಧಿಸಿರಿ. (ಇದು ವಧೆ ಶಿಕ್ಷೆ ನೀಡಲ್ಪಟ್ಟಾಗ) ಪ್ರಾಣಿ ಕೊಯ್ಯುವಾಗ ಉತ್ತಮ ರೀತಿಯಲ್ಲಿ ಕೊಯ್ಯಿರಿ. ದಿಬಹ್ ಮಾಡುವವನು ಕತ್ತಿಯನ್ನು ಚೆನ್ನಾಗಿ ಹರಿತಗೊಳಿಸಲಿ. ಮತ್ತು ಕೊಯ್ದು ಜಾನುವಾರನ್ನು ತಣ್ಣಗಾಗಲು ಬಿಡಲಿ. (ಮುಸ್ಲಿಮ್)

ದಿಬಹ್ ಮಾಡುವುದಕ್ಕೆ ಮುಂಚೆಯೇ ಪ್ರಾಣಿಯನ್ನು ಕೆಳಗೆ ಬೀಳಿಸುವುದು ಅತ್ಯಂತ ಕಠೋರ ಮತ್ತು ನಿಷ್ಕರುಣೆಯಾಗಿದೆ. ಒಮ್ಮೆ ಒಬ್ಬನು ಒಂದು ಕುರಿಯನ್ನು ಕೆಳಗೆ ಬೀಳಿಸಿ ಕತ್ತಿ ಮಸೆಯುತ್ತಿದ್ದನು. ಪ್ರವಾದಿ(ಸ) ಹೇಳಿದರು- ಸಾಯುವ ಮೊದಲೇ ನೀನು ಅದನ್ನು ಕೊಲ್ಲುವೆಯಾ? ನೀನೇಕೆ ಮೊದಲೇ ಕತ್ತಿಯನ್ನು ಹರಿತಗೊಳಿಸಲಿಲ್ಲ?

ಈ ನಿಟ್ಟಿನಲ್ಲಿ ಪ್ರಾಣಿಗಳೊಂದಿಗೆ ಕರುಣೆ ತೋರುವುದರ ಒಂದು ಘಟನೆ ಹೀಗಿದೆ- ಅಬ್ದುಲ್ಲಾಹಿಬುನು ಮಸ್‌ವೂದ್(ರ) ಹೇಳುತ್ತಾರೆ: ನಾವು ಒಂದು ಪ್ರಯಾಣದಲ್ಲಿದ್ದೆವು. ಒಂದು ಕಡೆ ಎರಡು ಮರಿಗಳ ಜೊತೆ ಒಂದು ಗುಬ್ಬಚ್ಚಿಯನ್ನು ನೋಡಿದೆವು. ನಾವು ಮರಿಗಳನ್ನು ಹಿಡಿದೆವು. ಆಗ ಆ ತಾಯಿ ಪಕ್ಷಿ ಚೀರಾಡುತ್ತಾ ನಮ್ಮ ತಲೆಗಳ ಮೇಲೆ ಹಾರಾಡತೊಡಗಿತು. ಪ್ರವಾದಿ(ಸ) ನಮ್ಮ ಬಳಿ ಬಂದು, ಮರಿಗಳನ್ನು ಹಿಡಿದು ಅದರ ತಾಯಿಗೆ ದುಃಖ ಕೊಟ್ಟವರು ಯಾರೆಂದು ಪ್ರಶ್ನಿಸಿ, ಮರಿಗಳನ್ನು ಅದರ ಬಳಿ ಬಿಟ್ಟು ಬರುವಂತೆ ಆದೇಶಿಸಿದರು.

ಅದೇ ಪ್ರಯಾಣದಲ್ಲಿ ಒಂದೆಡೆ ಇರುವೆಗಳ ಬಿಲಗಳನ್ನು ಸುಟ್ಟಿರುವುದು ಪ್ರವಾದಿಯವರ(ಸ) ಗಮನಕ್ಕೆ ಬಂತು. ಪ್ರವಾದಿ(ಸ) ಇದು ಯಾರ ಕೃತ್ಯವೆಂದು ಕೇಳಿದರು. ನಾವು ನಾವೆಂದು ಹೇಳಿದಾಗ ಪ್ರವಾದಿ(ಸ) ಹೇಳಿದರು-ಅಲ್ಲಾಹನ ಹೊರತು ಯಾರಿಗೂ ಬೆಂಕಿಯ ಶಿಕ್ಷೆಯನ್ನು ನೀಡುವ ಅಧಿಕಾರವಿಲ್ಲ. ಇವೆಲ್ಲ ಇಸ್ಲಾಮೀ ಸಂಸ್ಕೃತಿಯ ಉಜ್ವಲ ಮುಖವನ್ನು ಅನಾವರಣ ಗೊಳಿಸುವ ಘಟನೆಗಳಾಗಿವೆ.

ಒಬ್ಬ ವ್ಯಕ್ತಿ ಒಂದು ಆಡನ್ನು ದಿಬಹ್ ಮಾಡಲಿಕ್ಕಾಗಿ ಅದರ ಕಾಲು ಹಿಡಿದು ಎಳೆದುಕೊಂಡು ಹೋಗುವುದನ್ನು ಉಮರ್(ರ) ಕಂಡರು. ಅವರು ಆತನೊಂದಿಗೆ, "ನೀನು ಹಾಳಾಗಿ ಹೋಗು. ಮೃತ್ಯುವಿನ ಕಡೆಗೆ ಕೊಂಡು ಹೋಗುವಾಗಲೂ ನೀನು ಅದನ್ನು ಉತ್ತಮ ರೀತಿಯಲ್ಲಿ ಕೊಂಡು ಹೋಗು" ಎಂದು ಹೇಳಿದರು.

ದ್ವಿತೀಯ ಉಮರ್ ಎಂದೇ ಪ್ರಖ್ಯಾತರಾಗಿರುವ ಉಮರುಬುನು ಅಬ್ದುಲ್ ಅಝೀಝ್ ಖಲೀಫರಾಗಿದ್ದಾಗ ತಮ್ಮ ಸಾಮ್ರಾಜ್ಯದ ರಾಜ್ಯಪಾಲರುಗಳಿಗೆ ಈ ರೀತಿ ಆದೇಶ ಹೊರಡಿಸಿದ್ದರು- ಕುದುರೆಗಳಿಗೆ ವೃಥಾ ಹೊಡೆಯಬಾರದೆಂದು ಜನರಿಗೆ ಆಜ್ಞಾಪಿಸಬೇಕು. ಗಸ್ತು ಪೊಲೀಸರಿಗೆ ಅವರು ಹೀಗೆ ಬರೆದರು- ಕುದುರೆಗೆ ಭಾರೀ ಗಾತ್ರದ ಕಡಿವಾಣ ಹಾಕಬಾರದು. ತುದಿಯಲ್ಲಿ ಲೋಹ ಹಾಕಿರುವ ಕೊರಡೆಗಳನ್ನು

ಉಪಯೋಗಿಸಬಾರದೆಂದು ಜನರಿಗೆ ಆದೇಶಿಸಬೇಕು. ಜಾನುವಾರುಗಳಿಗೆ ಹೊರಲು ಸಾಧ್ಯವಿಲ್ಲದಷ್ಟು ಹೊರೆ ಹೇರ ಬಾರದು. ವೃಥಾ ಅವುಗಳಿಗೆ ಹೊಡೆಯಬಾರದು. ಪ್ರಯಾಣದಲ್ಲಿ ಲೆಕ್ಕಕ್ಕಿಂತ ಹೆಚ್ಚು ಹೊಡೆಯಬಾರದೆಂದೂ ಆಜ್ಞಾಪಿಸಬೇಕು. ಇದನ್ನು ಉಲ್ಲಂಘಿಸುವವರನ್ನು ಶಿಕ್ಷಿಸಬೇಕು.

ಬೇರಾವ ಸಂಸ್ಕೃತಿಗಳಲ್ಲೂ ಇಲ್ಲದ ಪ್ರಾಣಿಗಳೊಂದಿಗೆ ದಯೆ-ಕರುಣೆಯ ವರ್ತನೆಯ ಇಸ್ಲಾಮೀ ಮಾದರಿಯಿದು. ಇಸ್ಲಾಮಿನ ಸಾಮ್ರಾಜ್ಯದೊಳಗೆ ಮುದಿ ಮತ್ತು ಉಪಯೋಗ ಶೂನ್ಯ ಪ್ರಾಣಿಗಳನ್ನು ಸಾಕಲಿಕ್ಕಾಗಿ ದೊಡ್ಡ ದೊಡ್ಡ ಜಾಗೀರುಗಳನ್ನು ವಕ್ಫ್ ಮಾಡಿರುವುದು ಪುರಾತನ ವಕ್ಫ್ ದಾಖಲೆಗಳಲ್ಲಿ ಕಂಡು ಬರುತ್ತವೆ. ಈ ರೀತಿ ಅವುಗಳ ರಕ್ಷಣೆ ಮತ್ತು ಆಹಾರದ ಬಗ್ಗೆ ಮುಸ್ಲಿಮರಲ್ಲಿದ್ದ ಕಾಳಜಿ ಮತ್ತು ಕಳಕಳಿ ಇಸ್ಲಾಮೀ ಸಂಸ್ಕೃತಿಯ ಕೊಡುಗೆಯಾಗಿದೆಯೆಂದು ಹೇಳಬಹುದು.

## ಉಪಸಂಹಾರ

ಸೃಷ್ಟಿಕರ್ತನಾದ ದೇವನು ತನ್ನ ಪ್ರವಾದಿಗಳ ಮೂಲಕ ಮಾನವ ಕುಲಕ್ಕೊಂದು ಜೀವನ ಸಂಹಿತೆಯನ್ನು ಕೊಟ್ಟು ಕಳಿಸಿದ್ದಾನೆ. ಅದುವೇ ಇಸ್ಲಾಮ್ ಧರ್ಮ. ಇಸ್ಲಾಮ್ ಎಂದರೆ ದೇವನಿಗೆ ಸಂಪೂರ್ಣ ಶರಣಾಗುವುದು. ಇದು ಎಲ್ಲ ಕಾಲಗಳಲ್ಲೂ ಒಂದೇ ಆಗಿದೆ. ಈ ಧರ್ಮದಿಂದ ಜನರು ವ್ಯತಿಚಲಿಸಿದಾಗಲೆಲ್ಲ ದೇವನು ತನ್ನ ಪ್ರವಾದಿಗಳನ್ನು ಕಳಿಸಿ, ಆದರತ್ತ ಕರೆಯುವ ಏರ್ಪಾಡು ಮಾಡಿದನು. ಅಂತಿಮವಾಗಿ ಪ್ರವಾದಿ ಮುಹಮ್ಮದ್ ರನ್ನು(ಸ) ಈ ಕಾರ್ಯಕ್ಕಾಗಿ ಸಕಲ ಲೋಕದವರ ಮಾರ್ಗದರ್ಶಕರಾಗಿ ಕಳಿಸಿದನು. ಪ್ರವಾದಿ ಮುಹಮ್ಮದ್(ಸ) ಸಕಲ ಜನರಿಗಾಗಿ ಲೋಕಾಂತ್ಯದ ವರೆಗೆ ಮಾರ್ಗದರ್ಶಕರಾಗಿದ್ದಾರೆ. ಅವರೊಂದಿಗೆ ಧರ್ಮವನ್ನು ಪರಿಪೂರ್ಣಗೊಳಿಸಲಾಗಿದೆ. ಪ್ರವಾದಿ(ಸ) ದೇವನ ಮಾರ್ಗದರ್ಶನದಂತೆ ಆದರ್ಶ ಸಮಾಜವನ್ನು ಕಟ್ಟಿ ಬೆಳೆಸಿದರು. ಅದರಂತೆ ಸಂಸ್ಕೃತಿ ಮತ್ತು ನಾಗರಿಕತೆ ಜಾರಿಗೆ ಬಂತು. ಅವರ ಕಾಲಾನಂತರ ಅವರ ಉತ್ತರಾಧಿಕಾರಿಗಳಾದ ಖಲೀಫರು ಈ ಅತ್ಯುತ್ತಮ ಸಂಸ್ಕೃತಿ ಮತ್ತು ಸಭ್ಯ ನಾಗರಿಕತೆಯನ್ನು ಉಳಿಸಿ ಬೆಳೆಸಿದರು. ಕ್ರಮೇಣ ಈ ಸಂಸ್ಕೃತಿಯು ಇಡೀ ಲೋಕವನ್ನು ವ್ಯಾಪಿಸಿತು.

ಆದರೆ ಮುಸ್ಲಿಮರ ಪತನದೊಂದಿಗೆ ಇಸ್ಲಾಮೀ ಸಂಸ್ಕೃತಿಯಲ್ಲೂ ಲೋಪದೋಷಗಳು, ಏರುಪೇರುಗಳು ಉಂಟಾದವು. ಆದರೆ ಸಂಪೂರ್ಣ ಅಳಿದು ಹೋಗಿಲ್ಲ, ಮುಸ್ಲಿಮರು ಇಂದಿಗೂ ಇಸ್ಲಾಮೀ ಸಂಸ್ಕೃತಿಯ ಅಳಿದುಳಿದ ಭಾಗಗಳನ್ನು ಬಿಗಿಯಾಗಿ ಹಿಡಿದಿದ್ದಾರೆ. ಅದರಿಂದಾಗಿಯೇ ಅವರ ಆಚಾರ-ವಿಚಾರಗಳು, ಆರಾಧನಾ ಕ್ರಮಗಳು, ಆಹಾರ ಸಂಪ್ರದಾಯಗಳು, ಅಭಿವಂದನಾ(ಸಲಾಮ್) ಶೈಲಿ ಹಾಗೂ ಅವರ ವಸ್ತ್ರ ಸಂಹಿತೆಗಳಲ್ಲಿ ದೇಶ, ಭಾಷೆ, ವರ್ಗ, ವರ್ಣಗಳ ವ್ಯತ್ಯಾಸವಿಲ್ಲದೆ ಲೋಕದಾದ್ಯಂತ ಏಕತೆಯನ್ನು

ಕಾಣಬಹುದು. ಜೊತೆಗೆ ದಯೆ, ಕರುಣೆ, ಅನುಕಂಪ, ಸಹಾನುಭೂತಿ, ಸೇವಾ ಮನೋಭಾವ, ದಾನಶೀಲತೆ ಇತ್ಯಾದಿಗಳಲ್ಲಿ ಇತರೆಲ್ಲ ಸಮುದಾಯಗಳಿಗಿಂತಲೂ ಭಿನ್ನರಾಗಿ ಕಾಣುತ್ತಿದ್ದಾರೆ. ಅದುವೇ ಈ ಸಂಸ್ಕೃತಿಯ ವೈಶಿಷ್ಟ್ಯ. ಇಸ್ಲಾಮೀ ನಾಗರಿಕತೆಯ ಬೆಳವಣಿಗೆಗೆ ರಾಜಕೀಯ ಶಕ್ತಿ ಅನಿವಾರ್ಯವಾಗಿದೆ. ಕಳೆದ ಒಂದೆರಡು ಶತಮಾನಗಳಿಂದ ಈ ರಂಗದಲ್ಲಿ ಮುಸ್ಲಿಮರಿಗೆ ಹಿನ್ನಡೆಯಾಗಿದ್ದರೂ ಇಪ್ಪತ್ತನೆಯ ಶತಮಾನದಲ್ಲಿ ಆರಂಭಗೊಂಡ ಇಸ್ಲಾಮೀ ಆಂದೋಲನಗಳು ಮುಸ್ಲಿಮರನ್ನು ಮರಳಿ ಅದರತ್ತ ಕರೆಯುವ ಹಾಗೂ ಅದಕ್ಕಾಗಿ ಹೋರಾಡುವ ಕಾರ್ಯವನ್ನು ಕೈಗೆತ್ತಿಕೊಂಡಿವೆ. ಅದರ ಫಲವಾಗಿಯೇ ಮುಸ್ಲಿಮ್ ರಾಷ್ಟ್ರಗಳಲ್ಲಿ ಬದಲಾವಣೆಯ ಬಿರುಗಾಳಿ ಎದ್ದಿದೆ. ಪಾಶ್ಚಾತ್ಯ ಮತ್ತು ಅನಿಸ್ಲಾಮಿಕ ರೀತಿ-ರಿವಾಜುಗಳನ್ನು ಹತ್ತಿಕ್ಕಿ ಅದರ ಸ್ಥಳದಲ್ಲಿ ಇಸ್ಲಾಮೀ ಸಂಸ್ಕೃತಿಯನ್ನು ಜಾರಿಗೊಳಿಸುವ ಕಾರ್ಯದಲ್ಲಿ ಆ ದೇಶಗಳ ಜನ ಸಾಮಾನ್ಯರೂ ಸಹಕರಿಸುತ್ತಿರುವುದು ಕಂಡು ಬರುತ್ತದೆ. ಆದ್ದರಿಂದ ಈ ಶತಮಾನವನ್ನು ಇಸ್ಲಾಮಿನ ಶತಮಾನವೆಂದು ಕರೆಯಬಹುದು.

---

## ಆಕರ ಗ್ರಂಥಗಳು

1) ಇಸ್ಲಾಮೀ ತಹ್ಝೀಬ್ ಔರ್ ಉಸ್ಕೆ ಉಸೂಲ್ ವ ಮುಬಾದೀ(ಉರ್ದು)- ಸೈಯದ್ ಮೌದೂದಿ(ರ)

2) ಇಸ್ಲಾಮೀ ತಹ್ಝೀಬ್ ಕೆ ಚಂದ್ ದರಖ್ಶೊಂ ಪೆಹ್ಲೂ- ಡಾ। ಮುಸ್ತಫ ಸ್ಸಬಾಈಯವರ مِنْ رَوَائِعِ حَضَارَتِنَا ಎಂಬ ಅರಬಿ ಗ್ರಂಥದ ಉರ್ದು ಅನುವಾದ.